


# ಪ್ರಬುದ್ಧ ಕರ್ಣಾಟಕ

ಚಿತ್ರಭಾನು ಸಂವತ್ಸರ] — ೯೪ — [ಕಾಮುನ ಸಂಚಿಕೆ






ಮೈಸೂರು :

ಮೈಸೂರು ವಿಶ್ವವಿದ್ಯಾನಿಲಯ

೧೯೪೩

ಸಂಪುಟ ೨೪] [ಸಂಚಿಕೆ ೪



ಶ್ರೀವರ್ಾ ಹಸೂಡಿ ವೆಂಕಟಶಾಸ್ತ್ರಿಗಳು



ಕಟ್ಟಡಕ್ಕೆ ಮುವ್ವತ್ತುಸಾವಿರ ರೂಪಾಯಿಗಳನ್ನು
ಕನ್ನಡದ ಅಭಿಮಾನಿಗಳು)

ನ್ನಡ ಸಾಹಿತ್ಯಪರಿಷತ್ತಿನ ಕೃಪೆಯಿಂದ

ಪ್ರಬುದ್ಧ
ಕರ್ಣಾಟಕ

ಚಿತ್ರಭಾನು ಸಂವತ್ಸರ — ೯೪ — ಕಾಮುನ ಸಂಚಿಕೆ

# ಬಾಲ್ಯ

ಎಳೆಯುತನದಲಿ ನಾನು ಎತ್ತ ತಿರುಗಿದರತ್ತ
ಜಗವೆ ಕಣ್ದೆರೆದಿತ್ತು ಮೋಹತೆಯ ಬೀರಿ;
ಹೊಳೆ, ಬಯಲು, ಗಿರಿ, ಕಾನು—ಎಲ್ಲ ಬಳಕೆಯ ನೋಟ—
ಸೊಗದಿ ಮೆರೆದುವು ಸುತ್ತ ಸಗ್ಗಸವಿದೋರಿ.
ಕನಸ ಸೊಗಸದು ಬಂದು ನನಸದಾಗಿಯೆ ನಿಂದು
ಕುಣಿಸುತಿದ್ದಿತು ಎನ್ನ ಮನಕೊಸಗೆ ತಂದು.
ಬನದೇವಿ ಕೈಬೀಸಿ ಕರೆದು ನಸುನಗೆ ಸೂಸಿ
ಬಿನದದಿಂದಾಡಿದಳು ಎನ್ನೊಡನೆಯಂದು.

ಕಾಣೆ, ಆದರದೇನೊ! ಸುತ್ತ ಕಣ್ಣಾನು ಸುಳಿಸೆ
ಮೊದಲ ಸವಿ ತೋರದಿದೆ ಎನ್ನ ಮನಕಿಂದು.
ತಾಣವಾವುದು ನನಗೆ ಮೊದಲು, ಹೊಳೆಬಳಿಯಲ್ಲಿ,
ಮುದವನೊದವಿಸುತಿತ್ತೊ, ಅದೆ—ಹೃದಯ ಬಂಧು!—

ಮುನ್ನಂತೆ ಹೊಳೆ ಜಾರಿ ಜೋಗುಳವ ಹಾಡಿರಲು
ಬೆಳೆದ ಮನಕಿಂದೇಸೊ ತಾ ಸೊಗಸದಿಹುದು.
ಬನ್ನಬಡುತಿಹ ಮನಕೆ ತಣ್ಪನೊಡರಿಸುತಿದ್ದ
ಬಳಿಯು ಈ ಮಳಲೊಟ್ಟು ಇಂದೇಕೊ ತಗದು.

ಮುನ್ನಂತೆ ಮಳೆಬಿಲ್ಲು ಕಾರಮುಗಿಲೊಡಲಲ್ಲಿ
ಬಣ್ಣಬಣ್ಣವ ಬಳಿದು ನಿಲ್ಲುವುದು ಮಣಿದು;
ಹೊನ್ನಕಿರಣದಿ ಮಿಂದ ರತ್ನರಸದಾ ಬುಗ್ಗೆ
ಮುನ್ನಂತೆ ಬೈಗಿನಲಿ ಚಿಮ್ಮುವುದು ನೆಗೆದು;
ರಂಗುರಂಗನು ಬೀರಿ ಕುಸುಮಗಳ ಪರಿಷತ್ತು
ಕಣ್ಗೆ ಹಬ್ಬವ ತಹುದು ದಳಗಳನು ತೆರೆದು;
ಭೃಂಗಬಳಗವು ಬಂಡನುಂಡು ಝೇಂಕರಿಸಿರಲು
ಸುಳಿಯುವುದು ತಣ್ಣೆಲರು ಮನಕಿಂಬನೆರೆದು.

ಬೆಂಗದಿರನುದಿಸುವನು ಕಮಲಿನಿಗೆ ಮೊಗದೆರೆದು
ಕುಮುದಿನಿಗೆ ಮೊಗಬಿಗಿದು ಬೆಳುಬೆಳಗಿನಲ್ಲಿ;
ತಂಗದಿರನೈತಹನು ಕುಮುದಿನಿಗೆ ಮೊಗದೆರೆದು
ಕಮಲಿನಿಗೆ ಮೊಗಬಿಗಿದು ಚೆಲುರಜನಿಯಲ್ಲಿ;
ದೂರದೂರದಿ ನೆಗೆವ ನೀರಬೀಳಿಂದಿಗುಂ
ಬೀರುತ್ತ ರಮ್ಯತೆಯು ಮುನ್ನಂತೆ ಮನಕೆ
ತೋರುತಿಹುದಾದರೂ ಏನೊ ಶೋಭೆಯದೊಂದು
ಹಾರಿಹುದು—ಇಂದಿರದೆ—ತಿರೆಯಿಂದ ದಿವಕೆ!

ಜಿ. ಎಸ್. ಶಾಮಣ್ಣ.

# ಗೀತಗೋವಿಂದ

ಪ್ರಪಂಚದ ಮುಕ್ಕಾಲುಪಾಲು ಕಾವ್ಯಗಳೆಲ್ಲಾ ಶೃಂಗಾರ ರಸವನ್ನು ಪ್ರತಿಪಾದಿಸುತ್ತವೆ. ಅವುಗಳಲ್ಲಿ ಗೀತಗೋವಿಂದವು ಒಂದು ಉತ್ತಮವಾದ ಕಾವ್ಯ—ಗೀತಕಾವ್ಯ. ಆಸೇತುಹಿಮಾಚಲ ಪರ್ಯಂತ ಈ ಗೀತಗಳು ಪ್ರಸಿದ್ಧವಾಗಿವೆ. ಕನ್ನಡ ನಾಡಿನಲ್ಲಿ ಜೈಮಿನಿಭಾರತವು ಹೇಗೆ ಜನಪ್ರಿಯವೋ ಹಾಗೆ ಇವು ಇಡೀ ಭರತವರ್ಷದಲ್ಲಿಯೇ ವಿದ್ವಾಂಸರ, ಕವಿಗಳ, ಗಮಕಿಗಳ ಚೇತೋಹಾರಿಯಾಗಿವೆ. ಪೂರ್ವದಲ್ಲಿ ಒಂದು ವಿದ್ವದ್ಗೋಷ್ಠಿ, ಒಂದು ಉತ್ಸವ, ಒಂದು ಹಬ್ಬ, ಹವ್ಯ-ಕವ್ಯಗಳೆಂದರೆ ಅದರ ಮುಖ್ಯ ಅಂಗವಾಗಿ ವಿನೋದವಿರುತ್ತಿತ್ತು. ನರ್ತನ, ಸಂಗೀತ, ಆಟಗಳು ವಿನೋದದಲ್ಲಿ ಮುಖ್ಯವಾದುವು. ಈಗ ನರ್ತನವು ಇಂತಹ ಸಂದರ್ಭಗಳಲ್ಲಿ ಮರೆಯಾಗಿದ್ದರೂ ಹಲವು ಶ್ರೀಮಂತರ ಮತ್ತು ಅರಸುಗಳ ಮನೆಗಳಲ್ಲಿ ನಡೆಯುವ ಮದುವೆಗಳಲ್ಲಿಯೂ ಕೆಲವೆಡೆಗಳಲ್ಲಿ ರಂಗುಹಬ್ಬದಲ್ಲಿಯೂ ಇದು ಅನೂಚಾನವಾಗಿ ನಡೆದುಕೊಂಡು ಬಂದಿರುವ ಪದ್ಧತಿ. ನರ್ತನದಲ್ಲಿ ಚೂರ್ಣಿಕೆಯನ್ನೋ ಅಷ್ಟಪದಿಯನ್ನೋ ಹಾಡುವ, ಅಭಿನಯಿಸುವ, ಅಭ್ಯಾಸ ಸಂಪ್ರದಾಯವಾಗಿ ಬಂದಿದೆ. ಈ ಅಷ್ಟಪದಿಗಳು ಗೀತಗೋವಿಂದದಿಂದ ಆರಿಸಿದವು.

ಭಕ್ತಾಗ್ರಣಿಗಳಲ್ಲಿ ಶ್ರೇಷ್ಠನಾದ ಜಯದೇವ ಕವಿಯಿಂದ ರಚಿತವಾದುದು ಈ ಕಾವ್ಯ. ಶ್ರೀಕೃಷ್ಣಜನ್ಮಖಂಡವೆಂಬ ಗ್ರಂಥದಿಂದ ಜಯದೇವ ಕವಿಯು ಪ್ರೇರಿತನಾಗಿ ಗೀತಗೋವಿಂದವನ್ನು ರಚಿಸಿದನೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಇದು ಇನ್ನೂ ಇತ್ಯರ್ಥವಾಗಿಲ್ಲ. ಈ ಕಾವ್ಯವು ಸುಂದರವಾದ ಸೊಗಸಾದ, ಭಾವಗೀತವಾಗಿದೆ; ಇದನ್ನು ಓದಿ, ಕೇಳಿ, ಒಂದೆಡೆ ಗೀರ್ವಾಣಶಬ್ದ ಭಾಂಡಾಗಾರದ ಮೃದುಪದ ರಚನೆ ಕವಿಚಮತ್ಕಾರ ಅಲಂಕಾರ ಸರಣಿ ಇವುಗಳಿಗೆ ತಲೆದೂಗಿ ಭಲೆ ಎಂದು ರಸಿಕರು ನಲಿದರೆ, ಇನ್ನೊಂದು ಕಡೆ ಲೀಲಾಮಾನುಷ ವಿಗ್ರಹನಾದ ಶ್ರೀ ಕೃಷ್ಣಪರಮಾತ್ಮನು ಮೆರೆದ ಲೀಲೆಗಳನ್ನು ನೆನೆದು ಕಣ್ಣೀರುಮಿಡಿದು ಆನಂದದಿಂದ ಸಾಮಾನ್ಯ ಜನರು ಮೈಮರೆಯುತ್ತಾರೆ. ಶೃಂಗಾರಶೇಖರನಿಂದ ಹಿಡಿದು ವೇದಾಂತಕೇಸರಿಯ ವರೆಗೆ ಎಲ್ಲರಿಗೂ ಮೆಚ್ಚುಗೆಗೆ ಪಾತ್ರವಾದ ಇಂಥ ಗ್ರಂಥಗಳು ಸಂಸ್ಕೃತದಲ್ಲಿ ಅಪರೂಪ.

"ಕೃಷ್ಣನು ರಾಧೆಯನ್ನು ಬಿಟ್ಟು ಹೊರಟುಹೋಗಿದ್ದಾನೆ. ಇರುವಂತಿಗೆಯಂತೆ ಸುಕುಮಾರಿಯಾದ ರಾಧೆಯು ವಿರಹದಿಂದ ತಪ್ತಳಾಗಿ ವಸಂತ ಋತುವಿನಲ್ಲಿ ವನದಲ್ಲಿ

ಸಂಚರಿಸುತ್ತಿದ್ದಾಳೆ. ಬರಬರುತ್ತಾ ಅವಳಿಗೆ ಅಗಲಿಕೆಯ ನೋವು ಹೆಚ್ಚುತ್ತಿದೆ. ವ್ಯಥೆಪಡುತ್ತಿರುವ ಆಕೆಯನ್ನು ಸಖಿಯು ಸಮಾಧಾನಪಡಿಸುತ್ತ ಹೀಗೆ ಹೇಳುತ್ತಾಳೆ: 'ಲಲಿತ ಲವಂಗ ಲತೆಗಳ ಸ್ಪರ್ಶದಿಂದ ಕೋಮಲವಾದ ಮಲಯಾನಿಲವು ಬೀಸುತ್ತಿದೆ. ದುಂಬಿಗಳ ಝೇಂಕಾರದಿಂದ, ಕೋಗಿಲೆಗಳ ಕೂಜನದಿಂದ, ತುಂಬಿದ ಬಳ್ಳಿಮಾಡಗಳಿವು. ಮಾರ್ಗದಲ್ಲಿರುವ ಪಗಡೆ ಮರಗಳು ಹೂಗೊಂಚಲುಗಳಿಂದ ಅಳಿಗಳು ಮೊರೆಯುತ್ತಿರಲು ಪ್ರಲಾಪಿಸುವ ವಧೂಜನದಂತಿವೆ. ನಾಗಕೇಸರ ಪಾಟಲೀ ಸುಮಗಳು ಕುಸುಮ-ಶರಗಳು. ಹೊಂಗೆಯ ಎಳೆದಳಿರೂ ಮುತ್ತುಗದ ಹೂವೂ ಯುವತಿಯರ ಹೃದಯವನ್ನು ಸೀಳುತ್ತಿವೆ. ತುಂಬುಮೊಗ್ಗಿನಿಂದ ಮಾಧವೀಲತೆಯು ಚೂತವೃಕ್ಷವನ್ನು ಆಲಂಗಿಸಿಕೊಂಡಿರುವುದು. ಯಮುನಾ ನದಿಯ ನೀರಿನಿಂದ ಪವಿತ್ರವಾದ ಬೃಂದಾವನದಲ್ಲಿ ಗೋಪಿಯರೊಡನೆ ಈ ವಸಂತದಲ್ಲಿ ಕೃಷ್ಣನು ಕ್ರೀಡಿಸುತ್ತಿರಬಹುದು.' ರಾಧೆಯು ಸಖಿಯ ಕೈಯನ್ನು ಹಿಡಿದು ಮುಂದೆ ನಡೆಯುತ್ತಾಳೆ. ಗೋಪಿಯರೊಡನಿರುವ ಕೃಷ್ಣನನ್ನು ಅವರಿಬ್ಬರೂ ಕಾಣುತ್ತಾರೆ. ಆತನು ರಾಸಕ್ರೀಡಾಮಗ್ನನಾಗಿರುವನು. ಅಸೂಯೆಗೊಂಡು ರಾಧೆಯು ಒಂದು ಲತಾಕುಂಜದಲ್ಲಿ ಅಡಗಿಕೊಳ್ಳುವಳು. 'ಸಖಿ! ಕೃಷ್ಣನು ನನ್ನನ್ನು ಳಿದು ಆ ಗೋಪಿಯರಲ್ಲಿಯೇ ಮೋಹಗೊಂಡಿರುವನು; ಆದರೂ ನನ್ನ ಚಪಲಚಿತ್ತವು ಗುಣಗಣಿಯಾದ ಆ ಕೊಂಕಿದ ಶಿರದ ಮುರಳೀಧರನನ್ನೇ ಸ್ಮರಿಸುತ್ತಿದೆ. ಹೇಗಾದರೂ ಮಾಡಿ ಆತನನ್ನು ಸೇರುವಂತೆ ಮಾಡು' ಎನ್ನುತ್ತಾಳೆ. ಇತ್ತಲಾಗಿ ರಾಧೆಯ ನೆನಪು ಬಂದು ಮಾಧವನು ವ್ರಜ ಸುಂದರಿಯರನ್ನುಪೇಕ್ಷಿಸಿ ಆ ದೇವಿಯನ್ನು ಅಲ್ಲಿ ಇಲ್ಲಿ ಹುಡುಕುತ್ತಾನೆ. ಅವಳು ಎಲ್ಲಿಯೂ ಇಲ್ಲ. ಆದ್ದರಿಂದ ಕಾಳಿಂದೀನದಿಯ ದಡದಲ್ಲಿರುವ ಹೊದರಿನಲ್ಲಿ ತಲೆಯ ಮೇಲೆ ಕೈಯಿಟ್ಟು ಕುಳಿತುಬಿಡುತ್ತಾನೆ. ಮುಖದಲ್ಲಿ ಬೆವರು ಹನಿಗಳು! 'ಗೊಲ್ಲರ ಹುಡುಗಿಯರೊಡನೆ ವಿಹರಿಸುತ್ತಿದ್ದ ನನ್ನನ್ನು ಕಂಡು ರಾಧೆಯು ಮುನಿಸಿನಿಂದ ಹೊರಟುಹೋದಳು. ಅವಳಲ್ಲಿ ತಪ್ಪುಮಾಡಿದ ನಾನಾದರೂ ಅವಳನ್ನು ತಡೆಯಲಿಲ್ಲ. ಪುನಃ ವಿಪ್ರಯೋಗದಿಂದ ತಪ್ತಳಾದ ಆ ನನ್ನ ಪ್ರೇಯಸಿಯು ಇನ್ನು ನನಗೆ ಒಲಿಯುವಳೆ? ಇಲ್ಲ; ಇಲ್ಲ!' ಎನ್ನುತ್ತಿದ್ದಾನೆ. ಭಯಕಾತರನಾದ ಮಾಧವನು ಉನ್ಮತ್ತನಾಗಿರುವುದನ್ನು ತಿಳಿದು ಅಲ್ಲಿಗೆ ಬಂದ ರಾಧೆಯ ಸಖಿಯು ತನ್ನ ಕೆಳದಿಯು ಈ ವಸಂತ ಋತುವಿನಲ್ಲಿ ಅವನ ವಿರಹದಿಂದ ಬಹುಕಾಲ ಜೀವಿಸಿರಲಾರಳೆಂದೆನ್ನುವಳು. ರಾಧೆಯನ್ನು ಸಮಾಧಾನಪಡಿಸಿ ಅಲ್ಲಿಗೆ ಕರೆದುಕೊಂಡು ಬರಬೇಕೆಂದು ಕೃಷ್ಣನು ಬೇಡುವನು. ಅವಳು ಸುಮಕೋಮಲೆ; ಮನನೊಂದು ದೇಹ ಕುಂದಿದೆ. ಒಂದು ಹಜ್ಜೆಯನ್ನೂ ಮುಂದಿಡಲಾರಳು. ಕೃಷ್ಣನೇ ಇಲ್ಲಿಗೆ ಒಂದು ಹಜ್ಜೆ ಬರಬಾರದೇ

ಎಂಬುದು ಅವಳ ಸೂಚನೆ. ಕತ್ತಲೆ ಕಳೆದು ಚಂದ್ರೋದಯವಾಗಿದೆ. 'ಅಯ್ಯೋ! ನಾನು ಸಖಿಯ ಮಾತಿಗೆ ಮರುಳಾದೆ. ನೀನು ಏಕೆ ಅವನನ್ನು ಜತೆಯಲ್ಲಿ ಕರೆತರಲಿಲ್ಲ?' ಎನ್ನುವಳು ರಾಧೆ. ಎಲ್ಲೋ ಯಾವ ಸುಂದರಿಯ ಜತೆಗೋ ಹೋಗಿರುವನೆಂದೇ ಆ ಸಖಿಯರಿಬ್ಬರ ಊಹೆ—ಆ ಸುಂದರಿಯು ಪುಣ್ಯವಂತಳು. ಅಂತೂ ಇರುಳು ಕಳೆಯಿತು. ಬೆಳಗ್ಗೆ ಅತ್ಯಂತ ವಿಧೇಯನಾದ ಕೃಷ್ಣನು ರಾಧೆಗೆ ಮನಕರಗುವ ಮಾತು ಹೇಳಿದರೂ ಪ್ರಯೋಜನವೇನು? ಅಸೂಯೆಯಿಂದಲೂ ಕೋಪದಿಂದಲೂ ರಾಧೆಯು 'ಕೈತವದ ನುಡಿಗಳು ಸಾಕು! ನನ್ನ ಮುಂದೆ ನಿಲ್ಲಬೇಡ. ನಿನ್ನ ಪ್ರಿಯರಮಣಿಯನ್ನನು ಸರಿಸು ಹೋಗು. ನಿನ್ನನ್ನು ನೋಡಿದರೆ ನನಗೆ ನಾಚಿಕೆಯಾಗುತ್ತದೆ' ಎಂದು ನಿಂದಿಸುತ್ತಾಳೆ. ಕೃಷ್ಣನು ಆಗ ಹಿಂತಿರುಗುವನು. ಸಖಿಯು ತಾನಾಗಿ ಒಲಿದು ಬಂದಿರುವ ಸ್ವಾಮಿಯಲ್ಲಿ ಕೋಪಮಾಡಬೇಡವೆಂದು ಎಷ್ಟು ಹೇಳಿದರೂ ರಾಧೆ ಕೇಳುವುದಿಲ್ಲ. ಸಾಯಂಕಾಲವಾಗುತ್ತ ರಾಧೆಗೆ ಕಡುಕೋಪ! ನಿಡುಸುಯ್ಲು! ಆ ಪ್ರದೋಷವೇಳೆ ಕೃಷ್ಣನು ವಿವಿಧ ಅನುನಯಗಳಿಂದ ದೇವಿಯನ್ನು ಸಮಾಧಾನ ಪಡಿಸುವನು. ಸಖಿಯು ದೇವಿಯನ್ನು ಸಿಂಗರಿಸಿ ಬಳ್ಳಿಮನೆಗೆ ಕರತರಲು, ಬಾಗಿಲಿನಲ್ಲಿ ನಿಂದ ರಾಧೆಗೆ ನಾಚಿಕೆಯಾಗುವುದು. ಆಗ ಅವಳಿಗೆ ಕಿಂಚಿತ್ ಕಂಪನ; ಕೊಂಚ ಬೆಮರು; ಸ್ವಲ್ಪ ಕಣ್ಣೀರು. ಆನಂದಿತಳಾದ ರಾಧೆಯು ಒಳಕ್ಕೆ ಬರಲು ಹುಸಿನಗುವ ಕೆಳದಿಯರು ತಲೆ ಕೆರೆಯುತ್ತಾ ಹೊರಟುಹೋಗುವರು. ನಲ್ಲನಲ್ಲೆಯರು ಪ್ರೇಮ ಸಲ್ಲಾಪಗಳಲ್ಲಿ ಭಾಗಿಗಳಾಗುವರು''—ಇದಿಷ್ಟು ಕಾವ್ಯದಲ್ಲಿ ಹೇಳಿರುವುದು.

ಜಯದೇವನು ಅದೃಷ್ಟವಂತ. ಅವನಿಗೆ ಅನುಕೂಲಳಾದ ಹೆಂಡತಿ ಇದ್ದಳು. ದಾಂಪತ್ಯವು ಸುಖಮಯವಾಗಿತ್ತು. ಕವಿಯ ಜೀವನವೇ ಈ ಕಾವ್ಯದಲ್ಲಿ ಒಂದು ಚಿತ್ರವನ್ನು ತಾಳಿದೆ ಎಂದರೆ ತಪ್ಪಾಗದು.

ವಾಗ್ದೇವತಾಚರಿತಚಿತ್ರಿತಚಿತ್ತಸದ್ಮಾ
ಪದ್ಮಾವತೀಚರಣಚಾರಣಚಕ್ರವರ್ತೀ |
ಶ್ರೀ ವಾಸುದೇವರತಿಕೇಳಿಕಥಾಸಮೇತ
ಮೇತಂ ಕರೋತಿ ಜಯದೇವಕವಿಃ ಪ್ರಬಂಧಂ ||

ಈ ಮೇಲಣ ಶ್ಲೋಕದಿಂದ ಅದನ್ನು ಊಹಿಸಬಹುದು. ಸೌಂದರ್ಯವನ್ನು ಕಾಣುವ ಒಳಗಣ್ಣು, ಒಲುಮೆಯ ಸ್ವಾರ್ಥತ್ಯಾಗ, ದೈವಭಕ್ತಿ, ಲೀಲಾಜಾಲವಾಗಿ ಓಡುವ ಕಾವ್ಯ ಹೊನಲಿನ ಶಕ್ತಿ, ಇವೆಲ್ಲವೂ ಈ ಕವಿತಾಗುಚ್ಛದ ಗುಣಗಳು. ಹರಿ ಸ್ಮರಣೆಯಲ್ಲಿಯೂ ವಿಲಾಸಕಥೆಗಳಲ್ಲಿಯೂ ಮನಸ್ಸು ಕುತೂಹಲಪಟ್ಟರೆ ಆಗ ಮಧುರ ಕೋಮಲ ಕಾಂತ ಪದಾವಳಿಯ ಜಯದೇವ ಸರಸ್ವತಿಯನ್ನು ಕಾಣಬೇಕಂತೆ!

ಇಷ್ಟು ಸೊಗಸಾದ ಶುದ್ಧಾಂತಃಕರಣದಿಂದ ಹೊಮ್ಮಿದ ಪ್ರಣಯಗೀತೆಯು, ಕವಿಯು ತನ್ನ ಆರಾಧ್ಯಪ್ರೇಮ ದೇವತೆಗೆ ಕಾಣಿಕೆಯಾಗಿತ್ತ ಒಂದು ಅನರ್ಘ್ಯರತ್ನ.

ಕವಿಯ ವಿಷಯವಾಗಿ ಅನೇಕ ಕಥೆಗಳಿವೆ. ಅವುಗಳಲ್ಲಿ ಒಂದನ್ನು ಮುಂದೆ ಕೊಟ್ಟಿದೆ.—ಗೀತಗೋವಿಂದವು ಜನಾದರಣೀಯವಾಯಿತು. ಜಗನ್ನಾಥದ ಸಾತ್ವಿಕ ನೆಂಬ ದೊರೆ ರಸಿಕ; ಕವಿ; ಅವನಿಗೆ ಅಸೂಯೆ ಹುಟ್ಟಿತು. ಸರಿ, ತಾನೂ ಅಂಥ ಒಂದು ಶೃಂಗಾರ ಕಾವ್ಯವನ್ನು ರಚಿಸಿ "ಇದನ್ನು ಎಲ್ಲರೂ ಓದಬೇಕು, ಮೆಚ್ಚ ಬೇಕು" ಎಂದು ಕಟ್ಟುಮಾಡಿದನಂತೆ. ಕೆಲವು ವಿದ್ವಾಂಸರು ದೊರೆಯನ್ನು ಎದುರಿ ನಲ್ಲಿಯೇ ಹೀಯಾಳಿಸಿ ಅವನ ಕಾವ್ಯವನ್ನು ಧಿಕ್ಕರಿಸಿದರು. ಪ್ರತಿಯಾಗಿ ಜಯದೇವ ನನ್ನು ಹೊಗಳಿದರು. ಅವರವರ ಮನಸ್ತಾಪ ಒಂದು ತೀರ್ಮಾನಕ್ಕೆ ಬಂತು. ದೇವರ ಮನೆಯಲ್ಲಿ ಎರಡು ಗ್ರಂಥಗಳನ್ನೂ ರಾತ್ರಿ ಇಟ್ಟು ಬಾಗಿಲಿಗೆ ಮೊಹರು ಮಾಡಿದರು. ಇರುಳು ಕಳೆಯಿತು. ಬೆಳಗ್ಗೆ ದೊರೆಯ ಕಾವ್ಯ ಹೊರಗೆ ಬಿದ್ದಿತ್ತು. ದೊರೆಯ ಮುಖ ಚಿಕ್ಕದಾಯಿತು. ಜಯದೇವನಿಗೆ ಪ್ರೇರೇಪಿಸಿದ ದೇವರೇ ಅಲ್ಲವೇ ತನಗೂ ಬುದ್ಧಿಕೊಟ್ಟುದು ಎಂದು ಗರ್ವತೊರೆದು ಹಂಬಲಿಸಿದಾಗ, ಸಾತ್ವಿಕನಿಗೆ ಹರಿಯು ಪ್ರತ್ಯಕ್ಷನಾಗಿ ಅವನ ಕಾವ್ಯದಿಂದ ಇಪ್ಪತ್ತುನಾಲ್ಕು ಶ್ಲೋಕಗಳನ್ನು ತೆಗೆದು ಗೀತಗೋವಿಂದದಲ್ಲಿ ಬರೆದಿಟ್ಟನಂತೆ.

ಕವಿಯು ಮಂಗಳಾಚರಣೆಯನ್ನು ಮಾಡಿದನಂತರ ಒಮ್ಮೆಗೇ ಕಾವ್ಯವಾಹಿನಿ ಯನ್ನು ಹರಿಸಿಬಿಡುತ್ತಾನೆ.—

ವಸಂತೇ ವಾಸಂತೀಕುಸುಮಸುಕುಮಾರೈರವಯವೈ-
ರ್ಭ್ರಮಂತೀಂ ಕಾಂತಾರೇ ಬಹುವಿಹಿತಕೃಷ್ಣಾನುಸರಣಾಂ |
ಅಮಂದಂ ಕಂದರ್ಪಜ್ವರಜನಿತಚಿಂತಾಕುಲತಯಾ
ವಲದ್ಬಾಧಾಂ ರಾಧಾಂ ಸರಸಮಿದಮೂಚೇ ಸಹಚರೀ ||

ವಸಂತಋತು. ಸುಕುಮಾರ ಶರೀರೆಯಾದ ರಾಧೆಯು ಬೃಂದಾವನದಲ್ಲಿ ಕೃಷ್ಣನನ್ನು ಹುಡುಕುತ್ತಾ ತಿರುಗುತ್ತಿದ್ದಾಳೆ. ಕ್ಷಣಕ್ಷಣಕ್ಕೂ ಹೆಚ್ಚು ವ್ಯಥೆಯನ್ನನುಭವಿಸುತ್ತಿ ರುವ ರಾಧೆಯನ್ನು ಕುರಿತು ಸ್ನೇಹಿತೆ ಆದರದ ಮಾತಾಡುತ್ತಾಳೆ. ರಾಧೆಗೆ ಸ್ನೇಹಿ ತೆಯು ಏನು ಹೇಳಿದಳೆಂಬುದು ಮುಂದೆ ವಸಂತರಾಗದ ಒಂದು ಗೀತವಾಗಿದೆ. ಪದ್ಮಾವತಿಗೆ ತನ್ನ ಇನಿಯನ ಕೃತಿ ಅಚ್ಚುಮೆಚ್ಚು. ಪ್ರತಿದಿನವೂ ಪ್ರಭಾತದಲ್ಲೂ ರಾತ್ರಿಯಲ್ಲೂ ದೇವರಪೂಜೆ ಆದಮೇಲೆ ಪ್ರಾಯಶಃ ಸರದಿಯ ಪ್ರಕಾರ ಗಂಡನೋ ಹೆಂಡತಿಯೋ ನರ್ತಿಸಬೇಕು; ಮತ್ತೊಬ್ಬರು ತಂಬೂರಿ ಶ್ರುತಿ ಹಿಡಿದು ತಾಳ ಹಾಕುತ್ತಾ ಜತೆಗೆ ಹಾಡಬೇಕು. ಇಂಥ ಸುಖದ ದಿನಗಳೇ ಅವರ ಸಂಸಾರದಲ್ಲಿ

ಆನಂದದಿಂದ ನಡೆದುಹೋಗಿರಬೇಕೆಂದು ಊಹಿಸಬಹುದು. ಇಲ್ಲಿರುವ ಇಪ್ಪತ್ತು ನಾಲ್ಕು ಅಷ್ಟಪದಿಗಳೂ ಅಷ್ಟು ಬೇರೆ ಬೇರೆ ರಾಗಗಳಲ್ಲಿವೆ. ಮುಂದೆ ಮೊದಲ ಗೀತವನ್ನು ಕನ್ನಡದಲ್ಲಿ ಪರಿಚಯಮಾಡಿಕೊಟ್ಟಿದೆ. ಇದರಿಂದ ಆ ಗೀತಗಳ ಸೊಬಗನ್ನು ಕೊಂಚ ಮನನಮಾಡಬಹುದು.—

ವಿಹರಿಪ ಹರಿ ಈ ಸರಸ ವಸಂತದಿ ಯುವತಿಯರನು ಕೂಡಿ |
ಸಖಿ ! ವಿರಹಿಜನಕೆ ದುರಂತ ! ವಿಹರಿಪ ಹರಿ ಈ— || ಪಲ್ಲವಿ ||
ಲಲಿತ ಲವಂಗದ ಲತೆಗಳ ಸೋಂಕಿನ ಮಲಯ ಸಮೀರದಲಿ |
ಬಂಡುಣಿತಂಡವು ಎಸೆದಿರೆ ಕೋಗಿಲೆಪಾಡುವ ಕುಂಜಕುಟೀರದಲಿ || ೧ ||
ಮದನೋನ್ಮಾದ ಮನೋರಥಪಥಿಕರ ವಧುಗಳು ಪ್ರಲಪಿಸಲು |
ಪಗಡೆಯ ಮರಗಳ ಹೂಗೊಂಚಲುಗಳಲಿ ಅಳಿಕುಲ ನಲಿಯಲು || ೨ ||
ಅನಂಗರಾಜನ ದಂಡದೊಲು ಪೊರ್ಕೇಸರ ಸುಮವರಳೆ |
ಮಿಳಿತ ಪರಮೆಗಳ ಪಾದರಿಯಲರಿನ ಕಂತುತೂಣ ಮೆರೆಯೆ || ೩ ||
ಮೃಗದ ಸುರಭಿಗೆ ತೂಗುವ ತಳಿರೆಳಹೊಂಗೆಯ ತರುಗಳ್ |
ಹರೆಯದ ಹೃದಯವ ಸೀಳುವ ಮನ್ಮಥ-ನಖದೊಲು ಕಿಂಶುಕ ತರುಗಳ್ || ೪ ||
ಲಜ್ಜೆಯ ಕಳೆದಿಹ ಲೋಕವ ನೋಡುತ ನಗುವುವು ಕರುಣಲರುಗಳು |
ವಿರಹಿವಿಚ್ಛೇದನ ಕುಂತದೊಲೆಲ್ಲೆಡೆ ಇನೆ ತಾಳೆಯ ಮಲರುಗಳು || ೫ ||
ಮಾಧವಿ ಪರಿಮಳ ಪೊಸಮಲ್ಲಿಗೆ ಕಂಪೊಳು ಬೆರೆಯುತ ಬರಲು |
ಮುನಿಮನಸೂ ಸಹ ಮೋಹಿತವಾಗಲು ತರುಣರಕಾರಣ ಬಂಧು || ೬ ||
ಸ್ಫುರದತಿಮುಕ್ತಲತೆಯಾಲಿಂಗಿಸೆ ಮುಕುಳಿತ ಪುಳುಕಿತ ಮಾಮರವ |
ಬೃಂದಾವನ ವಿಪಿನಸಮೀಪದಿ ಪುಣ್ಯಯಮುನಾಜಲ ಸಾರುವ || ೭ ||

* * * * *

ಸಾವಧಾನದಿಂದ ಹರಿಯುವ ಯಮುನಾ ನದಿಯ ಪವಿತ್ರ ಜಲದಿಂದ ವಿಶುದ್ಧವಾದ ಬೃಂದಾವನ ವಿಪಿನ ! ರಾಧೆಯು ವಿರಹಿಣಿಯಾಗಿ ಅಲ್ಲಲ್ಲಿ ಪರ್ಯಟನ ಮಾಡುತ್ತಿದ್ದಾಳೆ ಕೃಷ್ಣನ ಅನ್ವೇಷಣೆಯಲ್ಲಿ. ವಕುಳ ಪುಷ್ಪಗಳಲ್ಲಿ, ಪಾದರಿ ಹೂವುಗಳಲ್ಲಿ, ದುಂಬಿಗಳು ತಂತಮ್ಮ ಪ್ರಿಯ ವಸ್ತುಗಳನ್ನು ಕಂಡು ನಲಿಯುತ್ತಿವೆ. ಹೊಂಗೇದಿಗೆಗಳು, ಕರುಣಸುಮಗಳು ಲಜ್ಜೆಯುಳಿದ ಸುಗ್ಗಿಯನ್ನು ಹಾಸ್ಯಮಾಡುತ್ತಿವೆ. ಮೊಗ್ಗುವಿಡಿದ ಮಾಮರವು ಅತಿಮುಕ್ತಲತೆಯ ಆಲಿಂಗನದಿಂದ ಪುಳಕಿತವಾಗಿದೆ. ಮಲ್ಲಿಗೆ ಮಾಧವಿ ಮೊದಲಾದವುಗಳ ಗಮಲು ಮುನಿಯ ಮನಸ್ಸನ್ನೂ ಚಲಿಸುವಂತಿದೆ. ಇಂಥ ವಿಶಾಲವಾದ ಅರಣ್ಯದಲ್ಲಿ ಎಲ್ಲಿಯೋ ಕೃಷ್ಣನು ಕ್ರೀಡಿಸುತ್ತಿರುವನೆಂದರೆ ಮನಸ್ಸಿಗೆ ಸಮಾಧಾನವಾಗುವುದಿಲ್ಲ. ಊಹೆಯ ಕಣ್ಣು ಅದನ್ನರಸಿಕೊಂಡು ಹೋಗಿ, ಭಾವಿಸಿ ತೃಪ್ತಿಪಡೆಯುವುದು. ಆಗತಾನೆ ಭಾವಗೀತೆಯ ಸಾರ್ಥಕತೆ. ಭಾವಿಸಿದ ಭಾವ

ಗೀತೆಯು ಮುಂದಿನ ಅಷ್ಟಪದಿಯೆಂಬುದರಲ್ಲಿ ಸಂದೇಹವಿಲ್ಲ. ರಾಧೆಯೂ ಸಖಿಯೂ ಅಲ್ಲಿ ಇಲ್ಲಿ ಹುಡುಕುತ್ತಾ ಒಂದೆಡೆ ಪ್ರತ್ಯಕ್ಷವಾಗಿ ತಮ್ಮ ಸ್ವಾಮಿಯನ್ನು ಕಾಣುತ್ತಾರೆ. ಮುಗ್ಧವಧೂನಿಕರದ ಮಧ್ಯೆ ಮದನಮೋಹನ ಶ್ಯಾಮಸುಂದರನು ತುಲಸೀ ಮಾಲೆಯನ್ನು ಧರಿಸಿ, ಪೀತಾಂಬರವನ್ನುಟ್ಟು, ರತ್ನಕುಂಡಲಮಂಡಿತನಾಗಿ ಮುಗುಳು ನಗೆ ನಗುತ್ತಿದ್ದಾನೆ. "ನೀಲ ಕಳೇಬರ ಪೀತವಸನ ವನಮಾಲೀ | ಕೇಳೀಚಲರ್ಲ ಮಣಿಕುಂಡಲಮಂಡಿತ ಗಂಡಯುಗ್ಮ ಸ್ಮಿತಶಾಲೀ" ಎಂಬ ಮಧುರವಾದ ಮಾತುಗಳಲ್ಲಿ ಇಷ್ಟು ಚಿತ್ರವನ್ನು ಕಟ್ಟಿದ್ದಾನೆ ಕವಿ. ಓರ್ವ ಗೋಪಿ ಆ ಮೂರ್ತಿಯನ್ನಪ್ಪಿಕೊಂಡು ಅವನಿಗೆ ಪ್ರಿಯವಾದ ಹಾಡನ್ನು ತಾರಕಸ್ಥಾಯಿಯಲ್ಲಿ ಅನ್ನುತ್ತಿದ್ದಾಳೆ. ಬಾಗಿದ ಹುಬ್ಬಿನ ವಿಶಾಲವಾದ ಕಣ್ಣಿನ ಕುಡಿನೋಟದಿಂದ ಕರೆಯುವಳು. ಏನನ್ನೋ ಕಿವಿಯಲ್ಲಿ ಗುಟ್ಟು ಹೇಳುವಂತೆ ನಟಿಸಿ ನಲ್ಲನಿಗೆ ಮುತ್ತಿಡುವಳು. ನದೀತೀರದ ಲತಾಕುಂಜದ ಕಡೆಗೆ ಸೆಳೆಯುವ ನೋಟವೀಗ! ಆ ಗೋಪೀವಧೂ ಚಪ್ಪಾಳೆಯಿಂದ ಕೈಬಳೆಗಳು ಕಲಕಲ ಧ್ವನಿಗುಡಲು, ಆ ಕೊಳಲ ನಾದಕ್ಕೆ ಸರಿಯಾಗಿ ನರ್ತಿಸಿ ಮೆಚ್ಚಿಗೆ ಪಡೆದವಳು. ಆ ಕೋರೆ ಹುಡುಗಿಯನ್ನು ಕೃಷ್ಣನು ಹಾಸ್ಯಮಾಡುತ್ತಿದ್ದಾನೆ.

ಇಷ್ಟು ವರ್ಣಿಸಿ ಮುಂದೆ ಕಾವ್ಯವು ಹರಿಯುತ್ತಿದ್ದರೂ ನಾವು ರಾಧೆಯ ಚಿತ್ರವನ್ನೇನೂ ಮರೆಯುವಂತಿಲ್ಲ. ಕೃಷ್ಣನ ಚರ್ಯೆಯನ್ನು ಕಂಡು ಅವಳಿಗೆ ಅಸಮಾಧಾನ. ಎಲ್ಲೋ ದೂರದ ಬಳ್ಳಿಮಾಡದಲ್ಲಿ ಕುಳಿತುಕೊಳ್ಳುತ್ತಾಳೆ. ಆದರೆ ಗುಣವನ್ನೇ ದೊಡ್ಡದು ಮಾಡಿಕೊಂಡು ಮೆಚ್ಚುವ ಅಂತಃಕರಣ ಅವಳದು. ಅವಳು ಸ್ಮರಿಸುವ ಆ ಮೋಹನ ಮೂರ್ತಿಯ ಚಿತ್ರವು ಸುಂದರವಾಗಿದೆ. ಕವಿಯ ಮಾತುಗಳಲ್ಲೇ ಕೇಳಿ:

ಸಂಚರದಧರಸುಧಾ ಮಧುರಧ್ವನಿ ಮುಖರಿತ ಮೋಹನವಂಶಂ
ಚಲಿತ ದೃಗಂಚಲ ಚಂಚಲ ಮೌಳಿ ಕಪೋಲ ವಿಲೋಲವತಂಸಂ |
ಚಂದ್ರಕ ಚಾರು ಮಯೂರಶಿಖಂಡಕ ಮಂಡಲ ವಲಯಿತಕೇಶಂ
ಪ್ರಚುರ ಪುರಂದರ ಧನುರನುರಂಜಿತ ಮೇದುರ ಮುದಿರ ಸುರವೇಷಂ ||

ಕೃಷ್ಣನು ಮೋಹಕವಾದ ಕೊಳಲನ್ನು ಹಿಡಿದು, ಚಲಿಸುವ ತುಟಿಗಳಿಂದ ಅಮೃತಮಯವಾದ ಮಧುರಗಾನವನ್ನು ಮಾಡುತ್ತಿದ್ದಾನೆ. ಕಣ್ಣಾಲಿ ಹಾಗೊಮ್ಮೆ ಹೀಗೊಮ್ಮೆ ಅಲೆಯುವಂತೆ, ಅವನು ತಲೆದೂಗುವುದರಲ್ಲಿ ಕರ್ಣಾವತಂಸವು ಕೆನ್ನೆಯ ಮೇಲೆ ಜೋಲಾಡುತ್ತಿದೆ. ಚೆಲುವಾದ ನವಿಲುಗರಿಯಿಂದ ಅಲಂಕರಿಸಲ್ಪಟ್ಟ ಶಿಖೆಯು ವಿಸ್ತಾರವಾದ ಮತ್ತು ಒತ್ತಾದ ಮುಗಿಲೊಡ್ಡಿನ ಮೇಲೆ ರಂಜಿಸುವ ಸಪ್ತವರ್ಣದ ಕಾಮನ ಬಿಲ್ಲಿನಂತೆ ಕಣ್ಮನಗಳನ್ನು ತಣಿಸುತ್ತದೆ. ಎಂಥ ಸೊಗಸಿದು! ಆ ದೇವನನ್ನು

ನೆನೆದರೆ ಅವಳಿಗೆ ರೋಷವೆಲ್ಲ ದೂರವಾಗುತ್ತದೆ; ಅವನಲ್ಲಿ ಭಕ್ತಿ ಹೆಚ್ಚುತ್ತದೆ. ಸವತಿಯರ ಕಡೆಗೆ ಲಕ್ಷ್ಯವಿರುವುದಿಲ್ಲ. ಅವನನ್ನು ತನ್ನವನನ್ನಾಗಿ ಮಾಡಿಕೊಳ್ಳ ಬೇಕೆಂಬ ಬಲಿತ ಆಸೆಯುವಳಿಗೆ. ವಿರಹಿಗಳ ಮೃದುವಾದ ಪ್ರೇಮವೇ ಅಂತಹುದು. ಪ್ರಥಮ ಸಮಾಗಮದ ಕಥೆಯೆಲ್ಲಾ ಜ್ಞಾಪಕವಾಗುವುದು. ಆ ದಿವಸ ಬೆಳುದಿಂಗಳ ರಾತ್ರಿಯಲ್ಲ. ಕಾರಿರುಳಲ್ಲಿ ಕದ್ದು ಬಂದಿದ್ದು. ಅದೇ ಲತಾಗೃಹದಲ್ಲಿ ಅವರ ಮೇಳನ. ಲಜ್ಜೆಯಿಂದ ತಾನು ಮೌನವಾಗಿದ್ದಾಗ ಕೃಷ್ಣನು ಪ್ರೀತಿಯ ನುಡಿಗಳಾಡಿ ಪರಿಹಾಸ್ಯ ಮಾಡಿದ ವಿನೋದಕೇಳಿ. ಆ ದಿವಸ ಚಿಗುರೆಲೆಯ ಹಾಸಿನಲ್ಲಿಯೇ ಅವರು ಮಲಗಿದ್ದು. ಒಂದು ದಿನ ವ್ಯಸನಗೊಂಡಿದ್ದ ತನ್ನನ್ನು ಮುಂಗುರುಳುಗಳನ್ನು ನೇವರಿಸುತ್ತಾ ಸಮಾಧಾನಪಡಿಸಿದ ಚಿತ್ರ. ಒಂದು ದಿನ ರಾಧೆಯು ಅಲಂಕಾರಮಾಡಿಕೊಂಡು ಗೋಪಿಯರೂಡನಿರಲು ಕೃಷ್ಣನು ತನ್ನನ್ನು ನೋಡಿದಾಗ ನಾಚಿಕೆಯಾಗಿ ಕೈಯಿಂದ ಕೊಳಲು ಜಾರಿ ಕೆಳಗೆ ಬಿದ್ದಾಗ ಮಂದಸ್ಮಿತವಾಗಿದ್ದಾ ಮುಖದ ಕಳೆ—ಇವೇ ಮುಂತಾದವು ಬಗೆಯಲ್ಲಿ ಸಾಗಿಹೋಗುತ್ತವೆ. ಇವನ್ನೆಲ್ಲಾ ಸಖಿಯ ಮುಂದೆ ಹೇಳಿಕೊಂಡು ಕೃಷ್ಣನನ್ನು ಹೇಗಾದರೂ ಸೇರುವಂತೆ ಮಾಡು ಎನ್ನುತ್ತಾಳೆ.

ಇತ್ತಕಡೆ ತನ್ನನ್ನು ನೋಡಿ ಹೊರಟುಹೋದ ರಾಧೆಯ ನೆನಪು ಬಂದು ಕೃಷ್ಣನ ಮನಸ್ಸನ್ನು ಚುಚ್ಚುತ್ತದೆ. ಅವನು ವ್ರಜಸುಂದರಿಯರನ್ನು ಬಿಟ್ಟು ಯಮುನಾ ನದಿಯ ದಡದಲ್ಲಿರುವ ಒಂದು ಹೊದರಿನಲ್ಲಿ ಕುಳಿತು ಪಶ್ಚಾತ್ತಾಪಪಡುತ್ತಿದ್ದಾನೆ. ಎಲ್ಲೆಲ್ಲಿ ಹುಡುಕಿದರೂ ಅವಳು ಸಿಗಲಿಲ್ಲ. ಕೃಷ್ಣನು ಅಪರಾಧಿ. ಆದ್ದರಿಂದ ಅವನು ಅವಳನ್ನು ತಡೆಯಲಿಲ್ಲ. ಪಾಪ! ಅವಳೀಗ ಏನು ಮಾಡುವಳೋ? ಇನ್ನು ಜನ, ಧನ, ಗೃಹ, ಭೂಷಣಗಳಿಂದ ಮಾಧವನಿಗೆ ಮನಸ್ಸು ನೆಮ್ಮದಿಯಿಲ್ಲ. ಬಹುಶಃ ಆ ರಾಧೆಯ ಹುಬ್ಬು ಗಂಟಿಕ್ಕಿರಬೇಕು; ಕೋಪದಿಂದ ಅವಳ ಮುಖವು ಕೆಂಪೇರಿರ ಬೇಕು. ಅಸೂಯೆಗೊಂಡು ಎಲ್ಲಿ ಹೊರಟುಹೋಗಿರುವಳೋ ಅವನು ಕಾಣ. ಅವಳಿಗೆ ನಮಸ್ಕರಿಸುವುದಕ್ಕೂ ಹಿಂತೆಗೆಯುವುದಿಲ್ಲವಂತೆ! ರಾಧೆಯು ತನ್ನ ಮುಂದೆ ಸುಳಿದ ಹಾಗೆ, ನಲಿದ ಹಾಗೆ, ಕಲ್ಪಿಸಿಕೊಳ್ಳುತ್ತಾನೆ. ಓ ಚೆಲುವೆ! ಇನ್ನೊಂದು ಸಲ ಈ ರೀತಿಯಾದ ತಪ್ಪುಮಾಡುವುದಿಲ್ಲ. ಹರಿ, ಹರಿ!—ಎಂದುಕೊಳ್ಳುತ್ತಾನೆ.

ಹೃದಿ ಬಿಸಲತಾಹಾರೋ ನಾಯಂ ಭುಜಂಗಮನಾಯಕಃ
ಕುವಲಯದಳಶ್ರೇಣೀ ಕಂಠೇ ನ ಸಾ ಗರಳದ್ಯುತಿಃ |
ಮಲಯಜರಜೋ ನೇದಂ ಭಸ್ಮ ಪ್ರಿಯಾರಹಿತೇ ಮಯಿ
ಪ್ರಹರ ನ ಹರಭ್ರಾಂತ್ಯಾನಂಗ ಕ್ರುಧಾ ಕಿಮು ಧಾವಸಿ ||

ಕೃಷ್ಣನು ಮನ್ಮಥನನ್ನು ಸಂಬೋಧಿಸುವ ಮಾತುಗಳಿವು: "ಅಯ್ಯಾ! ನಾನು ಧರಿಸಿರುವುದು ತಾವರೆಬಳ್ಳಿ; ಹಾವಿನ ಸರವಲ್ಲ. ಕತ್ತಿನಲ್ಲಿರುವುದು ಕನ್ನೈದಿಲೆ ದಳಗಳ

ದಂಡೆ; ವಿಷದ ಕಪ್ಪು ಗುರುತಲ್ಲ. ನಾನು ತೊಡೆದಿರುವುದು ಶ್ರೀಗಂಧ; ಭಸ್ಮವಲ್ಲ. ನನ್ನನ್ನು ಈಶ್ವರನೆಂಬ ಭ್ರಾಂತಿಯಿಂದ ವೃಥಾ ಏಕೆ ಕೊಲ್ಲುವೆ?"

ಇವು ಕವಿಯ ಕಲ್ಪನೆಯ ಕೆಲವು ಚಿತ್ರಗಳು; ಚೇತೋಹಾರಿಯಾದ ಸುಂದರ ಸನ್ನಿವೇಶಗಳ ವರ್ಣನೆಗಳು. ಯಮುನೆಯ ತಟದ ನೀರವಂಜಿ ಲತಾಗೃಹದಲ್ಲಿ ಪ್ರೇಮ ಭಯೋದ್ಭ್ರಾಂತನಾದ ಮಾಧವನು ಪಶ್ಚಾತ್ತಾಪಪಡುತ್ತಿದ್ದಾನೆ.

ಅಲ್ಲಿಗೆ ರಾಧೆಯ ಸಖಿಯು ಬಂದು ಹೀಗೆನ್ನುವಳು: "ರಾಧೆಯು ನಿನ್ನ ವಿರಹ ದಿಂದ ದೀನಳಾಗಿರುವಳು. ನಿನಗಾಗಿ ಕುಸುಮಶಯ್ಯೆಯನ್ನು ಕಲ್ಪಿಸುವ ವ್ರತವನ್ನು ಕೈಗೊಂಡಿರುವಳು. ನೀರೊಡಗೂಡಿದ ಕಮಲದ ದಳಗಳನ್ನು ಧರಿಸಿರುವಳು. ಆ ಕಮಲಮುಖಿಯ ವಿಶಾಲನೇತ್ರಗಳಿಂದ ಕಣ್ಣೀರು ಧಾರಾಕಾರವಾಗಿ ಸುರಿಯುತ್ತಿದೆ. ಅದನ್ನು ನೆನೆದರೆ ರಾಹುವಿನ ದಂಶನದಿಂದ ಸುರಿಯುವ ಸುಧಾರಸದ ಚಂದ್ರಮಂಡಲ ದಂತಿದೆ. ತಾನು ಸವರಿರುವ ಕಸ್ತೂರಿಯಿಂದ ನಿನ್ನನ್ನೇ ಕಾಮದೇವನಂತೆ ಭಾವಿಸಿ ಬರೆದು ನೋಡುತ್ತಾಳೆ; ಆಮೇಲೆ ಕೈಯಲ್ಲಿ ಮಾವಿನಹೂವಿನ ಸರಳನ್ನೂ ಮಕರವನ್ನೂ ಇಟ್ಟು ನಮಸ್ಕರಿಸುತ್ತಾಳೆ. 'ಕೃಷ್ಣ, ನಿನ್ನ ಪಾದದಲ್ಲಿ ಬಿದ್ದವಳು ನಾನು. ನೀನು ಉದಾಸೀನನಾಗುತ್ತಿರಲಾಗಿ ಶೀತಲನಾದ ಚಂದ್ರನೂ ಕೂಡ ಅತ್ಯಂತ ಸಂತಾಪ ವನ್ನುಂಟುಮಾಡುತ್ತಾನೆ' ಹೀಗೆಂದು ಕ್ಷಣಕ್ಷಣವೂ ಎನ್ನುತ್ತಾಳೆ. ನಿನ್ನನ್ನು ಹೊಂದುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಅವಳು ಧ್ಯಾನದಿಂದಲೇ ನಿನ್ನನ್ನು ತನ್ನ ಮುಂದೆ ನಿಲ್ಲಿಸಿಕೊಂಡು ಪ್ರಲಾಪಿಸುವಳು; ದುಃಖಿಸುವಳು; ನಗುವಳು; ಅಳುವಳು; ಭ್ರಮಿಸುವಳು. ಆ ಕೃಶಾಂಗಿಗೆ ಮುತ್ತಿನ ಹಾರವೂ ಕೂಡ ಭಾರ ವಾದಂತೆ ತೋರುತ್ತದೆ. ಅವಳು ಆಗಾಗ ಬಿಡುವ ನಿಟ್ಟುಸಿರೇ ಅವಳನ್ನು ಸುಡುತ್ತಿದೆ. ಶ್ರೀಗಂಧವು ರಾಧೆಗೆ ವಿಷಸಮಾನ. ನೀರುತುಂಬಿದ ತನ್ನ ಕಣ್ಣುಗಳಿಂದ ದಿಕ್ಕು ದಿಕ್ಕಿನಲ್ಲಿಯೂ ನಿನ್ನನ್ನೇ ಹುಡುಕುತ್ತಲಿದ್ದಾಳೆ. ತಳಿರ ಹಾಸಿಗೆಯು ಅವಳ ದುಃಖ ದಿಂದ ಬಾಡಿಹೋಗಿದೆ. ಸಂಧ್ಯಾಕಾಲದಲ್ಲಿ ಬಾಲಚಂದ್ರನು ಚಲಿಸದಿರುವನಲ್ಲವೆ. ಹಾಗೇ ಸದಾ ರಾಧೆಯು ತನ್ನ ಅಂಗೈಯಲ್ಲಿ ತನ್ನ ದುಂಡಾದ ಕಪೋಲಗಳನ್ನಿಟ್ಟು ಕುಳಿತುಬಿಟ್ಟಿರುತ್ತಾಳೆ. ಯಾವಾಗಲೂ ಹರಿ! ಹರಿ! ಎಂದು ಜಪಮಾಡುತ್ತಿದ್ದಾಳೆ. ಅದು ವಿರಹದಿಂದ ಮರಣಹೊಂದುವ ಕಡೆಗಾಲವೆಂದೇ ತೋರುವುದು. ಈಗ ನೀನು ಬಂದು ಅವಳನ್ನು ಸಮಾಧಾನಪಡಿಸದೆ ಹೋದರೆ ವಜ್ರಾಯುಧಕ್ಕಿಂತಲೂ ಕಠಿಣ ನಾಗುವೆ." ಆಗ ಕೃಷ್ಣನು ಸಖಿಗೆ ರಾಧೆಯನ್ನು ತನ್ನ ಮಾತುಗಳಿಂದ ಸಮಾಧಾನ ಪಡಿಸಿ ಕರೆತರುವಂತೆ ಆಜ್ಞಾಪಿಸುತ್ತಾನೆ. ಇಲ್ಲಿಯ ಸ್ವಾಭಾವಿಕವಾದ ವರ್ಣನೆಯು ಬಹಳ ಚೆನ್ನಾಗಿದೆ.

ಗೀತಗೋವಿಂದದ ಮೊದಲ ಅಷ್ಟಪದಿಗಳಲ್ಲಿ ಕಾವ್ಯನಾಯಿಕೆಯ ವಿರಹವನ್ನೂ ಪ್ರೇಮಸಮಾಧಿಯ ಭಾವವನ್ನೂ ಚಿತ್ರಿಸಿದೆ ಎಂಬುದು ಈಗಾಗಲೇ ತಿಳಿದಿರುವ ವಿಷಯ. ಅಂಥ ಭಾವೋನ್ಮಾದದಲ್ಲಿ ಎಲ್ಲೆಲ್ಲಿ ಕಣ್ಣೆತ್ತಿ ನೋಡಿದರೂ ತನ್ನನ್ನು ಅಣಕಿಸುವ, ಕೆರಳಿಸುವ, ದೃಶ್ಯಗಳೇ ಕಂಡುಬರುತ್ತವೆ. ಸನ್ನಿವೇಶಕ್ಕೆ ತಕ್ಕಂತೆ ಎಲ್ಲ ವಸ್ತುಗಳೂ ಕಾವ್ಯವಾಗುತ್ತಿವೆ. ಕಾಳಿಂದೀ ಹೊಳೆಯ ನೀರಿನಿಂದ ಶುದ್ಧವಾದ ಬೃಂದಾವನ ವಿಪಿನದ ವಸಂತ ಮಾರ್ಗದಲ್ಲಿ ಇರುವಂತಿಗೆಯು ಆಲಿಂಗನದಿಂದ ಮೊಗ್ಗು ಬಿಡಿದ ಚೂತರಾಜನು ಪುಳಕಿತನಾಗಿರುವನಂತೆ! ಬಕುಳ ಪುಷ್ಪಗಳ ಗೊಂಚಲು ಗಳಲ್ಲಿ ತಾವೇ ತಾವಾಗಿ ಉನ್ಮತ್ತತೆಯಿಂದ ಮಧುಕರಗಳು ಝೇಂಕರಿಸುವುದು ವಧೂಜನ ಜನಿತವಿಲಾಪ! ಮಲಯಮಾರುತನು ಲವಂಗಿಯ ಆಲಿಂಗನದಿಂದ ತಾನೂ ಹೆಣ್ಣಿನ ಭಾವವನ್ನು ತಳೆದಿದ್ದಾನೆ! 'ಕೋಮಲ ಮಲಯ ಸಮೀರ'ನಾಗಿದ್ದಾನೆ! ಹಾಗೆ ಕಾಣುವುದು ರಾಧೆಯ ಭಾವ. ಎಲ್ಲೆಲ್ಲೂ ಒಂದನ್ನು ಒಂದು ಆಶ್ರಯಿಸುತ್ತಿದೆ. ಪರಿಮಳವು ಸುಗಂಧವನ್ನೇ ಅರಸುತ್ತಿದೆ! "ಮಾಧವಿಕಾ ಪರಿಮಳಮಿಳಿತೇ ನವ ಮಲ್ಲಿಕಾ ಯಾತಿ!" ಇರುವಂತಿಗೆಯ ಕಂಪು ಮಲ್ಲಿಗೆಯ ನರುಗಂಪಿನಲ್ಲಿ ಬೆರೆತು ಕೊಂಡಿದೆ. ಪಾಪ! ಈಗ ರಾಧೆಯೊಬ್ಬಳೇ ಒಂಟಿ.

ಹೇಗೋ ರಾತ್ರಿ ಕಳೆಯಿತು. ಪ್ರಾತಃಕಾಲದಲ್ಲಿ ಬಹು ಸಭ್ಯನಂತೆ ಕೃಷ್ಣನು ನಮಸ್ಕರಿಸಿ ನಯವಾಗಿ ನುಡಿಸಲು ಯತ್ನಿಸುತ್ತಿರುವನು. ಇಬ್ಬರೂ ಒಬ್ಬರನ್ನೊಬ್ಬರು ಕೂಡಲು ಬಂದವರು. ತನ್ನನ್ನು ಅವಮಾನಪಡಿಸಿ ಹೀಗೆ ಹಿಂಸಿಸಿದ ಗಂಡಿಗೆ ಹೆಣ್ಣು ಏಕಾಏಕಿ ಮಣಿಯತಕ್ಕುದಲ್ಲ. "ತಾಮಸುಸರ ಸರಸೀರುಹಲೋಚನ ಯಾ ತವ ಹರತಿ ವಿಷಾದಂ! ಯಾಹಿ." ಸಾಭ್ಯಸೂಯೆಯಾದ ರಾಧೆಯು ಅನುನಯ ವಿನಯದಿಂದ ಎದುರಿನಲ್ಲಿ ಪ್ರಣತನಾಗಿರುವ ತನ್ನ ನಾಥನನ್ನು ಹಾಗೆನ್ನುತ್ತಾಳೆ. "ಎಲೈ ಕೃಷ್ಣನೆ! ಜಾಗರಣೆಯಿಂದ ಕೆಂಪಾದ ನಿನ್ನ ಕಣ್ಣುಗಳು, ನೇತ್ರಚುಂಬನ ದಿಂದ ಕಪ್ಪಾದ ನಿನ್ನ ತುಟಿಗಳು, ಆರಕ್ತವಾದ ನಿನ್ನ ಎದೆ, ಇವುಗಳೆಲ್ಲಾ ನಿನ್ನ ಪ್ರೀತಿಯನ್ನು ಎತ್ತಿ ತೋರಿಸುತ್ತಿವೆ. ಪಾಪ! ನಿನ್ನ ವ್ಯಥೆಯನ್ನು ಪರಿಹರಿಸುವವಳ ಬಳಿಗೆ ಹೊರಟುಹೋಗು. ಇಲ್ಲಿ ನಿಲ್ಲಬೇಡ. ಸಾಕುಮಾಡು ನಿನ್ನ ಮರುಳುಮಾತು ಗಳನ್ನು. ಇಷ್ಟು ಸ್ಪಷ್ಟವಾಗಿ ನಿನ್ನ ಚರ್ಯೆಯು ಎದ್ದು ಕಾಣುತ್ತಿರುವಾಗ ನೀನು ಹೇಗೆತಾನೆ ವಂಚಿಸಲು ಸಮರ್ಥನಾದೀಯೆ? ಇವೆಲ್ಲಾ ನನ್ನ ಮನಸ್ಸಿನಲ್ಲಿ ಬಹಳ ಖೇದವನ್ನುಂಟುಮಾಡಿದೆ. ಆದಾಗ್ಗೂ ಈಗ ನನ್ನ ನಿನ್ನಲ್ಲಿ ಏಕದೇಹನ್ಯಾಯವನ್ನು ಯಾವ ರೀತಿಯಿಂದ ಕಲ್ಪಿಸುತ್ತಿದ್ದೀಯೆ? ಶರೀರದಂತೆಯೇ ಮನಸ್ಸೂ ಸಹ ಮಲಿನ ವಾಗಿದೆ. ನಿನ್ನ ಬಾಲಚರಿತ್ರೆಯು ಬಲ್ಲದ್ದೇ ಆಗಿದೆ. ಅಬಲಾಕಬಳಕ್ಕಾಗಿ ವನವನ

ಗಳಲ್ಲಿ ತಿರುಗುವ ನಿನ್ನ ಚರಿತ್ರೆಯು ಸಾಕು. ವ್ಯಸನಗೊಂಡಿರುವ ನನ್ನ ಮುಂದೆ ವೃಥಾ ನಟನೆಗಳನ್ನಾಡದೆ ತೊಲಗು! ಪ್ರಣಯಭಂಗದ ದೆಸೆಯಿಂದ ನನಗೆ ನಿನ್ನ ಅವಲೋಕನವು ಶೋಕಾಧಿಕ್ಯವನ್ನೂ ನಾಚಿಕೆಯನ್ನೂ ಉಂಟುಮಾಡುತ್ತಿದೆ.''

ಬಹಿರಿವ ಮಲಿನತರಂ ತವ ಕೃಷ್ಣ ಮನೋಽಪಿ ಭವಿಷ್ಯತಿ ನೂನಂ |
ಯಾಹಿ ಮಾಧವ ಯಾಹಿ ಕೇಶವ ಮಾವದ ಕೈತವವಾದಂ ||

ಈ ರೀತಿಯಾಗಿ ಪರಿತಪಿಸಿದ ರಾಧಾದೇವಿಯನ್ನು ಸಖಿಯು ಅನೇಕ ಸಾಂತ್ವ ವಚನಗಳಿಂದ ಸಮಾಧಾನಪಡಿಸಲು ಯತ್ನಿಸಿ ಸಾಧ್ಯವಾಗದೆ ಕಡೆಗೆ "ಎಲ್ಲಾ ರೀತಿ ಯಲ್ಲಿಯೂ ಪ್ರತಿಕೂಲ ಕಾರ್ಯವನ್ನು ಮಾಡುತ್ತಿರುವ ನಿನಗೆ ಹಾಗೆ ಆಗುವುದೇ ಸರಿ'' ಎಂದು ಪೂತ್ಕರಿಸಿದಳು. ಇತ್ತಲಾಗಿ ಶ್ರೀ ಕೃಷ್ಣನು ಅನುನಯದಿಂದ ಹೀಗೆಂದನು.—"ಹೇ ಪ್ರಿಯೆ, ಚಾರುಶೀಲೆ! ಅಕಾರಣವಾದ ಕೋಪವನ್ನು ಬಿಟ್ಟು ಬಿಡು. ಸ್ವಲ್ಪವಾದರೂ ಮಾತಾಡಿ ನಗೆಯ ಬೆಳುದಿಂಗಳನ್ನು ಬೀರು. ಮನ್ಮಥನಿಂದ ಬೆಂದ ನನಗೆ ನಿನ್ನ ಮುಖಕಮಲ ಮಧುಪಾನವನ್ನು ನೀಡು. ನೀನು ನಿಜವಾಗಿಯೂ ನನ್ನಲ್ಲಿ ಕೋಪಗೊಂಡಿರುವಿಯಾದರೆ ಇಗೋ ನನ್ನನ್ನು ನಿನ್ನ ಉಗುರುಗಳಿಂದ ಜಿಗುಟು; ತೋಳುಗಳಿಂದ ಬಂಧಿಸಿಬಿಡು. ನಿನ್ನ ಕಣ್ಣುಗಳೇನೋ ಈಗ ಕೆಂಪ ಗಾಗುತ್ತಿವೆ ಕೆಂದಾವರೆಯಂತೆ. ಅದೂ ನನಗೆ ವಿಲಾಸವೇ; ಅನುರೂಪವೇ. ನೀನು ನನಗೆ ಭೂಷಣ! ಜೀವನ! ಭವಜಲಧಿರತ್ನ! ನನಗೆ ಪ್ರಿಯವಾದ, ರತಿರಂಗವಾದ ನಿನ್ನ ಪಾದಗಳನ್ನು ನನ್ನ ಶಿರಸ್ಸಿನಲ್ಲಿ ಮಂಡಿಸು. . . . ಹೇ ಚಂಡಿ! ಎಲ್ಲವನ್ನೂ ಅರಿತ ನೀನು ಹೀಗಿರುವುದು ಆಶ್ಚರ್ಯವೇ ಸರಿ.''

ಜಯದೇವನು ಕಲ್ಪನೆಯ ಮುಸುಕಿನಲ್ಲೋ, ಅನುಭವದ ಸುಣ್ಣರದಲ್ಲೋ, ಸಂಪ್ರದಾಯದ ಕವಿಸಮಯದ ಆವೇಶದಲ್ಲೋ, ಅಂತು ಒಂದು ವಿಶಿಷ್ಟವಾದ ನುಡಿಯ ವೈಖರಿಯಲ್ಲಿ ಈ ಪ್ರಣಯ ಸಂಭಾಷಣೆಗಳನ್ನು ಬಹು ರಸವತ್ತಾಗಿ ಅಷ್ಟ ಪದಿಗಳಲ್ಲಿ ಸುಖವಾಗಿ ಹಾಡಿ ಮೈಮರೆತಿದ್ದಾನೆ. ಆಮೇಲೆ ರಾಧೆಗೆ ಅಲಂಕಾರ ವಾದದ್ದು, ಸತಿಪತಿಯರ ಸಮಾಗಮ, ಇವೆಲ್ಲಾ ಮುಂದಿನ ನಾಲ್ಕು ಕೀರ್ತನೆಗಳಲ್ಲಿ ಬಂದು ಕಾವ್ಯವು ಮುಗಿದಿದೆ. ಈ ಕಾವ್ಯಪರಿಚಯವನ್ನು ಇಲ್ಲಿಗೆ ನಿಲ್ಲಿಸಬಹುದಾ ದರೂ ಜಯದೇವ ಕವಿಯ ಕಾವ್ಯಶಕ್ತಿ, ದೈವಭಕ್ತಿ, ಸಂಗೀತಸಾಮರಸ್ಯ ಮತ್ತು ಆತನ ಕಾಲದ ಅಭಿರುಚಿ ಇವುಗಳನ್ನು ಕುರಿತು ಸ್ವಲ್ಪ ತಿಳಿಸಬಹುದು.

ಕವಿಯು ತನ್ನ ಕಾವ್ಯರಚನೆಯಲ್ಲಿ ತನ್ನ ಅನುಭವಜ್ಞಾನವನ್ನೇ ಹರಡಿರುವ ನೆಂದು ಮೇಲೆ ಹೇಳಿದ್ದಾಗಿದೆ. ಜಯದೇವನ ಶೈಲಿಯು ಸರಳವಾದುದು. ಮನೋ ಹರವಾದುದು. ಅವನ ಪದಮೈತ್ರಿ, ವಿಲಾಸ, ಬೆಡಗು, ಯಮಕ—ಗಮಕಗಳ ಸಂಮೋಹಿನೀಶಕ್ತಿ, ಮೇಲಾಗಿ ತನ್ನ ಮನೋರಾಜ್ಯದ ಸೌಂದರ್ಯವನ್ನು ಚಿತ್ರಿ

ಸುವ ಶಕ್ತಿ ಇವೆಲ್ಲಾ ಮನೋಜ್ಞವಾಗಿವೆ. ಕಾವ್ಯದಲ್ಲಿ ಎಲ್ಲಿಯೂ ಆತನ ಉಲ್ಲಾಸ ಕುಗ್ಗಿಲ್ಲ; ನೀರಿನ ಬುಗ್ಗೆಯಂತೆ ಚಿಮ್ಮುತ್ತಿದೆ. ಉಪಯೋಗಿಸುವ ಮಾತುಗಳು ಸನ್ನಿವೇಶವನ್ನು ಸಾಧಿಸುತ್ತಿವೆ. ಕೃಷ್ಣನನ್ನು ಹೊಂದಿದ ರಾಧೆಯ ನಗುಮೊಗವನ್ನು ಕವಿಯು "ರತಿರಭಸಹಸಿತವದನೆ" ಎಂದು ವರ್ಣಿಸಿದ್ದಾನೆ. ಸಮಾಗಮದ ವೇಳೆಯಲ್ಲಿ ಲಜ್ಜೆಯು ದೂರವಾಗುವುದಿಲ್ಲ. ನಾಚಿಕೆಯೇ ನಾಚಿಕೊಳ್ಳುತ್ತದಂತೆ—"ಲಜ್ಜಾಪಿ ಸಲಜ್ಜಾ". ರಾಧೆಗೆ ಕೃಷ್ಣದರ್ಶನವಾದಾಗ ಹರ್ಷಭಯ ರೋಮಾಂಚನಗಳಾದುವಂತೆ! ಆ ಆನಂದಬಾಷ್ಪವನ್ನು ಕವಿಯು "ಇದಾನೀಂ ರಾಧಾಯಾಃ ಪ್ರಿಯತಮಸಮಾಲೋಕಸಮಯೇ ಪಪಾತ ಸ್ವೇದಾಂಬುಪ್ರಸರ ಇವ ಹರ್ಷಾಶ್ರುನಿಕರಃ" ಎಂದು ಚಿತ್ರಿಸಿದ್ದಾನೆ.

ಯಮಕ—ಅನುಪ್ರಾಸಾದಿಗಳನ್ನೂ ಇತರ ಅಲಂಕಾರಗಳನ್ನೂ ನುಡಿನುಡಿಗೂ ಈ ಕಾವ್ಯದಲ್ಲಿ ನಾವು ಕಾಣಬಹುದಾಗಿದೆ. ಈಗಾಗಲೇ ಎಷ್ಟೋ ಗೊತ್ತಾಗಿದೆ. ಇನ್ನಷ್ಟನ್ನು ಕೊಡಬಹುದು.—

ರತಿಸುಖಸಾರೇ ಗತಮಭಿಸಾರೇ ಮದನ ಮನೋಹರ ವೇಷಂ
ಅಮಲಕಮಲದಳಲೋಚನ ಭವಮೋಚನ ತ್ರಿಭುವನ ವಿಧಾನ
ಅಲಸ ನಿಮೀಲತಲೋಚನಯಾ ಪುಲಕಾವಳಿ ಲಲತ ಕಪೋಲಂ
ಅಸ್ತೋಕಸ್ತಬಕನಮಿತಾಶೋಕಕಲಿಕಾ ವಿಕಾಸಃ
ಪಾಟಲ ಪಾಣಿಜಾಂಕಿತಮುರಃ
ರಾಧಾ ಮುಗ್ಧಾ ಸ್ವಾಧೀನ ಭರ್ತೃಕಾ

ಕಾವ್ಯದ ಉದ್ದಕ್ಕೂ ಪದಗಳು ತಮಗೆ ತಾವೇ ಜೋಡಿಸಿಕೊಂಡು ತಮಗೆ ತಾವೇ ಹರಿದಂತೆ ಕಾಣುತ್ತವೆ.

ಒಟ್ಟಿನಲ್ಲಿ ಕಾವ್ಯವು ಮೊದಲಿಂದ ತುದಿಯವರೆಗೆ ಸರಳವಾಗಿದೆ. ಎಲ್ಲಿಯೂ ಎಡವದೆ ತೊಡಕದೆ ತನ್ನ ಗುರಿಯನ್ನು ಸಾಧಿಸಿದೆ. ಕಾವ್ಯಚಿತ್ರಕ್ಕೆ ಭಾಷೆಯು ಚೌಕಟ್ಟು ಸುಂದರವಾಗಿ ಹೊಂದಿಕೊಂಡಿದೆ.

ಇದರಲ್ಲಿ ಇಂದಿನ ದೃಷ್ಟಿಯಿಂದ ಆಕ್ಷೇಪಣೆಗೆ ಸಿಲುಕಬಹುದಾದ ಅನೇಕ ಬಣ್ಣನೆಗಳಿವೆ. ದಿಟ; ಆದರೆ ಕವಿಯ ಕಾಲದ ರಸಿಕತೆಗೆ ಈ ಕಾವ್ಯವು ಒಂದು ಸಾಕ್ಷಿಯಾಗಿ ನಿಂತಿದೆ; ಮತ್ತು ಪ್ರತ್ಯೇಕಿಸಿ ತೆಗೆಯಬಹುದಾದ ಭಾಗವು ಸ್ವಲ್ಪವಾಗಿದೆ. ಏನೇ ಇರಲಿ, ಜಯದೇವನು ಭಕ್ತಿಯ ಹೊದಿಕೆಯನ್ನು ಕಾವ್ಯವಲ್ಲರಿಗೆ ತೊಡಸಿದ್ದಾನೆ. ನಮ್ಮ ಮನಸ್ಸು ಅತ್ತ ಇತ್ತ ತೂಗಾಡುವಷ್ಟರಲ್ಲಿ ಮತ್ತೆ ಮತ್ತೆ ಎಚ್ಚರಿಕೆ ಕೊಡುತ್ತಾನೆ.—"ಹರಿಚರಣ ಶರಣ ಜಯದೇವ ಕವಿ ಭಾರತೀ", "ಶ್ರೀಜಯದೇವ ಭಣಿತಂ ಹರಿಚರಿತಂ", "ಭಣಿತ ವಚನೇನ ಪ್ರವಿಶತು ಹರಿರಪಿ ಹೃದಯಂ",

"ಅತಿ ಲಲಿತಂ ಸುಖಯತು ರಸಿಕಜನಂ ಹರಿಚರಿತಂ." ಮೊದಲೇ ಹೇಳಿದಂತೆ ಮಧುರಕೋಮಲಕಾಂತಪದಾವಳಿಯ ಜಯದೇವ ಸರಸ್ವತಿಯು ಹರಿಸ್ಮರಣೆಯನ್ನು ವಿಲಾಸಕಥೆಯಲ್ಲಿ ನಿರೂಪಿಸತಕ್ಕದ್ದು. ಕೊನೆಯಲ್ಲಿಯೂ ಜಯದೇವನು "ಸಂಗೀತ ಕಲೆಯಲ್ಲಿ ಯಾವುದು ಸೂಕ್ಷ್ಮಜ್ಞಾನವೋ, ಯಾವುದು ವಿಷ್ಣುವಿನ ಧ್ಯಾನವೋ, ಯಾವುದು ಶೃಂಗಾರರಸದ ಸದಸದ್ವಿವೇಚನೆಯೋ ಮತ್ತು ಯಾವುದು ಕಾವ್ಯಗಳಲ್ಲಿ ಲೀಲೆಯೋ, ಅದನ್ನು ಆನಂದಿತರಾದ ರಸಿಕಜಾಣರು ಈ ಕಾವ್ಯದಲ್ಲಿ ಅರಸಲಿ" ಎಂದು ಬೇಡಿದ್ದಾನೆ.

ಜಯದೇವ ಕವಿಯ ಭಕ್ತಿಯು ಪರಮ ಅದ್ಭುತವಾದುದೆಂದು ತಿಳಿದುಬರುತ್ತದೆ. ಆತನು ಬರೆದಿರುವ

ವೇದಾನುದ್ಧರತೇ ಜಗಂತಿ ವಹತೇ ಭೂಗೋಳಮುದ್ಬಿಭ್ರತೇ
ದೈತ್ಯಂ ದಾರಯತೇ ಬಲಿಂ ಛಲಯತೇ ಕ್ಷತ್ರಕ್ಷಯಂ ಕುರ್ವತೇ |
ಪೌಲಸ್ತ್ಯಂ ಜಯತೇ ಹಲಂ ಕಲಯತೇ ಕಾರುಣ್ಯಮಾತನ್ವತೇ
ಮ್ಲೇಚ್ಛಾನ್ಮೂರ್ಛಯತೇ ದಶಾಕೃತಿಕೃತೇ ಕೃಷ್ಣಾಯ ತುಭ್ಯಂ ನಮಃ ||

ಎಂಬ ದಶಾವತಾರದ ಶ್ಲೋಕವು ಇಂದಿಗೂ ನಮ್ಮ ದೇಶದಲ್ಲಿ ಎಲ್ಲರ ಬಾಯಲ್ಲೂ ನಲಿಯುತ್ತಿದೆ. ಆತನು ಬರೆದಿರುವ ಮೊದಲನೆಯ ಅಷ್ಟಪದಿಯೇ ಮಾಳವಿರಾಗದ ದಶಾವತಾರ ಸ್ತೋತ್ರ. ಇದರಲ್ಲಿ ಬರುವ "ಮ್ಲೇಚ್ಛನಿವಹ ನಿಧನೇ ಕಲಯಸಿ ಕರವಾಲಂ" ಎಂಬುದು ಪ್ರಸಿದ್ಧವಾದ 'ಕೊಹಿನೂರು' ಕಾದಂಬರಿಯಲ್ಲಿ ಮೂಡಿರುವುದನ್ನು ನಾವು ನೋಡಬಹುದು.

ಜಯದೇವ ಕವಿಯು ಒಂದಾನೊಂದು ಸಲ ತನ್ನ ಶ್ರೀಮಂತ ಶಿಷ್ಯನೊಬ್ಬನನ್ನು ಬೀಳ್ಕೊಂಡು ಜಗನ್ನಾಥಕ್ಕೆ ಹಿಂತಿರುಗಿ ಹೋಗುವಾಗ ದಾರಿಯಲ್ಲಿ ಕಳ್ಳರು ಬಂದು ಅವನಲ್ಲಿದ್ದ ಧನವನ್ನು ಅಪಹರಿಸಿದರು. (ಗುರುವಿಗೆ ತಿಳಿಯದಂತೆ ಶಿಷ್ಯನು ಅವನ ಗಂಟಿನಲ್ಲಿ ಒಡವೆಗಳನ್ನಿಟ್ಟಿದ್ದನು.) ಅಷ್ಟಕ್ಕೆ ಸುಮ್ಮನಾಗದೆ ಅವರು ಆತನನ್ನು ಕೈಕಾಲು ಕಡಿದು ಒಂದು ಹಳ್ಳದಲ್ಲಿ ಹಾಕಿ ಅರಣ್ಯದಲ್ಲಿ ಬಿಟ್ಟುಹೋದರು. ಆ ದಿವಸ ಕ್ರೌಂಚರಾಜನೆಂಬ ಒಬ್ಬ ಅರಸು ಬೇಟೆಯಾಡುವುದಕ್ಕೋಸ್ಕರ ಆ ಅರಣ್ಯಕ್ಕೆ ಬಂದು ಸಂಚರಿಸುತ್ತ, ಅಲ್ಲಿ ಹರಿಧ್ಯಾನಮಾಡುತ್ತಿದ್ದ ಈತನನ್ನು ಕಂಡು, ವಿಚಾರಿಸಿ, ತನ್ನ ಜತೆಗೆ ಕರೆದುಕೊಂಡು ಹೋದನು. ಸಾಧುಸೇವಾತತ್ಪರನಾದ ಆ ರಾಜನ ಬಳಿಗೆ ಅನೇಕರು ಬರುತ್ತಿದ್ದಂತೆಯೇ ಆ ಕಳ್ಳರೂ ಬಂದರು. ಎಲ್ಲರಿಗಿಂತ ಹೆಚ್ಚಾಗಿ ಅವರು ಜಯದೇವನಿಂದ ಉಪಚರಿಸಲ್ಪಟ್ಟರಂತೆ. ಅನಂತರ ಅವರು ಬಹು ಧನಸಮೇತ ಹೊರಡುವಾಗ ಆಳುಗಳು ಆಶ್ಚರ್ಯದಿಂದ ಜಯದೇವನ ನಡತೆಯನ್ನು ಕುರಿತು

ಪ್ರಶ್ನಿಸಿದರು. ಕಳ್ಳರು ಸುಳ್ಳು ಹೇಳಿದ್ದರಿಂದ ಭೂಕಂಪವಾಗಿ ನೆಲ ಬಾಯಿಬಿಟ್ಟು ಅವರು ಇಳೆಗೆ ಇಳಿದರು. ಅಂಜುತ್ತಂಜುತ್ತ ಈ ಸುದ್ದಿಯನ್ನು ಆಳುಗಳು ಅರಸನಿಗೆ ತಿಳಿಸಲು, ಜಯದೇವನೂ ಅರಿತು "ಶತ್ರುಗಳನ್ನು ನಾಶಪಡಿಸಬಹುದೆ? ಹೇ, ರುಕ್ಮಿಣೀಪತಿ! ನೀನು ನಿನ್ನ ಶತ್ರುಗಳನ್ನು ಅನುಗ್ರಹಿಸಲಿಲ್ಲವೆ?" ಎಂದು ಪರಿಪರಿಯಾಗಿ ಬೇಡಲು, ದೇವರು ಪ್ರತ್ಯಕ್ಷನಾಗಿ ಆತನ ಶಮದಮಾದಿಗಳನ್ನು ಕೊಂಡಾಡಿ ಕೈಕಾಲು ಕೊಟ್ಟನಂತೆ.

ಒಂದು ಸಲ ಜಯದೇವನ ಪತ್ನಿ ಪದ್ಮಾವತಿಯು ಕ್ರೌಂಚರಾಜನ ರಾಣಿಯ ಬಳಿ ಇದ್ದಾಗ ಆಕಸ್ಮಿಕವಾಗಿ ದೂತನೊಬ್ಬನು ಬಂದು—ತಮ್ಮ ನಂಟನೊಬ್ಬನು ಸಾಯಲು ಅವನ ಹೆಂಡತಿಯು ಸಹಗಮನಮಾಡಿದಳೆಂದನು. ಸಹಗಮನವು ಅಸಾಮಾನ್ಯವಾದುದೆಂದು ಎಲ್ಲರೂ ಆಶ್ಚರ್ಯಪಟ್ಟರು. ಪದ್ಮಾವತಿಯು ಮಾತ್ರ ಸುಮ್ಮನೆ ಇದ್ದಳು. ರಾಣಿಯು ಇದೇನೆಂದು ಕೇಳಲು ಆಕೆ "ಪತಿಯೊಡನೆಯೇ ಪ್ರಾಣವೂ ಹೋಗಬೇಕು. ಸತ್ತು ಎಷ್ಟೋ ಹೊತ್ತಾದಮೇಲೆ ಸಹಗಮನವೆಂಥಾದ್ದು!" ಎಂದಳಂತೆ. ರಾಣಿಗೆ ಅಸಮಾಧಾನವಾಗಿ ಆಕೆಯ ಸತ್ವವನ್ನು ಪರೀಕ್ಷಿಸಲು, ಒಂದು ದಿನ ಜಯದೇವನು ದೊರೆಯೊಡನೆ ಬೇಟೆಗೆ ಹೋಗಿದ್ದಾಗ, ಹುಲಿ ಕೊಂದು ಅವನು ಸತ್ತನೆಂಬ ಸುಳ್ಳುಸುದ್ದಿಯನ್ನು ಹಠಾತ್ತಾಗಿ ತರಿಸಿದಳು. ಸತ್ಯವೆಂದು ತೋರುವಂತೆ ರಕ್ತಕಲೆಯ ಬಟ್ಟೆಗಳನ್ನು ತೋರಿಸಿದ ತಕ್ಷಣ ಪದ್ಮಾವತಿ ಪ್ರಾಣಬಿಟ್ಟಳಂತೆ. ಅನರ್ಥವಾಗಿ ಹೋಯಿತು. ಈ ಅಚಾತುರ್ಯ ನಡೆದ ಸ್ವಲ್ಪ ಹೊತ್ತಿನಲ್ಲಿಯೇ ದೊರೆಯೂ ಕವಿಯೂ ಬಂದರು. ಜಯದೇವನು ದುಃಖಿತನಾದ ಅರಸನನ್ನು ಸಮಾಧಾನಮಾಡಿ ತಾನು ಪತ್ನಿಯ ಬಳಿ ನಿಂತು ಇಪ್ಪತ್ತುನಾಲ್ಕು ಅಷ್ಟಪದಿಗಳನ್ನೂ ರಾಗರಾಗವಾಗಿ ಹಾಡಲು, ನಾರಾಯಣನು ಪ್ರತ್ಯಕ್ಷನಾಗಿ ಪದ್ಮಾವತಿಗೆ ಜೀವದಾನ ಮಾಡಿದನಂತೆ.

ಜಯದೇವನು ಹತ್ತೊಂಬತ್ತನೆಯ ಅಷ್ಟಪದಿಯನ್ನು ಬರೆದು ಮುಗಿಸುವಾಗ "ಪದ್ಮಾವತೀ ರಮಣ ಜಯದೇವ ಕವಿ ಭಾರತೀ" ಎಂದು ಬರೆದು 'ಪದ್ಮಾವತೀ' ಎಂಬುದನ್ನು ಹೊಡೆದು ಮರಳಿ ಬರೆಯಲು ಏನೂ ತೋಚದೆ, ಗ್ರಂಥವನ್ನು ತೆಗೆದಿಡೆಂದು ಹೆಂಡತಿಗೆ ಹೇಳಿ, ಸ್ನಾನಕ್ಕೆ ಹೋದನಂತೆ. ಪುನಃ ಅವನೇ ಹಿಂತಿರುಗಿ ಬಂದು ಗ್ರಂಥವನ್ನು ತರಿಸಿ ಬರೆದು ಹೋದಹಾಗೆ ಆಯಿತಂತೆ. ಮಧ್ಯಾಹ್ನ ಊಟವಾದ ಮೇಲೆ ಗ್ರಂಥವನ್ನು ತೆರೆದು ಅದರಲ್ಲಿ ತನ್ನ ಮನಸ್ಸಿನ ಪಂಕ್ತಿಗಳೇ ಇದ್ದುದನ್ನು ಕಂಡು ಅದನ್ನು ಯಾರು ಬರೆದರೆಂದು ಕೇಳಲು ಆಕೆ 'ನೀವೇ' ಎಂದಳು. "ಶ್ರೀ ಕೃಷ್ಣನೇ ಆ ರೂಪವಾಗಿ ಬಂದು ನಿನಗೆ ದರ್ಶನವಿತ್ತನು. ನೀನು ಧನ್ಯೆ" ಎಂದು ಜಯದೇವನು ಹೇಳಿದಂತೆ ಒಂದು ಕಥೆ ಇದೆ. ಹೀಗೆಯೇ ಓರ್ವ ನೆಯ್ಗೆಯವನು ಮಗ್ಗ ಹಾಕು

ವಾಗ 'ಜಯ ಜಗದೀಶಹರೆ' ಎಂಬ ಪಲ್ಲವಿಯನ್ನು ಕುರುಕುತ್ತಿದ್ದುದರಿಂದ ಅಲ್ಲಿ ಸನ್ನಿಹಿತನಾದ ಕೃಷ್ಣನು ಕುಣಿದು ಅದೆಲ್ಲಾ ಹಾಳಾಗುತ್ತಿತ್ತೆಂದೂ, ಆ ಕುಣಿತದಲ್ಲಿ ಗೆಜ್ಜೆಯ ಶಬ್ದ ಕೇಳಿಬರುತ್ತಿತ್ತೆಂದೂ ಜನಜನಿತವಾಗಿದೆ.

ಇವೆಲ್ಲಾ ಏನೇ ಇರಲಿ, ಜಯದೇವನು ಈ ಕಾವ್ಯದಲ್ಲಿ ತನ್ನ ಅಂತರಂಗವನ್ನು ಚೆನ್ನಾಗಿ ಬೆಳಗಿಸಿ ತೋರಿದ್ದಾನೆ ಎಂಬುದನ್ನು ನಾವು ಒಪ್ಪುವುದಾದರೆ 'ಗೀತ ಗೋವಿಂದ'ಕಾರನ ಅಂತಃಕರಣದಲ್ಲಿ ಎದ್ದು ಬರುವ ಭಾವಗೀತದ ಸುಂದರ ತೆರೆಗಳನ್ನು ನಾವು ಕಾಣಬಹುದು. ಆತನ ಕಲಾಪರಿಣತೆ, ರಸಿಕತೆ, ಸಂಗೀತಜ್ಞಾನ, ಸಾಹಿತ್ಯ ಲೋಲುಪತೆ, ಅಸೀಮವಾದ ದೈವಭಕ್ತಿ, ಲೋಕಾನುಭವದ ಮಾರ್ದವದಿಂದ ಕೂಡಿದ ಮನೋವೇಧನಚಿತ್ರ ಮುಂತಾದುವನ್ನೆಲ್ಲಾ ಪಾಠಮಾಡಬಹುದು. ಪದ್ಮಾವತಿಯೂ ಜಯದೇವನೂ ಒಂದುಗೂಡಿ ಹಾಡುತ್ತಿರುವ ಚಿತ್ರವು ನಮ್ಮ ಚಿತ್ತಭಿತ್ತಿಯಲ್ಲಿ ಮಸುಳಿಹೋಗುವಂತಿಲ್ಲ. ಆ ದಂಪತಿಗಳು ದೇವರಮನೆಯ ಬಳಿ ಕುಳಿತು ಈಗಲೂ ಸುಖವಾಗಿ ಹಾಡಿಕೊಳ್ಳುತ್ತಿರುವಂತೆ, ಹಾಡಿನಲ್ಲಿ ಮೈಮರೆತಿರುವಂತೆ, ಕಾಣುತ್ತದೆ.

ಸಾಹಿತಿಯೂ ಗಾಯನಕುಶಲನೂ ಮೇಳವಿಸುವುದು ಅಪರೂಪ. ಅದರಲ್ಲಿ ದೈವಭಕ್ತಿಯು ಕೂಡಿರುವುದೆಂದರೆ ರಸಾಯನಕ್ಕೆ ಹೆಜ್ಜೇನು ಸೇರಿದಂತೆಯೇ ಸರಿ. ಇಂಥ ಪುಣ್ಯವು ಅನೇಕ ಕವಿಗಳಿಗಿಲ್ಲ. ಈ ದೇವಾಂಶ ಪುರುಷನಲ್ಲಿ ಸಂಗೀತ ಸಾಹಿತ್ಯಗಳು ಸಮರಸ ಹೊಂದಿ ರಸಪ್ರವಾಹವು ಕಾವ್ಯದ ಹೊನಲಾಗಿ ಪ್ರೇಮ ಮೂರ್ತಿಯಾದ ಮುರಲೀಧರನನ್ನು ಆರಾಧಿಸುತ್ತಿದೆ.

ಎಂ. ನಂಜುಂಡ ಶಾಸ್ತ್ರೀ.

---

# ಬ್ರಹ್ಮಶಿವನ ಕಾಲವಿಚಾರ

ಸಮಯಪರೀಕ್ಷೆಯನ್ನೂ ತ್ರೈಲೋಕ್ಯ ಚೂಡಾಮಣಿ ಸ್ತೋತ್ರವನ್ನೂ ಬರೆದಿರುವ ಬ್ರಹ್ಮಶಿವನ ಕಾಲದ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಬ್ರಹ್ಮಶಿವನು ಚಾಳುಕ್ಯ ರಾಜನಾದ ತ್ರೈಲೋಕ್ಯಮಲ್ಲನ ಮಗ ಕವಿ ಕೀರ್ತಿವರ್ಮ ('ಗೋವೈದ್ಯ'ದ ಕರ್ತೃ) ನನ್ನೂ.ದೇವನಾಗನ ಮಗನಾದ ಆಹವಮಲ್ಲಮಹೀಶನನ್ನೂ ಸ್ತುತಿಸಿ ತನ್ನ ಗ್ರಂಥವನ್ನು ಆರಂಭಮಾಡಿರುವುದರಿಂದ ಈ ಕವಿಗೆ ಕೀರ್ತಿವರ್ಮ ಕವಿ ಸಮಕಾಲದವನಾಗಿದ್ದಿರಬೇಕೆಂದೂ ಆದುದರಿಂದ ಇವನೂ ಸುಮಾರು ೧೧೦೦ ರಲ್ಲಿದ್ದಿರಬೇಕೆಂದೂ ಕವಿಚರಿತಕಾರರು ಅಭಿಪ್ರಾಯಪಡುತ್ತಾರೆ. ಅಲ್ಲದೆ ಈ ಕವಿಯ ಗುರುವಾದ ವೀರಣಂದಿಮುನಿ ೧೧೧೫ ರಲ್ಲಿ ಗತಿಸಿದ ಮೇಘಚಂದ್ರ ತ್ರೈವಿದ್ಯನ ಮಗನಾಗಿರಬೇಕೆಂದೂ ಕವಿಚರಿತಕಾರರು ಹೇಳುತ್ತಾರೆ.

ಡಾಕ್ಟರ್ ವೆಂಕಟಸುಬ್ಬಯ್ಯನವರು ಗೋವೈದ್ಯವನ್ನು ಬರೆದ ಕೀರ್ತಿವರ್ಮನ ತಂದೆಯಾದ ತ್ರೈಲೋಕ್ಯಮಲ್ಲನೆಂಬವನು ಚಾಲುಕ್ಯ ಚಕ್ರವರ್ತಿಯಾದ ತ್ರೈಲೋಕ್ಯಮಲ್ಲನ ಕಾಲದಲ್ಲಿ ಪಾಲಭ ಎಂಬ ನಗರವನ್ನೋ ನಾಡನ್ನೋ ಆಳುತ್ತಿದ್ದ ಒಬ್ಬ ಸಣ್ಣ ಅಧಿಕಾರಿಯಿರಬೇಕೆಂದೂ, ಸಮಯಪರೀಕ್ಷೆಯಲ್ಲಿ ಸ್ತುತಿಸಲ್ಪಟ್ಟಿರುವ ಆಹವಮಲ್ಲಮಹೀಶನು ಪ್ರಾಯಃ ಚಾಲುಕ್ಯ ಚಕ್ರವರ್ತಿಯಾದ ತ್ರೈಲೋಕ್ಯಮಲ್ಲ ಆಹವಮಲ್ಲನೇ ಇರಬೇಕೆಂದೂ ಆದುದರಿಂದ ಕೀರ್ತಿವರ್ಮ ಬ್ರಹ್ಮಶಿವರು ೧೦೬೦–೧೦೬೫ ರಲ್ಲಿ ಜೀವಿಸುತ್ತಿದ್ದಿರಬೇಕೆಂದೂ ಅಭಿಪ್ರಾಯಪಟ್ಟಿದ್ದಾರೆ. ಬ್ರಹ್ಮಶಿವನ ಗುರುವಾದ ವೀರಣಂದಿಯು ೧೧೧೫ ರಲ್ಲಿ ಗತಿಸಿದ ಮೇಘಚಂದ್ರನ ಶಿಷ್ಯನಲ್ಲವೆಂಬುದು ಡಾಕ್ಟರ್ ವೆಂಕಟಸುಬ್ಬಯ್ಯನವರ ಹೇಳಿಕೆ.

ಸಮಯಪರೀಕ್ಷೆಯ ಮೊದಲ ಕೆಲವು ಪದ್ಯಗಳನ್ನು ಕವಿಚರಿತಕಾರರೂ ಡಾಕ್ಟರ್ ವೆಂಕಟಸುಬ್ಬಯ್ಯನವರೂ ನೋಡಿರಲಿಲ್ಲವಾದುದರಿಂದ ಅವರಿಬ್ಬರಿಗೂ ಭಿನ್ನಾಭಿಪ್ರಾಯಕ್ಕೆ ಎಡೆಯುಂಟಾಗಿದೆ. ಬ್ರಹ್ಮಶಿವನು ತನ್ನ ಗ್ರಂಥದ ಆದಿಯಲ್ಲಿ ಕೀರ್ತಿವರ್ಮನನ್ನು ಹೊಗಳಿರುವುದರಿಂದ ಅವನು ಕೀರ್ತಿವರ್ಮನ ಕಾಲದಲ್ಲಿಯೇ ಇದ್ದನೆಂದು ಅವರ ಭಾವನೆ. ಈಗ ಸಮಯಪರೀಕ್ಷೆಯ ಪ್ರತಿಯು ಸಮಗ್ರವಾಗಿ ದೊರೆತಿರುವುದರಿಂದ[1] ಕವಿಯ ಕಾಲವನ್ನು ಇನ್ನೂ ಖಚಿತವಾಗಿ ನಿರ್ಧರಿಸಬಹುದು.

---

[1] ತಮ್ಮಲ್ಲಿದ್ದ ಸಮಯಪರೀಕ್ಷೆಯ ಪ್ರತಿಯಿಂದ ಆ ಗ್ರಂಥದ ಆದಿಯ ಕೆಲವು ಪದ್ಯಗಳನ್ನು ಎತ್ತಿ ಬರೆದುಕೊಳ್ಳುವುದಕ್ಕೆ ಅವಕಾಶವಿತ್ತುದಕ್ಕಾಗಿ ಮೂಡುಬಿದಿರೆ ಮಠದ ಶ್ರೀಗಳವರಿಗೆ ನಮ್ಮ ವಂದನೆಗಳು. ಈ ಪದ್ಯಗಳನ್ನು ಪರಿಶಿಷ್ಟದಲ್ಲಿ ಕೊಟ್ಟಿದೆ.

ಕವಿಯು ತನ್ನ ಗ್ರಂಥದ ಆದಿಯಲ್ಲಿ ಗೃಧ್ರಪಿಂಛರು, ಸಮಂತಭದ್ರರು, ಜಟಾಚಾರ್ಯರು, ಅಕಳಂಕದೇವರು, ಕೊಂಡಕುಂದರು, ಸೋಮದೇವಪಂಡಿತರು, ಚತುರ್ಮುಖದೇವರು, ಬೆಟ್ಟದ ದೇವರು, ವಾದಿರಾಜರು, ಮೇಘಚಂದ್ರರು ಇವರನ್ನೂ

ವೀರದಗುರ್ವಿಂದುಗ್ರನ | ವೀರಮನದಟಲೆದು ನೆಗಳ್ದ ಮದನನ ಮದಮಂ |
ಬೀರಮುಮನಲೆದು ಗೆಲ್ದುದು | ವೀರತಪಂ ವೀರಣಂದಿ ಮಲಧಾರಿಗಳಾ ||

ಎಂದು ಮುಂತಾಗಿ ನಾಲ್ಕು ಪದ್ಯಗಳಲ್ಲಿ ವೀರಣಂದಿಯನ್ನೂ ಸ್ತುತಿಸಿ ಪುನಃ ಕವಿಪರಮೇಷ್ಠಿ ಬಾಳಚಂದ್ರ ಇವರನ್ನೂ ಹೊಗಳಿ

ಧರೆಯೊಳ್ ಸಂದ ಮೊರಂಬದೊಳ್ ನಿಜನಿಶಿಧಿಸ್ಥಾನದೊಳ್ ಮಣ್ಣನಾ
ದರದಿಂದೊರ್ವೆಯೆ ತಂದು ಪೂಸಲೊಡನತ್ಯುಗ್ರಗ್ರಹಾನೇಕ ಸ |
ರ್ಪರುಜಾಪೀಡೆಗಳಾಗಳಂತೆ ಕೆಡುಗುಂ ತಾನೆಂದೊಡಮ್ಮಮ್ಮ ಬಾ
ಪ್ಪುರೆ ಸಾಮಾನ್ಯಮೆ ಮೇಘಚಂದ್ರಮುನಿ ಮಾಹಾತ್ಮ್ಯಂ ಧರಾಚಕ್ರದೊಳ್ ||

ಎಂಬ ಪದ್ಯದಲ್ಲಿ ಇನ್ನೊಬ್ಬ ಮೇಘಚಂದ್ರನನ್ನೂ

ಪದಿಮೂಱುದಿನಂ ಸಂನ್ಯಸ | ನದೆ ಕಾಯೋತ್ಸರ್ಗದಿಂದೆ ನಿಂದುಂ ನಿಂದಂ |
ದದಿನಸುವಂ ಬಿಟ್ಟು ಜಗದ್ವಿದಿತಯಶಂ ವೀರಣಂದಿ ಸುಗತಿಗೆ ಸಂದಂ ||

ಎಂಬ ಪದ್ಯದಲ್ಲಿ ಇನ್ನೊಬ್ಬ ವೀರಣಂದಿಯನ್ನೂ ಸ್ತುತಿಸಿದ್ದಾನೆ. ಜೀವಸಂಬೋಧನೆಯನ್ನು ಬರೆದಿರುವ ಬಂಧುವರ್ಮ[1], ಪಂಪ ಪೊನ್ನರನ್ನರು, "ಕವಿತೆಯೊಳವರನ್ನನೆ ವಿದಿತಾತ್ಮಭಾವಸಗ್ಗಳದೇವ", ನಾಗಚಂದ್ರ, ಇವರನ್ನು ಹೆಸರಿಸಿದ್ದಾನೆ.

ಜೈನಮತಕ್ಕೂ ಜೈನವಿದ್ವಾಂಸರಿಗೂ ಹೆಚ್ಚು ಆಶ್ರಯವಿತ್ತ ಶಂಖಾವನೀಶ (?), ದಾನಚಿಂತಾಮಣಿ ಅತ್ತಿಮಬ್ಬೆ, ಚಾವುಂಡರಾಯ,[2] ರಾಚಮಲ್ಲ, 'ಮಂತ್ರಿತಿಳಕ' ನಾದ ಭರತ, ಪೆರ್ಗಡೆಬೊಮ್ಮ, ಬೊಮ್ಮನ ಅಗ್ರತನಯನೂ ಮಂಡಳೇಶ್ವರತಿಳಕನೂ ಆದ ನಾಗದೇವ, ಕೀರ್ತಿವರ್ಮ, ಕೀರ್ತಿವರ್ಮನಂತೆಯೇ ದಾನಶೂರನಾಗಿದ್ದ ದೇವನಾಗನ ಮಗ ಆಹವಮಲ್ಲ ಮಹೀಶ—ಇವರುಗಳ ಸ್ತುತಿಯೂ ಇದೆ.

---

[1] ಬಂಧುವರ್ಮನ ಕಾಲ ಸು. ೧೨೦೦ ಎಂದು ಕವಿಚರಿತಕಾರರು ಹೇಳುತ್ತಾರೆ. ಬ್ರಹ್ಮಶಿವನು ಇವನನ್ನು ಸ್ತುತಿಸಿರುವುದರಿಂದ ಇವನು ಬ್ರಹ್ಮಶಿವನ ಸಮಕಾಲಿಕನೋ ಬ್ರಹ್ಮಶಿವನಿಗಿಂತ ಹಿಂದಿನವನೋ ಇರಬೇಕು.

[2] ಕವಿಚರಿತೆಯಲ್ಲಿಯೂ, ಮೈಸೂರು ಓರಿಯಂಟಲ್ ಲೈಬ್ರರಿಯ ಪ್ರತಿಯಲ್ಲಿಯೂ "ರಾಮತರಾಯ" ಎಂದಿದೆ. ಮೂಡುಬಿದಿರೆಯ ಪ್ರತಿಯಲ್ಲಿ "ರಾಯನನುದಾರಿಯಂ ಪೊಗೆಳದರಾರ್" ಎಂದಿದೆ. ಇವನು ಚಾವುಂಡರಾಯನೇ ಇರಬೇಕು.

ಸುಮಾರು ೧೨೬೦ರಲ್ಲಿದ್ದ ಕೇಶಿರಾಜನು ತನ್ನ ಶಬ್ದಮಣಿದರ್ಪಣದಲ್ಲಿ ಬ್ರಹ್ಮಶಿವನ. ತ್ರೈಲೋಕ್ಯ ಚೂಡಾಮಣಿಯಲ್ಲಿ ಬರುವ ಒಂದು ಪದ್ಯದ "ಅಹಿಂಸಾ ಲಕ್ಷಣೋ ಧರ್ಮ ಎಂಬುದನೀ ತತ್ತ್ವವಿತುರ್ವರೇಣ್ಯರಱಿದರ್ ತ್ರೈಲೋಕ್ಯ ಚೂಡಾಮಣೀ" ಎಂಬ ಭಾಗವನ್ನು ಉದಾಹರಿಸಿದ್ದಾನೆ. ಸಮಯಪರೀಕ್ಷೆಯಲ್ಲಿ

ಪುಲಿಗೆರೆಯಲ್ಲಿ ಮುಂ ವೃಷಭವಾಹನ ಯಕ್ಷನನಾದಿಕಾಲದೊಳ್
ನೆಲದೊಳೆ ಪೂಳ್ದುದಂ ಬುರುಟಿ ಕಂಡದನೊರ್ಮೆಯೆ ನಂದಿವಾಹನಂ।
ನೆಲದೊಳಗಿರ್ದ ರುದ್ರನೊಗೆತಂದನಿದಲ್ತೆ ಸ್ವಯಂಭುವೆಂದು ಗಾ
ವಿಲರದನೀಗಳರ್ಚಿಸುವರೇನದು ಶಮ್ಮ ಸ್ವಯಂಭುಲಿಂಗವೆ?॥

ಈ ಪದ್ಯವಿದೆ. ಪುಲಿಗೆರೆಯ ಸೋಮನಾಥ ಬಸದಿಯಲ್ಲಿ ಸೋಮನಾಥ ಲಿಂಗವನ್ನು ಸ್ಥಾಪಿಸಿದವನು ಆದಯ್ಯ. ಆದಯ್ಯನ ೩೯ನೆಯ ಮತ್ತು ೪೦ನೆಯ ವಚನಗಳಲ್ಲಿ ಬಸವೇಶ್ವರನ ಹೊಗಳಿಕೆ ಇದೆಯಾದುದರಿಂದ ಆದಯ್ಯನ ಕಾಲ ಸುಮಾರು ೧೧೬೦ ಎಂದು ಹೇಳಬಹುದು. ಆದುದರಿಂದ ಬ್ರಹ್ಮಶಿವನು ಸುಮಾರು ೧೧೬೦ರಿಂದ ಈಚೆಗೆ ಕೇಶಿರಾಜನ ಕಾಲವಾದ ೧೨೬೦ಕ್ಕಿಂತ ಮುಂಚೆ ಜೀವಿಸಿದ್ದನೆಂದು ಸಿದ್ಧವಾಗುತ್ತದೆ.

ಬ್ರಹ್ಮಶಿವನ ಗ್ರಂಥಗಳ ಅನೇಕ ಪದ್ಯಗಳಲ್ಲಿ 'ಲಿಂಗಿಗಳ್' 'ಮಹೇಶ್ವರರ್' 'ಶಿವಭಕ್ತರ್' 'ಚರಲಿಂಗಿಗಳ್' 'ಪರಲಿಂಗಿಗಳ್' ಈ ಮಾತುಗಳನ್ನು ನಾವು ಬೇಕಾದಷ್ಟು ಕಡೆ ನೋಡಬಹುದು. ಈ ಪದಗಳನ್ನು ಕವಿ ವೀರಶೈವರನ್ನು ನಿರ್ದೇಶಿಸಿಯೇ ಹೇಳುತ್ತಿದ್ದಾನೆಂದು ತೋರುತ್ತದೆ. ಹನ್ನೊಂದನೆಯ ಶತಮಾನದ ಆದಿಯಿಂದಲೇ ಎಂದರೆ ಶೈವಮತವು ಚಿಗುರೊಡೆಯುವುದಕ್ಕೆ ಪ್ರಾರಂಭವಾದಾಗಲೇ ಜೈನಮತವು ಅವನತಿಯ ಹಾದಿಗೆ ತಿರುಗಿತ್ತಾದರೂ ಬ್ರಹ್ಮಶಿವ ಮತ್ತು ವೃತ್ತವಿಲಾಸ ಇವರನ್ನು ಕೆರಳಿಸಿದ್ದು ಕಲ್ಯಾಣನಗರದಲ್ಲಿ ನಡೆದ ವೀರಶೈವರ ಉಗ್ರ ಚಳುವಳಿ. ಆ ಕಾಲಕ್ಕೆ ಅನೇಕರು ಜೈನಮತವನ್ನು ಬಿಟ್ಟು ವೀರಶೈವಮತಕ್ಕೆ ಸೇರಿಕೊಂಡಿರಬೇಕು. ಪಂಡಿತನಾಗಿದ್ದ ಬ್ರಹ್ಮಶಿವನೇ ಶೈವಚಳುವಳಿಯ ಸುಳಿಗೆ ಸಿಕ್ಕಿ "ಪಿರಿದಟ್ಟಿಯಿಂ"ದ ಮಾಹೇಶ್ವರ ಧರ್ಮವನ್ನು ಸ್ವೀಕರಿಸಿರಬೇಕಾದರೆ ಜನ ಸಾಮಾನ್ಯರ ಮೇಲೆ ಆ ಚಳುವಳಿಯ ಪ್ರಭಾವವು ಇನ್ನೆಷ್ಟರ ಮಟ್ಟಿಗಿತ್ತೆಂಬುದನ್ನು ಹೇಳಬೇಕಾಗಿಲ್ಲ. ಬ್ರಹ್ಮಶಿವನು ಮಾಹೇಶ್ವರ ಧರ್ಮದಲ್ಲಿ "ಒಳ್ಪುಗಾಣದೆ ಮಗುಳ್ದು" ಪರಮಜಿನಧರ್ಮವನ್ನು ಸ್ವೀಕರಿಸಿದನಂತೆ. ಸ್ವೀಕರಿಸಿ ಬಡವನಾದನಂತೆ. ಅದನ್ನು ಕಂಡ ಆಗದವರು ಆಡಿಕೊಂಡರಂತೆ. ಆ ಸಂಗತಿಯನ್ನೇ ಈ ಕೆಳಗಿನ ಪದ್ಯದಲ್ಲಿ ಹೇಳಿದ್ದಾನೆ.[1]

[1] ಪದ್ಯಗಳನ್ನು ಹೆಚ್ಚಿಗೆ ತಿದ್ದುವ ಗೋಜಿಗೆ ಹೋಗಿಲ್ಲ.

ಸಿರಿವಂತಂ ತಾನೆನಲ್ ಜೀವಿಸಿದನಿವನೆ ಮುನ್ನೆ ಮಾಹೇ |
ಶ್ವರನಾಗಿರ್ದಂದು ಮತ್ತಾರ್ಹತದೊಳೆ ಪುಗಲೀತಂಗೆ ದಾರಿದ್ರ್ಯಮಾಯ್ತೆಂ |
ದನಿಬರ್ ಮೂಢಾತ್ಮರೆಂಬರ್ ಸಿರಿಯುಮವನ ದಾರಿದ್ರ್ಯಮುಂ ಪೂರ್ವಜನ್ಮಾಂ |
ತರ ಕರ್ಮಂ ಮತ್ತದಂ ಬಿತ್ತಿದನೆ ಬೆಳಸನುಣ್ಬಂದದಿಂದುಣ್ಬನಾತಂ ||

ಈ ಕವಿಯ ಕಾಲದಲ್ಲಿ ಜೈನಮತಕ್ಕೆ ಎಷ್ಟರಮಟ್ಟಿಗೆ ಪೆಟ್ಟುತಗುಲಿತ್ತೆಂಬುದನ್ನು ಈ ಕೆಳಗಿನ ಪದ್ಯಗಳಲ್ಲಿ ಕಾಣಬಹುದು.

ಅರುಹಂತನೆ ದೆಯ್ವಂ ಮಿ | ಕ್ಕರೆಲ್ಲರುಂ ದೇವರಲ್ಲರೇ ಗುಣಿಗಳ್ ಜೈ |
ನರೆ ಮಿಕ್ಕರೆಲ್ಲರುಂ ಕ | ಷ್ಟರೆ ಪೇಳಿಮೆನುತ್ತೆ ಕರ್ಚಿಕೊಲುವರ್ ಮೂರ್ಖರ್ ||
ಧರಣೀತಳದೊಳ್ ಮಾಹೇ | ಶ್ವರರುಂ ವೈದಿಕರೆ ಪಲಬರಲ್ಲದೆ ಜೈನರ್ |
ಪಲ (?) ರಿಲ್ಲರೆಂಬರಂತುಟೆ | ಸಿರಿವಂತರ್ ಕೆಲಬರುಳಿದವರ್ ಪಲರೆ ಪೊಲಂ ||
ಬಲ್ಲಹನುಂ ಸಾಮಂತರು | ಮೆಲ್ಲಾ ಪ್ರಜೆಯುಂ ಶಿವಂಗೆ ಭಕ್ತರೆ ಜೈನರ್ |
ಪೊಲ್ಲಪ್ಪ ಕತದೆ ಕೈಕೊಳ | ಲೊಲ್ಲರ್ ನಾಡವರ್ಗಳದಱಿನೆಂಬರ್ ಮೂಢರ್ ||

ಬ್ರಹ್ಮಶಿವನ ಸಮಯ ಪರೀಕ್ಷೆಯು ಹನ್ನೆರಡನೆಯ ಶತಮಾನದ ಉತ್ತರಾರ್ಧದ ಕನ್ನಡನಾಡಿನ ಧಾರ್ಮಿಕ ಪರಿಸ್ಥಿತಿಯನ್ನು ಪ್ರತಿಬಿಂಬಿಸುತ್ತಿದೆಯೆಂದು ಹೇಳಬಹುದು. ಜೈನಮತವು ಎಷ್ಟು ತ್ವರಿತಗತಿಯಿಂದ ಕ್ಷೀಣವಾಗುತ್ತಿತ್ತೆಂಬುದನ್ನು ಉದ್ವೇಗ ಪೂರಿತವಾದ ಬ್ರಹ್ಮಶಿವನ ಪದ್ಯಗಳೇ ಹೇಳಬಲ್ಲುವು. ಜನಗಳು—ಹೆಚ್ಚಾಗಿ ಹೆಣ್ಣು ಮಕ್ಕಳು—ಜೈನಮತವನ್ನು ತಿರಸ್ಕರಿಸಿ ಶೈವಮತಕ್ಕೇ ಹೆಚ್ಚು ಒಲಿದಿರಬೇಕೆಂದು ಕಾಣುತ್ತದೆ. ಕವಿ ಸುಮಾರು ಮೂವತ್ತು ಪದ್ಯಗಳಲ್ಲಿ ಸ್ತ್ರೀಯರನ್ನು ಅಲ್ಲಗಳೆದಿದ್ದಾನೆ. ಪ್ರಾಯಃ ಪ್ರತಿಪದ್ಯವೂ "ಅಱಿಗುಲಿ ವೆಂಡಿರ್" ಎಂತಲೇ ಕೊನೆಗಾಣುತ್ತದೆ. ಹೆಣ್ಣುಮಕ್ಕಳು ತಾವು ಜೈನರ ಹೊಟ್ಟೆಯಲ್ಲಿ ಹುಟ್ಟಿರಲಿ ಶೈವರ ಹೊಟ್ಟೆಯಲ್ಲಿ ಹುಟ್ಟಿರಲಿ ತಮ್ಮನ್ನು ಕೊಟ್ಟ ಮನೆಯಲ್ಲಂತೂ ಶಿವನನ್ನೇ ಆರಾಧಿಸುತ್ತಿದ್ದಿರಬೇಕು. ಬ್ರಹ್ಮಶಿವನಿಗೂ ಅಂತಹ ಶಿವಭಕ್ತೆ ಹೆಂಡತಿಯೇ ಗಂಟುಬಿದ್ದಿರಬೇಕು. ಆದುದರಿಂದ ಬ್ರಹ್ಮಶಿವನನ್ನು ಕೆರಳಿಸುವುದಕ್ಕೆ ಸಾಕಷ್ಟು ಕಾರಣಗಳಿದ್ದುವೆಂದೇ ಹೇಳಬಹುದು. ಕವಿಯ ಎದೆಯ ಕುದಿಯಿಂದ ಉಕ್ಕಿಬಂದ ಪದ್ಯಗಳು ಈ ಕೆಳಗಿನವು.

ಮನೆಯೊಡೆಯಳ್ ಮೇಣ್ ಮಕ್ಕಳೆ | ಜಿನಧರ್ಮಮನೆಂತುಮೊಲ್ಲದಿರ್ದೊಡೆ ಬಳಿಯಂ |
ಜಿನಸಮಯಿಗಳ್ಗೆ ತವಿಪುದು | ಧನಮಂ ಮನೆಯವರ್ಗೆ ತವಿಸದಿರ್ಪುದು ಜೈನಂ ||
ಮದುವೆಗಿದು ಪೆತ್ತಮಕ್ಕಳೆ | ಗಿದು ಬಾಳ್ತೊಡಲೆನ್ನದುಳ್ಳುದಂ ಸವಣರ್ಗಿ |
ಕ್ಕಿದಪಂ ಕೂರ್ಪವರಿದ ವೇ | ಳ್ಪುದು ಬುದ್ಧಿಯನೆಂದು ದೂರುತಿರ್ಪರ್ ವೆಂಡಿರ್ ||
. . . . ಶಾಸನ ದೇವತೆಗೆಂದಡೆ | ವೀಸದ ಪುಷ್ಪಮುಮನೀಯರಱಿಗುಲಿ ವೆಂಡಿರ್ ||
ಗಂಡನ ದೆಸೆವುತ್ತಮರಂ | ಕಂಡಡೆ ಕಡೆಗಾಣಿಸುವರ್ ತವರ್ಮನೆಯವರಂ |

ಕಂಡೊಡೆ ರಾಗಿಸಿ ಕರೆದೊಡ| ನುಂಡುಂ ಬೇಡಿದುದನೀವರಱುಗುಲಿ ವೆಂಡಿರ್ ||
ಮನೆಯುಂ ಮಕ್ಕಳನೊಕ್ಕ | ಲ್ತನಮುಂ ಬಿಡುವಂತು ಧರ್ಮಮಂ ಸಲೆ ವೇಳಲ್ |
ನಿನಗೆ ಚಲಮುಂಟೆ ನೀ ಕೆ| ಮ್ಮನೆ ಬರವೇಡಣ್ಣ ಪೋಗಿಮೆಂಬರ್ ಪೆಂಡಿರ್ ||
ಶ್ರಾವಕಶೂದ್ರರ ಮನೆಯೊಳ್ | ತಾವುಣ್ಬೊಡಮುಣ್ಗೆ ಜಾತಿನಾಶಂ ಮಾಡ|
ಲ್ಕಾವಾರೆವುಣ್ಣೆವೆಂಬರ್ | ದೇವರ ದೊರೆಯೆನಿಪ ಜೈನ ಸಮಯಿಯ ಮನೆಯೊಳ್ ||
ಕಿಱಿಯಂದು ತೊಟ್ಟು ಮೂಢವು| ನಱಿಯದೆ ಮನೆಗಳೊಳೆ ಬೆಳೆದ ತೆರದಿಂ ಜೈನ|
ಕ್ಕೆಱಗುವರಲ್ಲದೆ ಭಕ್ತಿಯಿ| ನೆಱಗುವರೆ ಪೆಂಡಿರ್ ? . . . .
ಪುರುಷನ ಚಿತ್ತಂಬಡೆಯಲ್ | ಪರಮಶ್ರಾವಿಕೆಯರಪ್ಪರಿತ್ತಲ್ಲಳಿಯಂ |
ಕರಗಮುಮಂ ಮೊಱನಂ ಪೆಂ| ಡಿರಿಗೀವರ್ ಗೌರಿಗೆಂದು ಸಲೆ ತಾಟಕಿಯರ್ ||

ಕಂಡಕಂಡ ದೇವರಿಗೆಲ್ಲ ಕೈಮುಗಿಯುವುದು ಜನಸಾಮಾನ್ಯದ ಪದ್ಧತಿ. ಯಾವ ದೇವರಿಗೂ ಅಸಮಾಧಾನವಾಗದಿರಲೆಂಬುದು ಅವರ ಉದ್ದೇಶವಿರಬೇಕು. ಪರಮಜಿನಭಕ್ತನಾದ ಬ್ರಹ್ಮಶಿವನಿಗೆ ಇದು ಸರಿಬೀಳಲಿಲ್ಲ. ಕೆಳಗೆ ಕೊಟ್ಟಿರುವ ಪದ್ಯಗಳೊಂದಿಗೆ ಬಸವಣ್ಣನವರ ವಚನಗಳನ್ನು[1] ಹೋಲಿಸಿ ನೋಡಿದರೆ ಆ ಕಾಲದ ನಿಜಸ್ಥಿತಿಯು ಗೊತ್ತಾಗುತ್ತದೆ.

ದೇಗುಲಮಂ ಕಂಡಲ್ಲಿಗೆ| ಪೋಗಿ ಮಹೇಶ್ವರನೆನೆಂಬ ಬಸದಿಗೆ ಬಂದಿ|
ರ್ದಾಗಳೆ ಜೈನನೆನೆಂಬಾ| ಕಾಗೆಗೆ ಸಮ್ಯಕ್ತ್ವಮೊಪ್ಪಲೇನರಿದಪುದೆ||
ಒಂದೆಸೆಯೊಳು ಜಿನಬಿಂಬಮ| ನೊಂದೆಸೆಯೊಳು ಬಳಿಕ ಲಿಂಗಮಂ ಕೃಷ್ಣನನಂ|
ತೊಂದೆಸೆಯೊಳು ಪೂಜಿಸುವಾ | ಸಂದೇಹಿಗೆ ಜೈನತನದ ಪೆಸರೆಂತೆಸೆಗುಂ ||
ಬೇಡಿದ ವರಮಂ ಕುಡುವರೆ| ರೂಢಿಯ ಚಾಮುಂಡಿ ಕಾಳಿ ಮಾಳಚಿಯೆಂಬಾ|
ಜೋಡೆಯರವರಂ ಪೂಜಿಸ| ವೇಡಿಹಪರಸುಖಮನೊಲ್ವುದರ್ಚಿಸು ಜನನಂ||
ನೀರಂ ಪೊಸೆದುಂ ಬೆಣ್ಣೆಯ| ನಾರಾನುಂ ಪಡೆದರೊಳರೆ . . . ಮೈ|
ಲಾರಂ ಕೇತಂ ಕಾಟಂ| ಮಾರಿಗೆ ಮಸಣಿಗೆಯೆನಿಪ್ಪ ಕೊಳಿದೆಯ್ವಂಗಳ್ ||

---

[1] ಭಕ್ತರ ಕಂಡರೆ ಬೋಳರಪ್ಪಿರಯ್ಯ, ಸವಣರ ಕಂಡರೆ ಬತ್ತಲೆಯಪ್ಪಿರಯ್ಯ . . . ಬ. ವಚನಗಳು (ಪುಟ ೧೬). ಹಾಳು ಮೊಱಡಿಗಳಲ್ಲಿ, ಊರ ದಾರಿಗಳಲ್ಲಿ, ಕೆರೆ ಬಾವಿ ಹೂಗಿಡು ಮರಂಗಳಲ್ಲಿ, ಗ್ರಾಮದ ಮಧ್ಯದಲ್ಲಿ, ಚೌಪಥ ಪಟ್ಟಣಪ್ರದೇಶದಲ್ಲಿ, ಹಿರಿಯಾಲದ ಮರದಲ್ಲಿ ಮನೆಯ ಮಾಡಿ ಕಱುವೆಮ್ಮೆಯ ಹಸುಗೂಸು, ಬಸಿಱೆ, ಬಾಣತಿ, ಕುಮಾರಿ, ಕೊಡಗೂಸೆಂಬವರ ಹಿಡಿದುಂಬ ತಿರಿದುಂಬ ಮಾರಯ್ಯ ಬೀರಯ್ಯ, ಕೇತರ, ಗಾವಿಲ, ಅಂತರಬೆಂತರ, ಕಾಳಯ್ಯ ಮಾರಯ್ಯ ಮಾಳಯ್ಯ ಕೇತಯ್ಯಗಳೆಂಬ ನೂಱು ಮಡಕೆಗೆ ನಮ್ಮ ಕೂಡಲಸಂಗಮದೇವನೆಂಬ ಒಂದು ದಡಿ ಸಾಲದೆ? ಬ. ವ. (ಪುಟ ೮೩). ತೊಱೆಯ ಮಿಾವ ಅಣ್ಣಗಳಿರಾ, ತೊಱೆಯ ಮಿಾವ ಸ್ವಾಮಿಗಳಿರಾ ತೊರೆಯಿಂಭೋ . . . ಬ. ವ. (ಪುಟ ೯೮). ಮಡಕೆ ದೈವ, ಮೊಱದೈವ . . . ದೈವ ದೈವವೆಂದು ಕಾಲಿಡಲಿಂಬಿಲ್ಲ. ದೇವನೊಬ್ಬನೇ ನಮ್ಮ ಕೂಡಲಸಂಗಮದೇವ. ಬ. ವ. (ಪುಟ ೮೪).

ತೊಱೆಗಳ ದೀರ್ಘಿಕೆಗಳ ಪೆ | ರ್ಗೆಱೆಗಳ ತಡಿಯಲ್ಲಿ ರಂಗವಂ ಬರೆದುಂ ಜೊ |
ಬ್ಬುಱಿದು ಸುರಿವಲ್ಲಿ ಪಲದಿಂ | ತೆಱಿದಡುಗೆಯನಿಂತು ಬರಿದೆ ಕಿಡಿಪರ್ ಮೂಢರ್ ||
ನಡುಬೀದಿಯೊಳುಂ ಪಶುಗಳ | ಪಡುವೆಡೆಯೊಳಮೂರ ಪಿರಿಯ ಚಾವಟ್ಟುದೊಳಂ |
ತೊಡೆದು ಬರೆದಲ್ಲಿ ರಂಗವು | ನಡುಗೆಗಳಂ ಸೂಸಿ ಕಳೆವ ಮೂಢರ್ ||
ಮಾರಿಯನೆ ಮನೆಗೆ ಪಂದುಂ | ಮರಿಯನೂರಿಂಗೆ ತಂದು ಮಡಗಿಂ (ಗಂ) ಕಳ್ದಿಂ |
ದಾರಂಭದ ಪೊಸಬೆಳಸಿಂ | ಭೋರೆನೆ ಪರಿವೊಳಗಭಾಧಿ ಕಳಿಪುವರವಳಂ ||
. . . ನೀರಿಂ ಪೋಪಂತು ಮೆಯ್ಯಕೊಳೆಯೆ ಪಾಪಂ ?
ಪಲವುಂ ತೊಱೆಗಳ ನೀರಂ | ಸಲೆ ಮಿಂದಡೆ ಪೋಪುವಲ್ಲ ಪಾಪಂಗಳಾ ನಿ ||
ರ್ಮಳ ಜನಧರ್ಮಮುಮೆಂಬೀ | ಜಳದಿಂ ಕಚ್ಚುವುದು ಪಾಪಪಂಕವನಱಿವಂ ||

ಅಷ್ಟೇ ಅಲ್ಲ. ಬ್ರಹ್ಮಶಿವನು ಬಸವೇಶ್ವರನ ವಚನಗಳಿಗೆ ಪ್ರತ್ಯುತ್ತರವನ್ನು ಕೊಟ್ಟಿರುವಂತಿದೆ, ಶಿವಶರಣರ ನಡೆನುಡಿಗಳನ್ನು ಹೀಯಾಳಿಸಿರುವಂತಿದೆ. "ಕೊಡುವಾತ ಸಂಗ ಕೊಂಬಾತ ಸಂಗ" ಎಂಬ ಬಸವೇಶ್ವರನ ವಚನವನ್ನು ಮನಸ್ಸಿನಲ್ಲಿಟ್ಟುಕೊಂಡು ಈ ಕೆಳಗಿನ ಪದ್ಯವನ್ನು ಬರೆದಿರುವನೆಂದು ಊಹಿಸಿದರೆ ತಪ್ಪಾಗಲಾರದು.

ಅಲ್ಲದೆ—

ಕುಡುವಂ ತಾಂ ಕುಡುವುದು ತಾಂ | ಕುಡೆ ಕೊಳ್ವಂ ತಾನೆ ದೇವನಿತ್ತಂ ಗೊಳ್ವಂ |
ನುಡಿವವನಂ ತಾನೆಂಬನ | ನುಡಿಯಂ ಕೈಕೊಳ್ಳದಿರ್ಪವಂ ಮತಿವಂತಂ ||
ಪರಿದು ಪಿಡಿತಂದು ಪುಲ್ಲೆಯ | ಗೊರವಂಗುಣಲಿಕ್ಕಿ ವಿಸಿಸಿ ಸೂಳೆಯೊಳವನಂ |
ನೆರಪಿದೊಡವಂಗೆ ಸ್ವರ್ಗಂ | ದೊರೆಕೊಳ್ಗುಂ ನಿರುತಮೆಂದು ನೆಗಳ್ವರ್ ಮೂಢರ್ ||

ಚಿರಕುಟಮನಿಟ್ಟು ಕೆಯ್ಯೊಳ್ | ತಿರಿದುಣುತುಂ ದೆಸೆಗೆ ನಗುತ ಮಾಡುತ್ತಿರ್ಪಾ |
ಮರುಳೊಂದಂ ನುಡಿದೊಡದಂ | ನಿರುತವಿದಾದೇಶವಚನಮೆಂಬರ್ ಮೂಢರ್ ||
ದಯೆ ತಮ್ಮಾಪ್ತರೊಳಿಲ್ಲದ | ದಯೆಯನವರ್ ಕಳ್ದು ತಪ್ಪರೇ ಲಿಂಗಿಗಳಾ |
ದಯೆ ಜಿನನೊಳುಳ್ಳ ಕತದಿಂ | ದಯೆಯನೆ ಮುಂದಿಟ್ಟು ಜೈನರೆಸಗುತ್ತಿರ್ಪರ್* ||

---

* ದಯವಿಲ್ಲದ ಧರ್ಮವದಾವುದಯ್ಯ, ದಯವೇ ಬೇಕು ಸಕಲಪ್ರಾಣಿಗಳೆಲ್ಲರಲ್ಲಿ ದಯವೇ ಧರ್ಮದ ಮೂಲವಯ್ಯ. . . . ಬ. ವಚನಗಳು.

"ನೆರಪಿದುದೊಂದು ಪಾಪಫಲದಿಂದೆ ಕುಯೋನಿಗಳೊಳ್ ನಿರಂತರಂ
ತಿರಿತರುತಿಪ್ಪ ಜೀವನಿಕರಕ್ಕೆಱಿಗುತ್ತಿರೆ ಸೌಖ್ಯಮಕ್ಕುಮೇ
ತಿರಿದುಣುತಿಪ್ಪ ಕಪ್ಪಡಿಯನೋಲಗಿಸುತ್ತ ಮಹಾವಿಭೂತಿಯೊಳು
ನೆರೆದನಮೋಘಮೆಂದು ಮನವಾಲುಡಿವಂಗದು ಹಡೆತಂತೆ ಬಲು"

ಈ ಪದ್ಯ ಬಸವೇಶ್ವರನ ಜೀವನಚರಿತ್ರೆಗೆ ಸಂಬಂಧಪಟ್ಟುದೆಂದು ತೋರುವುದು. ಇದರ ಶುದ್ಧವಾದ ರೂಪ ಸಿಗದೆ ಏನೂ ಹೇಳುವಂತಿಲ್ಲ.

ಈ ಎರಡು ಪದ್ಯಗಳು ಸುಖಿಜಂಗಮರಿಗೆ ಬಸವೇಶ್ವರನು ಮಾಡುತ್ತಿದ್ದ ಉಪಚಾರದ ಹೆಚ್ಚಳವನ್ನೂ ವೀರಶೈವರ ವಚನಗಳು ಹೇಗೆ ಹುಟ್ಟಿದುವು ಎಂಬುದನ್ನೂ ಸೂಚಿಸುತ್ತವೆಯೆಂದು ಕಾಣುತ್ತದೆ. ಅಂತೂ ಬ್ರಹ್ಮಶಿವನು ತನ್ನ ಗ್ರಂಥವನ್ನು ಬರೆದಾಗ ಜೈನಮತವು ಅತ್ಯಂತ ಅವನತಿಸ್ಥಿತಿಯಲ್ಲಿತ್ತೆಂದೂ, ಬಸವೇಶ್ವರನ ಮತ್ತು ಅವನ ಅನುಯಾಯಿಗಳ ಮತಪ್ರಸರಣ ಕಾರ್ಯವು ಆಗಲೇ ನಡೆದಿತ್ತೆಂದೂ, ತೋರುತ್ತದೆ.

ತನ್ನ ಗ್ರಂಥದ ಆದಿಯಲ್ಲಿ ಬ್ರಹ್ಮಶಿವನು ಪೆರ್ಗಡೆ ಬೊಮ್ಮನನ್ನೂ "ಆ ವಿಭುವಿನಗ್ರತನಯ"ನಾದ ನಾಗದೇವನನ್ನೂ ಅವನ ಮಗ ಆಹವಮಲ್ಲಮಹೀಶನನ್ನೂ ಹೊಗಳಿದ್ದಾನೆ. ಆಹವಮಲ್ಲನು ಗೋವೈದ್ಯವನ್ನು ಬರೆದಿರುವ ಕವಿಕೀರ್ತಿವರ್ಮನಂತೆಯೇ ಕೊಡುಗೈ ದೊರೆಯಾಗಿದ್ದು ಜೈನಮತಕ್ಕೆ ಬಹಳ ಪ್ರೋತ್ಸಾಹವೀಯುತ್ತಿದ್ದನೆಂದು ಬ್ರಹ್ಮಶಿವಕವಿಯ ಪದ್ಯದಿಂದಲೇ ಗೊತ್ತಾಗುತ್ತದೆ. ಆ ಆಹವಮಲ್ಲದೇವನೇ ಬ್ರಹ್ಮಶಿವನಿಗೆ 'ಕವಿಚಕ್ರವರ್ತಿ'ಯೆಂಬ ಬಿರುದನ್ನು ಕೊಟ್ಟಿರುವಂತೆ ಕಾಣುತ್ತದೆ. ಶ್ರವಣಬೆಳಗೊಳದ ೬೬ನೆಯ (೧೧೭೬) ಮತ್ತು ೩೩೫ನೆಯ (೧೧೯೫) ಶಾಸನಗಳಲ್ಲಿ ಈ ಬೊಮ್ಮದೇವಾದಿಗಳು ಸ್ತುತಿಸಲ್ಪಟ್ಟಿದ್ದಾರೆ. ಆದರೆ ಶಾಸನಗಳಲ್ಲಿ ನಾಗದೇವನ ಮಗ "ಮಲ್ಲಿದೇವ", "ಮಲ್ಲಿನಾಥ" ಎಂದೂ, ಅವನು 'ಪುರಪತಿ' ಯಾಗಿದ್ದನೆಂದೂ ಹೇಳಿದೆ. ಈ ಮಲ್ಲಿದೇವ ಅಥವಾ ಮಲ್ಲಿನಾಥನೇ ಬ್ರಹ್ಮಶಿವನು ಹೇಳಿರುವ 'ಆಹವಮಲ್ಲ ಮಹೀಶ'ನಿರಬೇಕು. ಎಂದರೆ ಬ್ರಹ್ಮಶಿವನು ೧೧೭೬ ರಿಂದ ೧೧೯೫ರ ವರೆಗೆ ಜೀವಿಸಿದ್ದಿರಬಹುದೆಂದು ಹೇಳಿದಂತಾಯಿತು.

ಕವಿಯು ಇಬ್ಬರು ಮೇಘಚಂದ್ರರನ್ನೂ ಇಬ್ಬರು ವೀರಣಂದಿಗಳನ್ನೂ ಹೊಗಳಿದ್ದಾನೆಂದು ಈ ಮೊದಲೇ ಗೊತ್ತಾಗಿದೆ. ಮೊದಲನೆಯ ಸಾರಿ ಹೆಸರಿಸಿರುವ ವೀರಣಂದಿಯು ಮೇಘಚಂದ್ರನ ಶಿಷ್ಯನೂ ಪ್ರಭಾಚಂದ್ರದೇವರ ಸಧರ್ಮನೂ ಆಗಿದ್ದವನೆಂದು ಕಾಣುತ್ತದೆ.[1] ಈ ವೀರಣಂದಿಯನ್ನು ಹೊಗಳಿದ ಮೇಲೆ ಪುನಃ ವೀರಸೇನ ಭಟ್ಟಾರಕರು ಕವಿಪರಮೇಷ್ಠಿ ಬಾಳಚಂದ್ರ ಮೇಘಚಂದ್ರ ವೀರಣಂದಿ ಇವರ ಹೆಸರನ್ನೆತ್ತಿದ್ದಾನೆ. ೧೧೭೬ರಲ್ಲಿ ಮೃತಿಹೊಂದಿದ ನಯಕೀರ್ತಿಯ ಶಿಷ್ಯಗಣದಲ್ಲಿ ಬಾಲಚಂದ್ರ ಮೇಘಚಂದ್ರರೂ ಇದ್ದಾರೆ. ಆದುದರಿಂದ ಕವಿಯು ಹೊಗಳಿರುವ ಬಾಲಚಂದ್ರ ಮೇಘಚಂದ್ರರು ನಯಕೀರ್ತಿಯ ಶಿಷ್ಯರಿರಬೇಕು. ಈ ಮೇಘ

---

[1] ಶ್ರವಣಬೆಳಗೊಳದ ೧೨೭ನೆಯ ಶಾಸನದಲ್ಲಿರುವ ಮೇಘಚಂದ್ರನಿಗೆ ಸಂಬಂಧಪಟ್ಟ ಪದ್ಯಗಳನ್ನೂ, ೧೪೦ನೆಯ ಶಾಸನದಲ್ಲಿರುವ ವೀರಣಂದಿಗೆ ಸಂಬಂಧಪಟ್ಟ ಪದ್ಯಗಳನ್ನೂ ಬ್ರಹ್ಮಶಿವನು ಇವರನ್ನು ಹೊಗಳಿರುವ ಪದ್ಯಗಳೊಂದಿಗೆ ಹೋಲಿಸಿ ನೋಡಿದರೆ ಈ ವಿಷಯ ನಮಗೆ ಚೆನ್ನಾಗಿ ಮನವರಿಕೆಯಾಗುತ್ತದೆ.

ಚಂದ್ರನ ಶಿಷ್ಯ ಒಬ್ಬ ವೀರಣಂದಿ ಇದ್ದನೆಂದು ಶ್ರ. ಬೆ. ೭೫ ನೆಯ 'ಶಾಸನದಿಂದ ಗೊತ್ತಾಗುತ್ತದೆ. ಆದುದರಿಂದ ಬ್ರಹ್ಮಶಿವನ ಗುರುವಾದ ವೀರಣಂದಿಯೂ ನಯ ಕೀರ್ತಿಯ ಪ್ರಶಿಷ್ಯ ವೀರಣಂದಿಯೂ ಅಭಿನ್ನರೆಂದು ತೋರುತ್ತದೆ.[1]

ಬ್ರಹ್ಮಶಿವನು

ಪೊನ್ನನೆ ಪಂಪನೆ ರಜಕನೆ| ರನ್ನನೆ ಕವಿತಾಗುಣೋದಯನೆ ದರ್ಶನಸಂ |
ಪನ್ನತೆಯೊಳ್ ಕವಿತೆಯೊಳವ | ರನ್ನನೆ ವಿದಿತಾತ್ಮಭಾವನಗ್ಗಳದೇವಂ ||

ಎಂದು ಅಗ್ಗಳನನ್ನು ತನ್ನ ಗ್ರಂಥದ ಆದಿಯಲ್ಲಿ ಹೊಗಳಿರುವುದು ಮಾತ್ರವಲ್ಲ, "ಅಗ್ಗಳದೇವನ ಕಳೆಯಂ" ಎಂದು ಬಹು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ಈ ಅಗ್ಗಳನು ಚಂದ್ರಪ್ರಭ ಪುರಾಣವನ್ನು ೧೧೮೯ ರಲ್ಲಿ ಮುಗಿಸಿದ ಅಗ್ಗಳದೇವನೇ ಇರಬೇಕು. ಆ ಕಾಲದಲ್ಲಿ ಎಂದರೆ ಹನ್ನೆರಡನೆಯ ಶತಮಾನದ ಕಡೆಯ ದಶಕಗಳಲ್ಲಿ ಜೀವಿಸುತ್ತಿದ್ದ ಅಗ್ಗಳದೇವ ಎಂಬ ಹೆಸರಿನ ಇನ್ನೊಬ್ಬ ಕವಿ ಇದ್ದನೆಂದು ಇದುವರೆಗೆ ತಿಳಿದುಬಂದಿಲ್ಲ. ಆದುದರಿಂದ ಬ್ರಹ್ಮಶಿವನು ೧೧೮೯ ರಲ್ಲಿದ್ದನೆಂದು ಸಿದ್ಧವಾಗುತ್ತದೆ.

ಬ್ರಹ್ಮಶಿವನ ಗುರು ವೀರಣಂದಿಯು ನಯಕೀರ್ತಿ ದೇವರ ಪ್ರಶಿಷ್ಯನೇ ಇದ್ದ ಪಕ್ಷದಲ್ಲಿ ತಾನು ಸಮಯಪರೀಕ್ಷೆಯನ್ನು ೧೧೮೯ ಕ್ಕಿಂತ ಈಚೆಗೆ ಬರೆದನೆಂದು ಕಾಣುತ್ತದೆ. ನಯಕೀರ್ತಿಯ ಶಿಷ್ಯನಾದ ಬಾಲಚಂದ್ರನೇ ೧೨೧೩ ರಲ್ಲಿಯೂ ಇದ್ದ ನೆಂದು ಶಾಸನಗಳಿಂದ ಗೊತ್ತಾಗುತ್ತದೆ. ಆ ಬಾಲಚಂದ್ರನ ಸಧರ್ಮನಾದ ಮೇಘ ಚಂದ್ರನ ಶಿಷ್ಯ ವೀರಣಂದಿಯು 'ಸುಗತಿಗೆ ಸಂದ' ಮೇಲೆ ಬ್ರಹ್ಮಶಿವನು ತನ್ನ ಗ್ರಂಥವನ್ನು ಬರೆದಿದ್ದಾನೆ. ಆದುದರಿಂದ ವೀರಣಂದಿಯು ೧೧೯೦–೧೧೯೫ ರಲ್ಲಿ ಮೃತಿಹೊಂದಿರಬಹುದೆಂದೂ ಆ ಮೇಲೆ ಬ್ರಹ್ಮಶಿವನು ಗ್ರಂಥರಚನೆ ಮಾಡಿರಬಹು ದೆಂದೂ ಊಹಿಸಬಹುದು.

೧೨೦೦ ರಲ್ಲಿ ಹುಟ್ಟಿದ ಶ್ರವಣಬೆಳಗೊಳದ ೧೩೩ ನೆಯ ಶಾಸನದಲ್ಲಿ ಮಲ್ಲದೇವನ ತಂದೆ ನಾಗದೇವ ಯಾರಿಗೋ ಒಂದು ದತ್ತಿಬಿಟ್ಟ ಸಂಗತಿ ಇದೆ. ಮಲ್ಲದೇವನು ಬರಿಯ ಪುರಪತಿಯಾಗಿರದೆ ಮಾಂಡಲಿಕನೋ ಹೆಗ್ಗಡೆಯೋ ಆಗಿದ್ದಾಗ ಬ್ರಹ್ಮ ಶಿವನಿಗೆ ಪ್ರೋತ್ಸಾಹವೂ ಕವಿಚಕ್ರವರ್ತಿ ಎಂಬ ಬಿರುದೂ ದೊರಕಿರಬೇಕು. ಆದುದ ರಿಂದ ಬ್ರಹ್ಮಶಿವನು ೧೨೦೦ ರ ಸುಮಾರಿನಲ್ಲಿ ಸಮಯಪರೀಕ್ಷೆಯನ್ನು ಬರೆದು

---

[1] ಇದೇ ಗಣಗಚ್ಛಕ್ಕೆ ಸೇರಿದ ವೀರಣಂದಿ ಸೈದ್ಧಾಂತಿಕನ ಹೆಸರು ಅನಂತಪುರ ಜಿಲ್ಲೆಯ ಒಂದು ಶಾಸನದಲ್ಲಿ ಉಕ್ತವಾಗಿದೆ. . . . ವೀರಣಂದಿ ಸೈದ್ಧಾಂತಿ ಚಕ್ರವರ್ತಿ ದೇವರ ಪ್ರಿಯ ನಂದನರುಮಪ್ಪ ಪದ್ಮಪ್ರಭ ಮಲಧಾರಿದೇವರ್—ಎಂದು ಮುಂತಾಗಿ ಇದೆ. ಈ ಶಾಸನದ ಕಾಲ ೧೧೮೫. (*Inscriptions of Madras Presidency*, Vol ix, 1st part, page 299).

ಮುಗಿಸಿರಬಹುದೆಂದು ಕಾಣುತ್ತದೆ. ಕವಿ ಚಕ್ರವರ್ತಿ ಎಂಬ ಬಿರುದನ್ನು ಗಳಿಸಿದ ಮೇಲೆ ತ್ರೈಲೋಕ್ಯ ಚೂಡಾಮಣಿಯನ್ನು ರಚಿಸಿದ್ದಾನೆ.

---

## ಪರಿಶಿಷ್ಟ

### (ಬ್ರಹ್ಮಶಿವಕವಿಕೃತ 'ಸಮೆಯಪರೀಕ್ಷೆ'ಯ ಆದಿಯ ಕೆಲವು ಪದ್ಯಗಳು*)

ಶ್ರೀವೀರಜಿನಾಧೀಶಂ
ದೇವರದೇವಂ ವಿಬೋಧದೃಗ್ವೀರ್ಯಸುಖಾಶ್ರಿ
ತವಲ್ಲಭನನುಪಮನೊಸೆ
ದಾವಗಮೆಮಗೀಗೆ ವಿಮಳರತ್ನತ್ರಯಮಂ ‖ ೧ ‖

ನಮಗೀಗತ್ಯಂತ ಸೌಖ್ಯಾಸ್ಪದಮನೊಸೆದು ಕಾರುಣ್ಯದಿಂ ಶ್ರೀಜಿನೇಂದ್ರಂ
ಕಮನೀಯಾಂಗಾತ್ಮತೇಜಃಪ್ರಸರದೆಸಕದಿಂ ವಿಶ್ರುತಂ ಮೋಕ್ಷಲಕ್ಷ್ಮೀ
ರಮಣಂ ಸರ್ವಜ್ಞನಾನಂದಿತಭುವನಜನಂ ಘೋರಸಂಸಾರದೂರಂ
ವಿಮಳಜ್ಞಾನಸ್ವರೂಪಂ ತ್ರಿಭುವನತಿಳಕಂ ವಿಶ್ವದೇವಾಧಿದೇವಂ ‖ ೨ ‖

ಜಗದೊಳಗುಳ್ಳ ಸುತತ್ವಮ
ನಗಣಿತಮನನಂತಭೇದಭಿನ್ನಸ್ಥಿತಿಯಂ
ಸುಗಮದಿನಱಿವಂತಿರೆ ಪೇ
ಳ್ದ ಗುಣಾಢ್ಯಂ ಗೃಧ್ರಪಿಂಛಮುನಿ ಕೇವಳನೇ ‖ ೩ ‖

ಕವಿಗಮಕಿವಾದಿವಾಗ್ಮಿ
ಪ್ರವರದೊಳುತ್ಕೃಷ್ಟಮೆನಿಸಿ ತಪದಿಂ ಶ್ರುತದಿಂ
ತವಗೆಣೆಯಿಲ್ಲೆನೆ ಜಗದೊಳ್
ಭುವನಾಭ್ಯರ್ಚಸಮಂತಭದ್ರದೇವರ್ ನೆಗಳ್ದರ್ ‖ ೪ ‖

ಇನನಸ್ತಂಗತನಾಗೆ ತತ್ಸಮಯದೊಳ್ ಕೆಯ್ಯಿಕ್ಕಿ ವಂಶಾವಳೀ
ವನಮಧ್ಯಸ್ಥಿತನಾಗಿ ವಾಯುವಶದಿಂ ಕೇಶಂಗಳಂ ಸುತ್ತಿವೇ
ಣ್ಣಿನಿಕಾಯಂಬಿಡಲೆತ್ತಿ ಮೋದುತಿರಲ್ ದ್ರವ್ಯಾನುಪ್ರೇಕ್ಷೆಯಂ
ಮನದೊಳ್ ಭಾವಿಸಿ ಪೇಳ್ದ ಸೈರಣೆಯವಾನುಪ್ಪಜಟಾಚಾರ್ಯರಂ ‖ ೫ ‖

ಪದದನುರಾಗದಿಂ ನೆಗಳ್ದ ಶಾಸನದೇವತೆ ಪೂಸೆ ಪಾದಲೇ
ಪದ ಗುಣದಿಂದೆ ಯೋಜನಸಹಸ್ರ(ಮ)ನೊರ್ಮೊದಲೈದುದೊಂದು ಸಂ|
ಪದಮನಪೂರ್ವವಾಗೆ ತಳೆದೀ ಧರೆಯೊಳ್ ಸಲೆ ಪೂಜ್ಯಪಾದ ನಾ
ಮದಿನೆಸೆದಾ ಮುನೀಂದ್ರನನತಂದ್ರನನರ್ತಿಯೊಳಾರ್ ಬಣ್ಣಿಪಂ ‖ ೬ ‖

---

* ಮೂಡುಬಿದಿರೆ ಮಠದಲ್ಲಿದ್ದ 'ಸಮಯಪರೀಕ್ಷೆ'ಯ ಪ್ರತಿಯಿಂದ ಎತ್ತಿ ಬರೆದುಕೊಂಡುವು.

ಸಕಲಪ್ರಾಣಿಹಿತಾರ್ಥವಾಗೆ ರುಜಿಗಳ್ ಪಿಂಗಲ್ಕೆ ಕಲ್ಯಾಣ ಕಾ
ರಕಮಂ ವಾಗ್ಮಳಮಂ ತೆರಳ್ಚಿ ಕಳೆಯಲ್ ಜೈನೇಂದ್ರಮಾ ಚಿತ್ತದೊಂ।
ದು ಕಳಂಕಂ ಕಿಡಿಸಲ್ ಸಮಾಧಿಶತಕಯೋಗಗ್ರಂಥಮಂ ಪೇಳ್ದು ಸ
ರ್ವಕವೀಂದ್ರಸ್ತುತಶುದ್ಧಚಿತ್ತನೆಸೆದಂ ಶ್ರೀಪೂಜ್ಯಪಾದೋತ್ತಮಂ ॥ ೭ ॥

ಅಸದೃಶಮಿವೆನಿಸಿ ಲೋಕ
ಕ್ಕೆಸೆಯೆ ಮನೋವಚನಕಾಯಮಳಮಂ ಕಳೆಯ
ಲ್ಕೆ ಸಮರ್ಥವೆನಿಪುವಂತೆ ರ
ಚಿಸಿದರ್ ಕೇವಳಮೆ ಪೂಜ್ಯಪಾದಮುನೀಂದ್ರಂ ॥ ೮ ॥

ಜಿನಶಾಸನಕ್ಕೆ ಭೂಷಣ
ಮೆನಿಸಿರ್ದಕಳಂಕತರ್ಕಮಂ ಪೇಳ್ದ ಮಹಾ।
ಮುನಿಯಂ ಭವ್ಯಾಂಬುಜ ಮಿ
ತ್ರನನೊಲ್ದಕಳಂಕದೇವನಂ ಪೊಗಳದರಾರ್ ॥ ೯ ॥

ಎರಡುಂ ಕೈಯ ತಳಂಗಳೊಂದೆ ಪುಟದೊಳ್ ಸಂಪ್ರೀತಿಯಿಂದಿಟ್ಟು ನಿ
ರ್ಭರದಿಂ ಚಾರಣರಾ ವಿದೇಹಮಹಿಗೊಯ್ಯಲ್ ಪೋಗಿಸೀ ಮಂದರೇ।
ಶ್ವರರಂ ಬಂದಿಸಿ ತತ್ಪ್ರಣೀತ ಸಮಯಗ್ರಂಥಂಗಳಂ ತಂದು ಬಿ
ತ್ತರದಿಂ ಬಿತ್ತಿದ ಕೊಂಡಕುಂದ ಮುನಿನಾಥ ಖ್ಯಾತಿಲೋಕೋತ್ತಮರ್ ॥ ೧೦ ॥

ಈ ಮಹೀಮಂಡಲಂ ಪೊಗಳೆ ಪೂರ್ವವಿದೇಹದೊಳಿರ್ದು ದೋ
ಸಾಮಿ ಸುಲೋಚನಾಚರಿತೆ ಪಾಹುಡಮೆಂಬ ಪುರಾಣಮಂ।
ಮನಃಪ್ರೇಮದಿನೋದುತಿರ್ಪ ಯತಿಗಳ್ಗೆ ನಿರನ್ವಯವಾಗಲೆಂದು
ತಂದಾ ಯತಿನಾಥನಿಂ ಪಿರಿಯರುಂ ಪೆಱರುಂಟೆ ತಪಃಪ್ರಭಾವದಿಂ ॥ ೧೧ ॥

ದ್ರವ್ಯಂಗಳಂದಮಂ ಷ
ಡ್ದ್ರವ್ಯಪರದ್ರವ್ಯಭೇದ ಭಿನ್ನಸ್ಥಿತಿಯಂ।
ಶ್ರವ್ಯಮೆನೆ ಪೇಳ್ದು ಮುನಿಜನ
ಸೇವ್ಯಮೆನಲ್ ಕೊಂಡಕುಂದಮುನಿಗಳ್ ನೆಗಳ್ದರ್ ॥ ೧೨ ॥

ವಾದಿಗಳೊಳಗತ್ಯುತ್ತಮ
ವಾದಿಗಳೈವತ್ತನಾಲ್ವರಂ ಗೆಲ್ದ ವಚ।
ಶ್ರೀದಯಿತನಮಳಿನಸ್ಯಾ
ದ್ವಾದಾಚಳಸಿಂಹನಖಿಳತಾರ್ಕಿಕಭೂಪಂ ॥ ೧೩ ॥

ಜಿನಸಮಯಾಂಬರಸೋಮಂ
ವಿನೇಯಜನಕುಮುದಸೋಮನಖಿಳಧರಿತ್ರೀ।

ಜನನಯನೋತ್ಸವಸೋಮಂ
ಜನಸ್ತುತಂ ಸೋಮದೇವ ಪಂಡಿತದೇವಂ || ೧೪ ||

ಪರಮಜಿನಚರಣಭಕ್ತಂ
ಪರಮಾಗಮವೇದಿ ಪರಮಮುನಿತುಷ್ಟಿಕರಂ |
ಪರಮನರೇಶ್ವರವಂದ್ಯಂ
ಧರೆಗೆಸೆದಂ ಪರಮಪಂಡಿತಂ ಭೂಪಾಲಂ || ೧೫ ||

ಪೊಸೆಯದೆ ಪಜ್ಜೆಗಳಂ ನಾ
ಲ್ದೆಸೆಯೊಳಮೆಂಟೆಂಟು ದಿವಸಮಿರುಳುಂ ಪಗಲುಂ |
ಮಿಸುಕದೆ ನಿಲೆ ನಿಂದೆಸವರ್
ಪಸರಿಸಿದರ್ ಲೋಕದೊಳ್ ಚತುರ್ಮುಖದೇವರ್ || ೧೬ ||

ಮೆಟ್ಟಿಯೆ ನಿಲ್ವ ಕಲ್ಲನುರೆ ಸುಟ್ಟೊಡಮಂಘ್ರಿಗಳುರ್ಚೆ ಗೂಂಟಮಂ
ಬೆಟ್ಟದೊಡಂ ಮಹೋಗ್ರಫಣಿ ಸುತ್ತಿದೊಡಂ ಮೊಳಕಾಲ್ಗಳಂ ಬಿಡಲ್ |
ಬಟ್ಟಲನೋವದೆತ್ತಿದೊಡಮುಳ್ಕ(ಳ್ಕ)ದೆ ಮೇರುನಗೇಂದ್ರದಂದದಿಂ
ಬೆಟ್ಟದ ದೇವರಲ್ಲದರ್ಗೆ ತೀರ್ಗುಮೆ ನಿಶ್ಚಳಯೋಗದಿಂದಿರಂ || ೧೭ ||

ವಾದಿಗಳೆನೆ ನೆಗಳ್ದ ಮಹಾ
ವಾದಿಗಳಂ ನುಡಿದು ಗೆಲ್ದು ಚಕ್ರೇಶ್ವರನೊ|
ಲ್ದಾದರಿಸಿ ನೆಗಳ್ದನಿಂತೀ
ಮೇದಿನಿಯೋಳ್ ವಾದಿರಾಜದೇವರೆ ದೇವರ್ || ೧೮ ||

ವನಗಜಮುಳ್ಳ ಪೇರಡವಿಯೊಳ್ ಬರೆ ಕಟ್ಟಿದಿರಾಗಿ ತಾಗೆ ಬೆ
ನ್ನನೆ ಪರಿತಪ್ಪ ಪೆರ್ಬುಲಿ ಮಹಾಫಣಿ ಸಂಕುಳಮೆಯ್ದೆವಪ್ಪ ಕಾ |
ಯ್ಪಿನ ಪಗೆ ಕೂಡೆ ಮಾಡುವುಪಸರ್ಗಮದಾಗಳೆ ಮಾಣ್ಬುಮರ್ಥಿಯಂ
ನೆನೆದೊಡೆ ಮೇಘಚಂದ್ರಮುನಿವಲ್ಲಭದಿವ್ಯಪದಾಂಬುಜಂಗಳಂ || ೧೯ ||

ಮೊಗದೊಳ್ ವಾಗ್ವಧು ಸಂತತ
ಮಗಲದೆ ನಿಲೆ ಕೀರ್ತಿವಧುಗೆ ಕೂರ್ತುಂ ಮತ್ತ |
ರ್ಥಿಗಳಮೃತವಧುಗೆ ತಪದು
ಜ್ಜುಗವೆಂತುಟೊ ಮೇಘಚಂದ್ರಮುನಿಪುಂಗವರಾ || ೨೦ ||

ಮಳಧಾರಿಗಳೆನೆ ನೆಗಳ್ದಂ
ಮಳರಹಿತಮೆನಿಪ್ಪ ತಪದೆ ಸುಚರಿತ್ರದೆ ನಿ |
ರ್ಮಳತೇಜೋಭುಂಭುಕಮಾ
ಯಿತ್ತಳೆಗಚ್ಚರಿ ವೀರಣಂದಿಮಲಧಾರಿಗಳಾ || ೨೧ ||

ವೀರದಗುರ್ವಿಂದುಗ್ರನ
ವೀರಮನದಟಲೆದು ನೆಗಳ್ದ ಮದನನ ಮದಮಂ |
ಬೀರಮುಮನಲೆದು ಗೆಲ್ದುದು
ವೀರತಪಂ ವೀರಣಂದಿಮಲಧಾರಿಗಳಾ || ೨೨ ||

ಮುನಿಸೊಂದಾದಂದೆ ಸನ್ನೆಸನ ವೀರದಶನಂ ದರ್ಶಿಯಾದಂದೆ ಸನ್ಯ
ಸನವಕ್ಷಿ ಕ್ಷುದ್ರನಿದ್ರಾಭರದಿನೊಬಿಗೆ ಸನ್ಯಸನಂ ಗಾತ್ರ ಕಂಡೂ |
ಯನಮಂ ಕೈಮುಟ್ಟಿ ಸನ್ನೆಸನ ಮಗುಳ್ದಡೆ ಸನ್ನೆಸನ ಪೂಣ್ಕೆಯಂ
ದೆನಸುಂ ತಾನೇಂ ಪರಿಚ್ಛೇದಿಯೊ ತಪದ ಬೆಡಂಗಂ ಗುಣವ್ರಾತತುಂಗಂ || ೨೩ ||

ಅತಿಧವಳಮೆನಿಸಿರ್ದ
ಶ್ರುತವದೆ ತಾಂ ಮೂರ್ತಿಗೊಂಡುದೆಂಗುಂ ಲೋಕಂ |
ಶ್ರುತಕೇವಳಿ ಜನಸೇನರ
ನತಂದ್ರರಂ ವೀರಸೇನ ಭಟ್ಟಾರಕರಂ || ೨೪ ||

ಕವಿಪರಮೇಷ್ಠಿವೆಸರ್ ನಿಜ
ಕವಿತಾಗುಣದಿಂದಮೆಸೆಯೆ ಕವಿಜನವಂದ್ಯಂ |
ಕವಿಪರಮೇಷ್ಠಿ ಮುನೀಂದ್ರಂ
ಭುವನಾಂತರ್ವರ್ತಿಕೀರ್ತಿ ನೆಗಳ್ದಂ ಧರೆಯೊಳ್ || ೨೫ ||

ಆಪ್ತೋದಿತ ಲೋಕಪ್ರ
ಜ್ಞಪ್ತಿಗೆ ಮುಂ ಕರ್ತುವಾಗಿ ಕಡೆಯೊಳ್ ನಿಂದಿ |
ದಾಪ್ತ ಸ್ಮರಣೆಯೆನಿಸುವಂ
ವ್ಯಾಪ್ತಯಶಂ ಬಿಟ್ಟು (ಬೊತ್ತು) ಬಾಳಚಂದ್ರಂ ನೆಗಳ್ದಂ || ೨೬ ||

ಧರೆಯೊಳ್ ಸಂದ ಮೊರಂಬದೊಳ್ ನಿಜನಿಶಿಧಿಸ್ಥಾನದೊಳ್ ಮಣ್ಣನಾ
ದರದಿಂದೊರ್ಮೆಯೆ ತಂದು ಪೂಸಲೊಡನತ್ಯುಗ್ರಗ್ರಹಾನೇಕ ಸ |
ರ್ಪರುಜಾಪೀಡೆಗಳಾಗಳಂತೆ ಕೆಡುಗುಂ ತಾನೆಂದೊಡಮ್ಮಮ್ಮ ಬಾ
ಪ್ಪುರೆ ಸಾಮಾನ್ಯಮೆ ಮೇಘಚಂದ್ರಮುನಿಮಾಹಾತ್ಮ್ಯಂ ಧರಾಚಕ್ರದೊಳ್ || ೨೭ ||

ಪದಿಮೂಱುದಿನಂ ಸಂನ್ಯಸ
ನದೆ ಕಾಯೋತ್ಸರ್ಗದಿಂದೆ ನಿಂದುಂ ನಿಂದಂ |
ದದಿನಸುವಂ ಬಿಟ್ಟು ಜಗ
ದ್ವಿದಿತಯಶಂ ವೀರಣಂದಿ ಸುಗತಿಗೆ ಸಂದಂ || ೨೮ ||

ನಯದಿಂದಂ ತಾಯುಂ ತಂ
ದೆಯುಮೊಳ್ಪನೆ ಶಿಕ್ಷಿಪಂತೆ ಮನುಜಾವಳಿಯಂ |

ನಯದಿಂ ಸಂಬೋಧಿಸಿ ಮು
ಕ್ತಿಯೊಳೊಂದಿದ ಪೆರ್ಮೆ ಬಂಧುವರ್ಮಂಗೆ ನಿಜಂ || ೨೯ ||

ರೋಗಂ ಸಮಸ್ತದುಃಖ
ಕ್ಕಾಗರಮದು ಕೇಳಾ ಜೀವಸಂಬೋಧನೆಯಂ |
ಬೇಗಂ ಮಾಣ್ಗುಂ ದುಸ್ಸಹ
ರೋಗ ಸದ್ವೈದ್ಯನಿಂದಮುಪಶಮಿಸುವವೊಲ್ || ೩೦ ||

ಭವಜಲಧಿಯೊಳಗೆ ಮುಳ್ಗಾ
ಡುವ ಜೀವಾವಳಿಗೆ ಮುಕ್ತಿಯಂ ತಡೆಯದೆ ಪೊ |
ರ್ದುವುದುಂ ಪೇಳ್ದುದರಿಂ ಬಂ
ಧುವರ್ಮನಂ ಭುವನಬಂಧುವೆನ್ನದರೊಳರೆ || ೩೧ ||

ಜನವಲ್ಲಭನಮಳಯಶೋ
ಧನನುತ್ತಮರಾಜಪೂಜಿತಂ ಬುಧನಿಲಯಂ |
ಜಿನಪಾದಾಂಬುಜ ಮಧುಕರ
ನೆನೆ ನೆಗಳ್ದಂ ಪಂಪರಾಜನೂರ್ಜಿತತೇಜಂ || ೩೨ ||

ಶುಭಚರಿತನಖಿಳಕವಿ
ಪ್ರಭುವಂ ಲೋಕೈಕಮಾನ್ಯನಂ ತ್ರೈಭುವನ |
ಪ್ರಭುಚರಿತಮನತಿಭಕ್ತಿಯಿ
ನಭಿನುತಮೆನೆ ಪೇಳ್ದ ಪಂಪನಂ ಪೊಗಳದರಾರ್ || ೩೩ ||

ಪೊನ್ನಂ ವಿನೇಯರತ್ನಂ
ರನ್ನಂ ಭವ್ಯಾಬ್ಜಮುಖವಿಕಾಸನಮಿತ್ರಂ
ಪೊನ್ನನೆನಲ್ ನೇರಾಣೆಯ
ಪೊನ್ನನಮೂಲ್ಯದ ರತ್ನದ ರನ್ನಂ ರನ್ನಂ || ೩೪ ||

ಪೊನ್ನನೆ ಪಂಪನೆ ರಜಕನೆ
ರನ್ನನೆ ಕವಿತಾಗುಣೋದಯನೆ ದರ್ಶನಸಂ |
ಪನ್ನತೆಯೊಳ್ ಕವಿತೆಯೊಳವ
ರನ್ನನೆ ವಿದಿದಾತ್ಮಭಾವನಗ್ಗಳದೇವಂ || ೩೫ ||

ವಿತ್ತಂ ಸತ್ಪಾತ್ರಕ್ಕಾ
ಯತ್ತಂ ನಿಜವಾಣಿತೀರ್ಥಕರಕೀರ್ತನೆಗಾ |
ಯತ್ತಂ ವ್ರತಕ್ಕೆ ತನುವಾ
ಯತ್ತವೆನಲ್ ನಾಗಚಂದ್ರಬುಧನೆ ಕೃತಾರ್ಥಂ || ೩೬ ||

ಪಟ್ಟಣದ ನಡುವೆ ಬೆಳ್ಳಿಯ
ಬೆಟ್ಟಂಗಳನಿಳಿಪ ಜೈನನಿಳಯಂಗಳನೀ |
ಸೃಷ್ಟಿಯೊಳೆ ಕೂಡೆ ಮಾಡಿದ
ರಟ್ಟಂ ಶಂಖಾವನೀಶನನೆ ಪೊಗಳದರಾರ್ || ೩೭ ||

ಗುಣದ ಖಣಿ ದಾನಚಿಂತಾ
ಮಣಿ ವಿಮಲಚರಿತ್ರ ಜೈನಶಾಸನರಕ್ಷಾ |
ಮಣಿ ಸಜ್ಜನೈಕ ಚೂಡಾ
ಮಣಿಯೆಂದತ್ತಿಮಬ್ಬೆಯಂ ಪೊಗಳದರಾರ್[1] || ೩೮ ||

ಭರದಿಂ ಬಂದೊತ್ತೆ ಮುಂದೆಮ್ಮ ಸಕದೆಸಕದಿಂ ತೀವಿ ಮುಂದೊತ್ತೆ ಗೋದಾ
ವರಿ ಭೂಪಂ ತೈಲಪಂ ನಿಸ್ತರಿಸು ಕಟಕಮಂ ಬೇಗವಿನ್ನಬ್ಬೆ ನೀನೆಂ |
ದೆರೆಯಲ್ ಸರ್ವಜ್ಞನಂ ಪೊತ್ತಗಿಯದೆ ಪೊಕ್ಕಡಾ ವಾರಿಪೂರಂ
ಬಿರಿದತ್ತಾ ಚಕ್ರಿ ಪೊಯ್ದಂ ತೊರೆಯನವಮಳಸಮ್ಯಕ್ತ್ವವಿಖ್ಯಾತಿಯಿಂದಂ[2] || ೩೯ ||

ಅಕಳಂಕಚರಿತೆ ಜನಚರ
ಣಕಂಜಕಿಂಜಲ್ಕಪುಂಜರಂಜಿತ ತನು ಸ |
ರ್ವಕಳಾವಿದೆ ಶೌಚಿ ಘಟಾಂ
ತಿಕೆ ದಾನವಿನೋದೆಯೆಂಬ ಬಿರುದಿಂ ನೆಗಳ್ದಳ್ || ೪೦ ||

*ಅತಿಧವಳಕೀರ್ತಿಲಕ್ಷ್ಮೀ
ಪತಿಯಂ ಜನಸಮಯವಾರ್ಧಿವರ್ಧನತಾರಾ |
ಪತಿಯಂ ಕೂರ್ತನಿಶಂ ರಾ
ಜಿತನಂ ರಾಯನನುದಾರಿಯಂ ಪೊಗಳದರಾರ್ || ೪೧ ||

*ಅಮಳಿನಚರಿತಂ ಜೈನಾ
ಗಮಕುಶಲಂ ಗಂಗವಂಶತಿಳಕಂ ಭವ್ಯೋ |
ತ್ತಮನಮಳವಾಗ್ವಧೂಟೀ
ರಮಣಂ ರಾಚಮಲ್ಲಂ ನೆಗಳ್ದಂ || ೪೨ ||

*ಜಿನಸಮಯಸುಧಾರ್ಣವವ
ರ್ಧನಚಂದ್ರಂ ಜಿನಮತಾಂಬುಜಂ ಕರಹಂಸಂ |
ಜಿನಪದಪಯೋಜಭೃಂಗಂ
ವಿನೇಯಗಿರಿ ಚತುರಮಂತ್ರಿತಿಳಕಂ ಭರತಂ || ೪೩ ||

[1] ಈ ಪದ್ಯವೇ ಮೈಸೂರಿನ ಅಸಮಗ್ರಪ್ರತಿಯಲ್ಲಿ ಮೊದಲನೆಯದು, ಅದೂ ಉತ್ತರಾರ್ಧ
[2] ಈ ಪದ್ಯ ಮೈಸೂರು ಓರಿಯಂಟಲ್ ಲೈಬ್ರರಿಯ ಪ್ರತಿಯಲ್ಲಿಲ್ಲ.

*ಪ್ರವಿಮಳ ಜಿನಶಾಸನದಿಂ
ಪವಿತ್ರಮೆನೆ ಮಾಡಿ ಕೂಡೆ ಮೂಸಾಸಿರಮಂ |
ಭುವನನುತ(ನ)ನಾತ್ಮೀ
ಯವಚೋಮೃತದಿಂದೆ ಪೇಳ್ದ ಪೆರ್ಗಡೆ ಬೊಮ್ಮಂ || ೪೫ ||

*ಆ ವಿಭುವಿನಗ್ರತನಯಂ
ಪಾವನಚರಿತಂ ವಿನೇಯಕಲ್ಪಮಹೀಜಂ |
ಕೇವಳಮೆ ನಾಗದೇವಂ
ಭೂವಿಶ್ರುತಕೀರ್ತಿಮಂಡಳೇಶ್ವರತಿಳಕಂ || ೪೬ ||

† . . . ಮತ್ತೆನಲ್ಕೇಂ ಪಿರಿಯನೊ ಜಗತೀನಾಥರೊಳ್ ಕೀರ್ತಿವರ್ಮಂ ||೪೭||

† . . . .
ಧರಣಿಪತಿ ಕೀತಿವರ್ಮಂ
ನಿರುತಂ ಪೊನ್ ಕವ್ಮಿತಾದುದೆನಿಸಿದನಿಳೆಯೊಳ್ || ೪೮||

†ಇವನಂತಿರೊಳ್ವಿನಿಂ ನೆಗ
ಳ್ದವನಿಪರಾರೆಂದು ದೇವನಾಗನ ಮಗನಾ |
ಹವಮಲ್ಲಮಹೀಶನನಖಿ
ಳವಿನೇಯಜನಾಬ್ಜಮಿತ್ರನಂ ಬಣ್ಣಿಪರಾರ್ || ೪೯ ||

ಎಚ್. ದೇವೀರಪ್ಪ.

---

* ಈ ಪದ್ಯಗಳು ಮೈಸೂರು ಓರಿಯಂಟಲ್ ಲೈಬ್ರರಿಯ ಪ್ರತಿಯಲ್ಲಿ ಇಲ್ಲ.
† ೪೭, ೪೮, ೪೯ ನೆಯ ಪದ್ಯಗಳು ಆಗಲೇ ಪ್ರಸಿದ್ಧವಾಗಿವೆ.

# ಪುರಂದರದಾಸರಿಗೆ

ಅಚ್ಚಗನ್ನಡದ ಪದವೋದಿ ಮನಮೆಚ್ಚಿದೆನು!
ಸರಸತಿಯ ದಿವ್ಯ ವೀಣಾಕ್ವಣಿತದೊಲು ಸಾಗಿ
ಸ್ವಚ್ಛ ಭಕುತಿಯ ಸ್ಫೂರ್ತಿ ಚಿಮ್ಮಿರಲು ಹೊಸಲಾಗಿ
ಕೇಳಿ, ಮೈಮರೆಯುದವರಾರು ಹರಿಭಜನೆಯನು!
ಭೂವ್ಯೋಮಪರ್ಯಂತಪಸರಿಸಿದೆ ಹೊಸನೋಟ!
ಕಂಡಕಂಡೆಡೆ ಕೃಷ್ಣನನು ಕಾಣುತಿದೆ ಕಣ್ಣು!
(ಹಗಲಿರುಳು ಹೊನ್ನ ಹೊಳಹನೆ ಕಂಡ ಈ ಕಣ್ಣು!)
ನಡೆದುದೇ ಹರಿಸೇವೆ! ನುಡಿದುದೇ ಸ್ತುತಿ, ಪಾಠ!
ಭಕ್ತಿರಸದಲಿ ಮಿಂದು, ಸಂಗೀತದಲಿ ತೇಲಿ
ಧರ್ಮದಾರತಿಗೈದು, ಅನುಭವದ ನುಡಿ ಸಾರಿ,
ಬದುಕಿನಾಳವ ಹೊಕ್ಕು ಬಾಳಿನೈಸಿರಿ ತೋರಿ
ಮಿನುಗಿಹುದು ನಿಮ್ಮ ನುಡಿ ಅಪರಂಜಿಯನು ಹೋಲಿ!
ವ್ಯಾಸ ಬೋಧಿತ ಶಿಷ್ಯ ಹರಿದಾಸಕುಲವರ್ಯ!
ನಿಮ್ಮ ನೆನೆವುದೆ ಪುಣ್ಯ! ಪಾಡುವುದೆ ಶುಭಕಾರ್ಯ!

ಜಿ. ವರದರಾಜರಾವ್.

---

# ಬೀಗರು ಬರುತ್ತಾರೆ!

(ಒಂದು ಏಕಾಂಕ ಪ್ರಹಸನ)

---

ಸಿ. ಆರ್. ನ್ಯೈಲೇರು, ಎಂ.ಎ.
ಮತ್ತು
ಎ್ಞ. ಲಕ್ಷ್ಮೀನರಸಿಂಹರಾವ್, ಬಿ.ಎಸ್‌ಸಿ.

# ಪಾತ್ರಗಳು

| | | |
|---|---|---|
| ಸುಂದರರಾವ್ | .... | ಒಬ್ಬ ಉದ್ಯೋಗಸ್ಥ |
| ಜಾನಕಿ | .... | ಆತನ ಹೆಂಡತಿ |
| ಅಜ್ಜಿ | .... | ಆತನ ತಾಯಿ |
| ಕಮಲ | .... | ಆತನ ಮಗಳು |
| ಬಾಲು | .... | ಆತನ ಮಗ |
| ಮಣಿ | .... | ಅಡಿಗೆಯವನು |
| ಸುಬ್ರಹ್ಮಣ್ಯಶಾಸ್ತ್ರಿ | .... | ಬೀಗರಾಗಬೇಕಾದವನು |

ಇನ್ಷೂರೆನ್ಸ್ ಏಜೆಂಟು, ಯಾಚಕ ಬ್ರಾಹ್ಮಣ, ಹಜಾಮ, ಹಾಲಿನವಳು, ಬಾಲುವಿನ ಮನೆ ಮೇಷ್ಟ್ರು, ಜವಾನ, ಅಗಸ—ಇತ್ಯಾದಿ.

# ಬೀಗರು ಬರುತ್ತಾರೆ!

(ಸುಂದರರಾಯರ ಮನೆಯ ಡ್ರಾಯಿಂಗ್ ರೂಮು. ಬೆಳಗ್ಗೆ ಸುಮಾರು ಒಂಬತ್ತು ವರೆ ಘಂಟೆಯ ಸಮಯ. ಸುಂದರರಾಯರ ಮಕ್ಕಳು ಡ್ರಾಯಿಂಗ್ ರೂಮಿನಲ್ಲಿರುವ ಕುರ್ಚಿ ಮೇಜುಗಳನ್ನು ತಲೆಕೆಳಗು ಮಾಡುತ್ತಾ ಗಲಾಟೆಮಾಡುತ್ತಿದ್ದಾರೆ. ಹೂವಿನ ದಾನಿ ಕೆಳಕ್ಕೆ ಬಿದ್ದು ಅದರ ನೀರು ಹೂವು ಎಲ್ಲಾ ಚೆಲ್ಲಿದೆ.)

ಸುಂದರರಾಯ (ಪ್ರವೇಶಿಸಿ)—ಏನು ರಗಳೆ ಇದು! ಇದೇನ್ರೋ ಟೇಬಲ್ಲು ಛೇರು ಎಲ್ಲಾ ತಲೆಕ್ಕೆಳಕಾಗಿ ಹಾಕಿದ್ದೀರಿ? ಯಾರೋ ಇದು ಈ ಟೇಬಲ್ ಮೇಲಿದ್ದ ಹೂವಿನ ದಾನಿ ಕೆಡವಿ ನೀರೆಲ್ಲಾ ಸುರಿದಿದ್ದೀರಿ? ಇಲ್ಲ, ನಿಮಗೆ ಸ್ವಲ್ಪ ಬೆಚ್ಚಗೆ ಕೊಡಬೇಕು! ಏಟಿಲ್ಲದೆ ಬಹಳ ಹೆಚ್ಚಿಕೊಂಡುಬಿಟ್ಟಿದ್ದೀರಿ. (ಹುಡುಗರನ್ನು ಹೊಡೆಯಲು ಹೋಗುತ್ತಾನೆ. ಅವರು 'ಅಯ್ಯೊ ನಾನಲ್ಲ, ತಾನಲ್ಲ, ಎಂದೂ ಕೂಗುತ್ತ ಓಡಿಹೋಗುತ್ತಾರೆ. ಅನಂತರ ಮನೆಯ ಒಳಗಡೆ ಇರುವ ತನ್ನ ಹೆಂಡತಿಯನ್ನುದ್ದೇಶಿಸಿ) ಲೇ, ನೋಡೇ ಇಲ್ಲಿ ನಿನ್ನ ಮಕ್ಕಳು ಮಾಡಿರೋದನ್ನ! ಇದನ್ನೆಲ್ಲಾ ತೆಗೆದು ಸ್ವಲ್ಪ ಸರಿಮಾಡಬಾರದೇನೆ! ಈಗ ಬೀಗರು ಬಂದರೆ ಎಷ್ಟು ಚೆನ್ನಾಗಿರುತ್ತೊ!

ಜಾನಕಿ (ಒಳಗಿನಿಂದ)—ಇದೋ ಬಂದೆ! (ಪ್ರವೇಶಿಸಿ) ಅಯ್ಯೋ ಇದೇನು ಲೂಟಿ ಮನೇಲಿ! ಏನು ಮಕ್ಕಳೋ ಇವು, ಶನೀಶ್ವರಗಳು! ಈ ಹಾಳು ಮಕ್ಕಳು ಹುಟ್ಟಲಿಲ್ಲಾಂತ ಯಾರು ತಪಸ್ಸು ಮಾಡಿದರು? (ಮೇಜು ಕುರ್ಚಿ ಮುಂತಾದವುಗಳನ್ನೆಲ್ಲಾ ಸರಿಯಾಗಿಡುತ್ತಾ) ಅದಿರಲಿ, ಇನ್ನುಮೇಲೆ 'ಎಲೆ' 'ತಲೆ' ಎಂತ ನನ್ನನ್ನ ಕೂಗಬೇಡಿ. ನಮ್ಮ ಕಮಲನ್ನ ನೋಡೋಕೆ ಬರುವವರು ಮದ್ರಾಸಿನಿಂದ ಬರುತ್ತಾರೆ. ಮದರಾಸಿನವರು ಎಂದರೆ ಎಷ್ಟೋ ನಾಜೂಕಿನವರು, ಅವರ ಮುಂದೆ ಎಲೆ ತಲೆ ಅಂತ ಕೂಗಿದರೆ ಹೇಗಿರುತ್ತೆ ನೀವೇ ನೋಡಿ!

ಸುಂದರ (ನಗುತ್ತ)—ಓಹೋ, ಹಾಗಾದರೆ ಇನ್ನುಮೇಲೆ ನಿನ್ನನ್ನ ನಾಟಕದಲ್ಲಿ, ಸಿನೀಮಾದಲ್ಲಿ, ಕೂಗುವಹಾಗೆ ಕೂಗಬೇಕೋ! ಅದಿರಲಿ, ಆ ಹಾಳಾದ ಮಣೀನ ಕಾಫೀ ತಗೊಂಡು ಬಾ ಅನ್ನು. ಇನ್ನೂ ಕಾಫೀನೇ ಕುಡಿದಿಲ್ಲ ಇವೊತ್ತು. (ಜಾನಕಿ ಹೋಗುವಳು. ಮಣಿ ಒಂದು ಕೊಳಕು ಬಟ್ಟೆಯನ್ನು ಮೊಣಕಾಲ ಮೇಲಕ್ಕೆ ಉಟ್ಟುಕೊಂಡು, ಒಂದು ಹಿತ್ತಾಳೆಯ ಲೋಟದಲ್ಲಿ ಕಾಫಿ ತರುತ್ತಾನೆ. ಅವನನ್ನು ನೋಡಿ) ಲೋ ಮಣಿ, ನೀನೋ ನಿನ್ನ ವೇಷವೋ! ಬಹಳ ಚೆನ್ನಾಗಿದೆ! ನೀನು ಬಟ್ಟೇನ ಅಗಸನಿಗೆ ಹಾಕು

ತೀಯೋ ? ಗಾಣಿಗನಿಗೆ ಹಾಕುತೀಯೊ? ಇದೆಲ್ಲ ದೂರವಾಗಿಟ್ಟು ಒಳ್ಳೆ ಅಗಸನ ಮನೆಯ ಬಟ್ಟೆ ತೊಡಬೇಕು. ಗೊತ್ತಾಯಿತೇ ? ಆ ಹಾಳಾದ ಲೋಟದಲ್ಲಿ ಕಾಫಿ ತರಬೇಡ. ಕಪ್ ಅಂಡ್ ಸಾಸರಿನಲ್ಲಿ ಹಾಕಿ ಒಂದು ಟ್ರೇಯಲ್ಲಿಟ್ಟುಕೊಂಡು ಬಾ. ನಿನ್ನ ತಲೆಯನ್ನ ಚೆನ್ನಾಗಿ ಬಾಚಿಕೋ. ತಿಳೀತೇ ?

ಮಣಿ—ಓ, ಓ, ಶರಿ !

ಸುಂದರ—ಹೋಗೋ ಅಧಿಕ ಪ್ರಸಂಗಿ ! ತಲೆಹರಟೆ ಹರಟಬೇಡ. (ಮಣಿ ಹೋಗುವನು. ಅಜ್ಜಿ ಮೆಲ್ಲಗೆ ಕೋಲೂರಿಕೊಂಡು ಅಲ್ಲಿಗೆ ನಡೆದುಬಂದು ಎಡಗಯ್ಯನ್ನು ಕಣ್ಣ ಮೇಲಿಟ್ಟುಕೊಂಡು ನೋಡುತ್ತಾಳೆ; ಆಮೇಲೆ ಕೈ ಸೊಂಟದಮೇಲಿಟ್ಟುಕೊಂಡು)

ಅಜ್ಜಿ—ಅಯ್ಯೊಪ್ಪ ! ಯಾರೇ ಅದೂ ? ಜಾನಕೀ ? ಹುಂ, ಈ ಕಣ್ಣು ಬೇರೆ ಕಾಣೋದಿಲ್ಲ. ಈ ಹಾಳಾಗಿ ಹೋದೋಳಿಗೆ ಸಾವಾದರೂ ಬಂದರೆ ಸಾಕಾಗಿದೆ. ಯಾರೇ ಬರ್ತಾರೆ ಇವೊತ್ತು ? ಯಾವೂರಿಂದ ಬರ್ತಾರೇ ? ನಿಂತುಕೊಳ್ಳೋಕೆ ಕೂಡ ಆಗೊಲ್ಲ ಹಾಳು ! (ಕೆಳಗೆ ಕೂತುಬಿಡುತ್ತಾಳೆ). ಹುಂ, ಹುಂ !

ಸುಂದರ—ಸರಿ, ಇವಳು ಬೇರೆ ಎದ್ದು ನಡೆಯೋದಕ್ಕೆ ಪ್ರಾರಂಭಿಸಿಬಿಟ್ಟಳೋ ಇಲ್ಲವೋ ! ಇವೊತ್ತೇನು ಎಲ್ಲಾ ಹೀಗೇ ತಕರಾರಾಗಿದೆ ! (ಗಟ್ಟಿಯಾಗಿ) ಅಮ್ಮಾ, ಅಮ್ಮಾ, ಎಲ್ಲಾದರೂ ಬಿದ್ದುಗಿದ್ದುಬಿಟ್ಟೀಯೆ. ಮಲಗಿಕೊ ಹೋಗು ಸ್ವಸ್ಥವಾಗಿ.

ಅಜ್ಜಿ (ಕೈಯನ್ನು ಕಣ್ಣಿನಮೇಲಿಟ್ಟುಕೊಂಡು ನೋಡುತ್ತಾ)—ಯಾರದು ? ಏನು ಹೇಳಿದೆ ? ಹಾಳು ಕಿವೀನೂ ಕೇಳಿಸೋದಿಲ್ಲ. ಸಾವಾದರೂ ಬರಲಿ ಎಂದರೆ ಅದೂ ಬರೋದಿಲ್ಲ. ಏನವಸ್ಥೇನಪ್ಪ ಹಾಳು !

ಸುಂದರ—ಏನು ಪ್ರಾರಬ್ಧವಪ್ಪ ! ಒಳ್ಳೇದಿನ ನೋಡಿ ಹಾಳು ಹಾಳು ಅಂತಾಳಲ್ಲ ಇವಳು ! (ಇನ್ನೂ ಗಟ್ಟಿಯಾಗಿ) ಅಮ್ಮಾ, ನಾನು, ಸುಂದರ. ನೀನು ಹೋಗಿ ಹಜಾರ ದಲ್ಲಿ ಮಲಕ್ಕೊಳ್ಳೇ ಹೋಗು ಸುಮ್ಮನೆ. ಇಲ್ಲಿ ಕೂತುಕೋಬಾರದು. ಇವೊತ್ತು ಮದರಾಸಿನಿಂದ ಬೀಗರು ಬರುತ್ತಾರೆ. ಲೇ ಕಮಲಾ ! ಇವಳನ್ನು ಕರೆದುಕೊಂಡು ಹೋಗೇ !

ಕಮಲ (ಪ್ರವೇಶಿಸಿ)—ಅಯ್ಯೋ, ಅಜ್ಜಿ ಇಲ್ಲಿಗ ಬಂದುಬಿಟ್ಟಿದ್ದಾಳೆಯೇ ? ಕಣ್ಣು ಕಾಣೋಲ್ಲ, ಕಿವಿ ಕೇಳೊಲ್ಲ, ಹೇಳಿದರೆ ತಿಳಿಯೊಲ್ಲ. (ಗಟ್ಟಿಯಾಗಿ) ಅಜ್ಜೀ, ಬಾ ಹೋಗೋಣ (ಕೈಹಿಡಿದೆಬ್ಬಿಸಿ ಕರೆದುಕೊಂಡು ಹೋಗಲು ಉದ್ಯುಕ್ತಳಾಗುವಳು).

ಸುಂದರ—ಇಲ್ಲಿ ನೋಡು ಕಮಲ ! ಇವೊತ್ತು ಮದರಾಸಿನಿಂದ ನಿನ್ನನ್ನ ನೋಡೋದಕ್ಕೆ ಬರುತ್ತಾರೆ. ತಲೆ ಬಾಚಿಕೊಂಡು, ಹೂವು ಮುಡಿದುಕೊಂಡು, ಒಳ್ಳೆ ಜಾರ್ಜೆಟ್ ಸೀರೆ ಉಟ್ಟುಕೊಂಡು ತಯಾರಾಗಿರಬೇಕು. ಎರಡು ಹಾಡು ಹೇಳು ಅಂದರೆ ಹೇಳಬೇಕು. ಆಮೇಲೆ ಅವರಿಗೆ ನಮಸ್ಕಾರ ಮಾಡಬೇಕು. . . .

ಕಮಲ—ಹೋಗಪ್ಪ, ಸಂಗೆ ಹಾಡು ಗೀಡು ಒಂದೂ ಬರೋಲ್ಲ. ಎಲ್ಲಾ ಮರೆತು ಹೋಯಿತು !

ಸುಂದರ—ಹುಚ್ಚಿ, ಹಾಗೆಲ್ಲ ಅನ್ನಬಾರದು! ದೊಡ್ಡೋರು ಹೇಳೋ ಹಾಗೆ ಕೇಳಬೇಕು. ಹಾಗಿಲ್ಲದಿದ್ದರೆ ನಿಂಗೆ ಮದುವೆ ಹೇಗೇ ಆಗುತ್ತೆ ?

ಕಮಲ—ನಾ ಮದುವೆ ಮಾಡಿಕೊಂಡರೆ ತಾನೆ? (ಎಂದು ಹೇಳುತ್ತ ಅಜ್ಜಿಯನ್ನು ಕರೆದುಕೊಂಡು ಹೋಗುತ್ತಾಳೆ).

ಸುಂದರ—ಟೈಂ ಎಷ್ಟು ಈವಾಗ? (ಕೈ ಗಡಿಯಾರವನ್ನು ನೋಡುತ್ತ) ಅಯ್ಯೋ, ಘಂಟೆ ಹತ್ತು ಆಗಿಹೋಯಿತಲ್ಲ! ಇನ್ನೂ ಸ್ನಾನವಿಲ್ಲ. ಪೇಪರ್ ಕೂಡ ನೋಡಿಲ್ಲ. ಹಾಳಾದ ಆಫೀಸಿಗೆ ಬೇರೆ ಹೋಗಬೇಕು. ಕೆಲಸ ಬೇಕಾದ ಹಾಗೆ ಬಿದ್ದಿದೆ. ಇವೊತ್ತಲ್ಲದಿದ್ದರೆ ನಾಳೆ ನಾನು ತಾನೇ ಮಾಡಬೇಕು? ಈ ಮದ್ರಾಸ್ ಬ್ರಾಹ್ಮಣ ಬೇರೆ ಬರುತ್ತಾರಂತೆ. ಅವರನ್ನ ನಾನು ನೋಡಿಯೂ ಇಲ್ಲ. ಅವರು ಕಪ್ಪೋ ಬಿಳುಪೋ ಅಂತ ಕೂಡ ಗೊತ್ತಿಲ್ಲ. ಆತ ಬೆಳಗಿನ ರೈಲಿನಲ್ಲಿ ಬಂದ ಹಾಗೆ ಕಾಣೆ. ಸರಿ, ಇವೊತ್ತು ರಜಕ್ಕೆ ಬರೆದು ಹಾಕಿಬಿಡೋದು! ಈ ವರ್ಷ ಇನ್ನೂ ರಜಾನೇ ತಗೊಂಡಿಲ್ಲ ಒಂದು ದಿನ ಕೂಡ. ಲೋ ಬಾಲು, ನನ್ನ ಟೇಬಲ್ ಮೇಲೆ ಫೌಂಟನ್ ಪೆನ್ನು ಲೆಟರ್‌ಪ್ಯಾಡು ಇದೆ, ತಗೊಂಡು ಬಾರೋ! (ಬಾಲು ತರುತ್ತಾನೆ. ಸುಂದರರಾಯ ಅವಸರವಸರವಾಗಿ ಕಾಗದ ಬರೆದುಕೊಟ್ಟು) ಇದನ್ನ ತಗೊಂಡು ಹೋಗಿ ನಮ್ಮ ಆಫೀಸ್ ಮ್ಯಾನೇಜರ್ ಇದಾರಲ್ಲ ಅವರ ಕೈಲಿ ಕೊಡಬೇಕು. ನಾನು ಕೊಟ್ಟೆ ಅಂತ ಹೇಳು.

ಬಾಲು (ನಗುತ್ತ)—ಅವರು ಮನೇಲಿ ಇಲ್ದೇ ಇದ್ದರೆ ಹಾಗೇ ಬಂದುಬಿಡಲೋ ?

ಸುಂದರ—ಛೇ ಹಾಗೆಲ್ಲಾದರೂ ಮಾಡೀಯೆ! ಅವರ ಕೈಯಲ್ಲೇ ಕೊಡಬೇಕು. ಇಲ್ಲದೆ ಇದ್ದರೆ ಕೆಲಸ ಕೆಟ್ಟುಹೋಗುತ್ತೆ. ಇಗೋ ತಗೊಂಡು ಹೋಗು ನಿನಗೆ ಪೆಪ್ಪರುಮೆಂಟಿಗೆ ಕಾಸು! (ಕಾಸನ್ನು ಎಸೆದು) ಸೈಕಲ್ ತಗೊಂಡು ಬೇಗ ಹೋಗಿ ಬಿಟ್ಟುಬಾ. (ಬಾಲು ಸಂತೋಷದಿಂದ ಕುಣಿದುಕೊಂಡು ಹೋಗುವನು. ಬಾಗಿಲು ಸದ್ದಾಗುವುದು. ಅದನ್ನು ಕೇಳಿ) ಓಹೋ, ಬೀಗರು ಬಂದರೇನೋ! (ಸಡಗರದಿಂದ ಹೋಗಿ ನೋಡುವನು.)

ಬಾಲುವಿನ ಮನೆ ಮೇಷ್ಟರು (ಪ್ರವೇಶಿಸಿ)—ಹಿ . . . ಹಿ . . . ಹಿ. . . ಏನೂ ಇಲ್ಲ. ಹಾಗೇ ತಮ್ಮನ್ನು ನೋಡಿಬಿಟ್ಟು ಹೋಗೋಣ ಅಂತ ಬಂದೆ.

ಸುಂದರ (ಹುಬ್ಬುಗಂಟಿಕ್ಕಿ)—ಏನು ಸಮಾಚಾರ ಹೇಳಿ, ಬೇಗ!

ಮೇಷ್ಟರು—ಏನೂ ಇಲ್ಲ, ಮನೇಲಿ ನಾಳೆ ವಿಶೇಷ. ಅಂಗಡಿಯಿಂದ ಸಾಮಾನು ತಗೊಂಡು ಹೋಗಬೇಕು. ಎಲಿಮೆಂಟರಿ ಸ್ಕೂಲು ಮೇಷ್ಟರ ಸಂಬಳ ಬರೋದು ತಮಗೆ ಗೊತ್ತಲ್ಲ! ಇನ್ನೂ ಹದಿನೈದು ದಿನ ಆಗಬೇಕು. ಒಂದೆರಡು ರೂಪಾಯಿ

ಇದ್ದರೆ, ಹಂ . . . ಹಂ . . . ಹಂ . . . ಆ ಮೇಲೆ ಲೆಕ್ಕಕ್ಕೆ ವಜ ಕಟ್ಟಿಕೋ ಬಹುದು. ಹಿಂ . . . ಹಿಂ . . . ಹಿಂ . . .

ಸುಂದರ—ಶ್ರಾದ್ಧಕ್ಕೂ ಇವೊತ್ತೇ ಮುಹೂರ್ತವೇ? ತಗೊಂಡು ಹೋಗಿ! (ಎರಡು ರೂಪಾಯಿ ಎಸೆಯುತ್ತಾನೆ.)

ಮೇಷ್ಟರು—ಬಹಳ ಉಪಕಾರವಾಯಿತು! ನಮಸ್ಕಾರ. (ಹೋಗುತ್ತಾನೆ. ನಿಟ್ಟುಸಿರು ಬಿಡುತ್ತಾ ಸುಂದರರಾಯನು ಆರಾಮ ಕುರ್ಚಿಯಲ್ಲಿ ಒರಗಿಕೊಂಡು ಕುಳಿತುಕೊಳ್ಳುತ್ತಾನೆ. ಬಾಗಿಲ ಹತ್ತಿರ ಸದ್ದಾಗುತ್ತದೆ.)

ಸುಂದರ—ಹೋ! ಬಂದರೇನೋ ಬೀಗರು! (ಚಟ್ಟನೆ ಎದ್ದು ನಿಲ್ಲುತ್ತಾನೆ.)

ಅಗಸ (ಕೊಳೆ ಬಟ್ಟೆಯ ದೊಡ್ಡದೊಂದು ಮೂಟೆಯೊಡನೆ ಪ್ರವೇಶಿಸಿ, ಮೂಟೆಯನ್ನು ಇಳಿಸಿ, ಕೈಹಿಸಿಕಿಕೊಳ್ಳುತ್ತ ಸಂಕೋಚದಿಂದ)—ಬುದ್ದೀ, ಈ ತಿಂಗಳ ಸಂಬಳ ಬರಬೇಕು ಬುದ್ದೀ ನನಗೆ. ನಾಳೆ ನನ್ನ ತಂಗೀಗೆ ಲಗ್ನಾ ಬುದ್ದೀ. ಒಂದು ಮೂರು ರೂಪಾಯಿ ಎಚ್ಚಾಗಿ ಸೇರಿಸಿ ಕೊಡಬೇಕು ಬುದ್ದೀ. ಬರೋ ತಿಂಗಳು ಸಂಬಳದಾಗೆ ಉತ್ತಾರ ಆಕ್ಕೋ ಬವುದು.

ಸುಂದರ (ರೌದ್ರಾಕಾರದಿಂದ)—ಏನೋ, ಹಾಳುಮದುವೆ, ಸಾವು, ಎಲ್ಲಾ ಒಟ್ಟಿಗೇ ಬರಬೇಕೇನೋ? ಎಲ್ಲಾದಕ್ಕೂ ಇವೊತ್ತೇ ಮುಹೂರ್ತವೇನೋ?

ಅಗಸ (ಕೋಪದಿಂದ)—ಮದುವೇಗೆ ಅಣ ಕೇಳಿದರೆ, ಆಳು ಗೀಳು ಅಂತ ಯೋಳ ಬೇಡಿ ಬುದ್ದೀ! ಅಣ ಇಲ್ದಿದ್ರೆ ಇಲ್ಲಾಂತ ಯೋಳಿ. ಇಂಗೇ ಒಂಟೋಯ್ತೀನಿ!

ಸುಂದರ—ಏನು ತುಂಬ ಕೋಪಿಸಿಕೋತೀಯಲ್ಲಾ! ತಗೊ! (ರೂಪಾಯಿಗಳನ್ನು ಎಸೆಯುತ್ತಾನೆ. ಅಗಸನು ತೆಗೆದುಕೊಂಡು ಹೋಗುತ್ತಾನೆ. ಮತ್ತೆ ಯಾರೋ ಬರುವ ಸದ್ದಾಗುತ್ತದೆ.) ಓಹೋ ಬಂದರೇನೋ ಬೀಗರು! (ಹಜಾಮನು ಬರುತ್ತಾನೆ.) ಏನೋ ನೀನೇನೋ?

ಹಜಾಮ—ಹೌದು ಬುದ್ದೀ. ಇವೊತ್ತು ಮೊಕ ಮಾಡಿಸಿಕೋತೀರಿ ಅಂತ ಬಂದೆ. ಸೋಮವಾರ ಇವೊತ್ತು.

ಸುಂದರ (ಕೆನ್ನೆ ಗಲ್ಲಗಳನ್ನು ಮುಟ್ಟಿನೋಡಿಕೊಂಡು)—ಹುಂ, ಬೆಳೆದಿದೆ; ಮಾಡಿಸಿಕೋ ಬೇಕು ಅಂತ ಇದ್ದೆ. ಆದರೆ ಇವೊತ್ತು ರಜಾ ತಗೊಂಡಿದ್ದೇನೆ. ಯಾತಕ್ಕೆ ಸುಮ್ಮನೆ ಕೆನ್ನೆ ಕೆರೆಸಿಕೋಬೇಕು? ನಾಡಿದ್ದು ಬುಧವಾರ ಬಾ, ನೋಡೋಣ.

ಹಜಾಮ—ಆಗಲಿ ಬುದ್ದಿ. ಬುದ್ದೀ, ಸಂಗಿನ್ನೂ ನವರಾತ್ರಿ ಇನಾಮು ಬಂದಿಲ್ಲ. ಚಿಕ್ಕ ಯಜಮಾನರು ಕಟಿಂಗ್ ಮಾಡಿಸಿಕೊಂಡದ್ದಕ್ಕೆ ಬರಬೇಕು.

ಸುಂದರ—ಏನೋ ನಿನ್ನ ರಗಳೆ? ಬುಧವಾರ ಬಾ; ಎಲ್ಲಾ ಕೊಡುತ್ತೇನೆ. (ಹಜಾಮನು ಹೋಗುತ್ತಾನೆ. ಬಗ್ಗಿನೋಡಿ) ಯಾರೋ ಅಲ್ಲಿ? ಅಲ್ಲಿ ಯಾರ್ಯಾರಿದ್ದೀರಿ

ಎಲ್ಲಾ ಬನ್ನಿ ಇಲ್ಲಿ. ನಿಮ್ಮ ನಿಮ್ಮ ಲೆಕ್ಕ ಹೇಳಿ ದುಡ್ಡು ತಗೊಂಡು ಹೋಗಿ! ಎಲ್ಲರೂ ಇವೊತ್ತೇ ಬರಬೇಕೇ! ರಾಮ ರಾಮ! ನಿಮಗೆಲ್ಲಾ ಜವಾಬು ಹೇಳಿ ಕಳುಹಿಸುವುದರಲ್ಲಿ ನನಗೆ ಹುಚ್ಚು ಹಿಡಿದುಹೋಗುತ್ತದೆ.

ಹಾಲಿನವಳು (ಮುಂದೆ ಬಂದು)—ಸಂಗೆ ಮೂರು ತಿಂಗಳ ಬಾಕಿಬರಬೇಕು ಬುದ್ಧೀ.

ಸುಂದರ—ಮೂರು ತಿಂಗಳದ್ದೇ? ಏನನ್ಯಾಯ! ಹಾಲಿನೋಳಿಗೆ ಕೊಡಬೇಕೂಂತ ತಿಂಗಳು ತಿಂಗಳಿಗೂ ದುಡ್ಡು ಇಸುಕೊಳ್ಳುತಾಳಲ್ಲ ಇವಳು, ನಿನಗೆ ಕೊಡದೆ ಏನು ಮಾಡುತ್ತಾಳೆ? (ಮನೆಯ ಒಳಭಾಗವನ್ನು ಉದ್ದೇಶಿಸಿ) ಲೇ, ಲೇ, ಇಲ್ಲಿ ಬಾರೇ ಇಲ್ಲಿ ಸ್ವಲ್ಪ!

ಜಾನಕಿ (ಕೋಪದಿಂದ ಬಂದು)—ಏನು ತಿರುಗಿ 'ಲೇ'?

ಸುಂದರ—ಏನೇ? ಈ ಹಾಲಿನೋಳಿಗೆ ಮೂರು ತಿಂಗಳಿಂದ ದುಡ್ಡು ಕೊಟ್ಟಿಲ್ಲವಂತಲ್ಲೇ? ನನ್ನ ಹತ್ತಿರ ಇಸುಕೊಂಡಿದ್ದೆಲ್ಲಾ ಏನುಮಾಡಿದೆ?

ಜಾನಕಿ (ಹಾಲಿನವಳನ್ನು ಕೋಪದಿಂದ ನೋಡುತ್ತ)—ಏನೇ, ನಾನು ನಿನಗೆ ದುಡ್ಡು ಕೊಡಲಿಲ್ಲವೇನೇ? ನಿನ್ನ ಗಂಡನೇ ಬಂದು ಇಸುಕೊಂಡು ಹೋದ! ಯಜಮಾನರ ಹತ್ತಿರ ಸುಳ್ಳು ಸುಳ್ಳೆಲ್ಲಾ ಚಾಡಿ ಹೇಳುತೀಯಾ?

ಹಾಲಿನವಳು—ನೀವು ನನ್ನ ಗಂಡಂಗೆ ಕೊಟ್ಟರೆ ನಂಗ್ಯಾಗ್ರವ್ವ ಗೊತ್ತು? ಅವನು ಎಲ್ಲಾ ಯಂಡ ಕುಡಿದುಬಿಡುತಾನೆ. ನಂಗೊಂದು ಕಾಸೂ ತೋರಿಸಾಕಿಲ್ಲ. ಅವನ ಕೈಲಿ ದುಡ್ಡು ಕೊಡಬೇಡೀಂತ ಏಟುಸಲಾರವ್ವಾ ನಿಮಗೆ ಯೋಳೋದು? ಎಷ್ಟು ಕೊಟ್ಟಿರಿ ಅವನ ಕೈಲಿ?

ಜಾನಕಿ—ನಿಂಗೆ ಬೇರೆ ಹೇಳಬೇಕಾ? ಆರುಕಾಸು ಕಮ್ಮಿ ನಾಲ್ಕೂಕಾಲು ರೂಪಾಯಿ ಕೊಟ್ಟಿದ್ದೀನಿ. ಮೊದಲೇ ನೀನು ನಾಲ್ಕು ರೂಪಾಯಿ ಇಸುಕೊಂಡು ಹೋಗಿದ್ದೀ. ಅದಕ್ಕೆ ಮುಂಚೆ ಎಲ್ಲಾ ನಿನ್ನ ಗಂಡನ ಕೈಲೇ ಕೊಟ್ಟಿದ್ದೀನಿ.

ಹಾಲಿನವಳು—ಇದೇನ್ರವ್ವ, ನಾಲ್ಕೂಕಾಲು ರೂಪಾಯಿಗೆ ಆರುಕಾಸು ಕಮ್ಮಿ ಅಂತೀರಲ್ಲ? ಅದೇನಾ ಲೆಕ್ಕ ಬಾಕಿ?

ಜಾನಕಿ (ಅತಿ ಕೋಪದಿಂದ)—ಲೇ, ನನ್ನ ಕೈಲಿ ಜಗಳಕ್ಕೆ ಬರ್ತೀಯಾ? ನೀನು ಬಟ್ಟು ಜಾಸ್ತಿ ಹಾಕಿಬಿಟ್ಟರೆ ನನಗೆ ಸಮಾಚಾರ ಗೊತ್ತಾಗೊಲ್ಲ ಅಂತಲೋ? ಎರಡು ದಿನ ನಾನು ಊರಲ್ಲಿರಲಿಲ್ಲ; ಎರಡು ದಿನ ಕೊಟ್ಟ ಹಾಲು ಬರಿಸೀರು. ಇನ್ನೊಂದು ದಿನ ಹಾಲು ಒಡೆದುಹೋಯಿತು. ಇದಕ್ಕೆಲ್ಲಾ ದುಡ್ಡುಕೊಡು ಅಂತೀಯಾ? ನಿನ್ನ ಹಾಲು ನನಗೆ ಬೇಡ! ನಾಳೆಯಿಂದ ಬೇರೆ ಇನ್ಯಾರ ಹತ್ತಿರ ವಾದರೂ ಹಾಕಿಸಿಕೋತೀನಿ.

ಹಾಲಿನವಳು—ನೀವು ನಿಲ್ಲಿಸಿಬಿಟ್ಟರೆ ನಂಗೇನು ಬೇರೆ ಮನೆ ಸಿಕ್ಕಾಕಿಲ್ವಾ? ಎಲ್ಲಾ

ಬಿಟ್ಟು ನಿಮ್ಮನೆಗೆ ಆಲು ಆಕ್ತೀನೀಂತ ಒಪ್ಕೊಂಡಸಲ್ಲ, ನನ್ನ ಬುದ್ಧೀನ ನೋಡು! ಏ, ಒಂದುಕಾಸೂ ಬಾಕಿ ಇಲ್ಲದಂಗೆ ಕೊಟ್ಟುಬಿಟ್ಟು ಜೇರೆ ಮಾತಾಡು! ಹೂಂ!!

ಸುಂದರ—ಇದೇನಿದು ಪೀಡೆ ಮನೇಲಿ, ಬೀಗರು ಬರುತಾರೇನೋಂತ ನಾನು ಎದುರು ನೋಡುತಾ ಇರುವ ಹೊತ್ತಿನಲ್ಲಿ? ಮಾರ್ಕೆಟ್ಟಾದರೂ ವಾಸಿ! ಲೇ ಮುಚ್ಚು ಬಾಯಿ! ನಿನಗೆ ಕೊಡಬೇಕಾದ ಬಾಕೀನ ನಾಳೆಬಂದು ಇಸುಕೊಂಡು ಹೋಗು! (ಹಾಲಿನವಳು ಹೋಗುತ್ತಾಳೆ. ಜಾನಕಿಯನ್ನು ಕುರಿತು) ನೀನು ಹೋಗು ಒಳಕ್ಕೆ. ಹೀಗೆಲ್ಲಾ ಮಾತಾಡೋರನ್ನ ಹತ್ತಿರ ಯಾಕೆ ಸೇರಿಸಿದೆ?

ಜಾನಕಿ—ನಿಮ್ಮಂಥ ಗಂಡಸರಿದ್ದರೆ ಹೀಗೂ ಮಾತಾಡ್ತಾರೆ, ಹಾಗೂ ಮಾತಾಡ್ತಾರೆ. ನಾನು ಲೆಕ್ಕ ಹೇಳೋದಕ್ಕೆ ಮುಂಚೆ, ದುಡ್ಡು ಕೊಡ್ತೀನಿ ಅಂದುಬಿಟ್ಟಿರಲ್ಲ, ನನ್ನ ಯೋಗ್ಯತೆ ಏನಾಯಿತು? (ಸಿಡುಸಿಡನೆ ಒಳಕ್ಕೆ ಹೋಗುತ್ತಾಳೆ.)

ಸುಂದರ (ಕೈಗಡಿಯಾರವನ್ನು ನೋಡುತ್ತ)—ಓಹೋ, ಹತ್ತೂಮುಕ್ಕಾಲಾಯಿತು. ಇನ್ನೂ ಸ್ನಾನ ಇಲ್ಲ, ಊಟ ಇಲ್ಲ. ಬೆಳಗ್ಗಿನಿಂದ ಇವರ ಗಲಾಟೆಯೇ ಸರಿ ಹೋಯಿತು. ಆ ಹಾಳು ಬೀಗರು ಬಂದಾರು ಅಂತ ರಜ ತೆಗೆದುಕೊಂಡರೆ, ಅವರೂ ಬರಲಿಲ್ಲ. ಆಫೀಸಲ್ಲೋ ಹೆಣಚಾಕರಿ ಬಿದ್ದಿದೆ. ಏನುಮಾಡೋದು ಈವಾಗ? (ಯೋಚಿಸುತ್ತಿರುತ್ತಾನೆ. ಆಗ ಮೋಟಾರುಕಾರಿನ ಹಾರ್ನ ಶಬ್ದ ಕೇಳಿಸುವುದು.) ಓಹೋ ಯಾವುದೋ ಕಾರು ಬಂದಿದೆ. ನಮ್ಮ ಬೀಗರೇ ಇರಬೇಕು. ಮದ್ರಾಸಿನಿಂದ ನೆಟ್ಟಗೆ ಕಾರಲ್ಲೇ ಬಂದಿದಾರೆ ಅಂತ ತೋರುತ್ತೆ. (ಮನೆಯ ಒಳಭಾಗವನ್ನುದ್ದೇಶಿಸಿ) ಲೇ, ಅವರು ಬಂದಿರೋಹಾಗಿದೆ. ನಾನು ಹೋಗಿ ಕರೆದುಕೊಂಡು ಬರ್ತೀನಿ ಅವರನ್ನ. ಎಲ್ಲಾ ಅಣಿಯಾಗಿಟ್ಟು, ಮಣೀನ ಕಾಫಿ ತಗೊಂಡು ಬಾ ಅಂತ ಹೇಳು. ಕಪ್ ಅಂಡ್ ಸಾಸರಿನಲ್ಲಿ ತಗೊಂಡು ಬರಲಿ. ಅವರು ತುಂಬ ದೊಡ್ಡಮನುಷ್ಯರು ಅಂತ ಕಾಣುತ್ತೆ. ಮದರಾಸಿನಿಂದ ಕಾರಲ್ಲೇ ಬಂದಿದ್ದಾರೆ. (ಅವರನ್ನು ಕರೆದುಕೊಂಡು ಬರಲು ಹೋಗುತ್ತಾನೆ. ಒಂದು ನಿಮಿಷವಾದ ನಂತರ ಚೆನ್ನಾಗಿ ಸೂಟು ಹಾಕಿಕೊಂಡಿರುವ ಒಬ್ಬರೊಡನೆ ಒಳಕ್ಕೆ ಬರುತ್ತಾನೆ. ಅವರಿಬ್ಬರ ಹಿಂದೆ ಡ್ರೈವರು ಒಂದು ಚಿಕ್ಕ ಕೈ ಪೆಟ್ಟಿಗೆಯನ್ನು ತೆಗೆದುಕೊಂಡು ಬರುತ್ತಾನೆ. ಬಹಳ ಸಂತೋಷದಿಂದ ಹಲ್ಲು ಬಿಡುತ್ತ) ದಯಮಾಡಿಸಬೇಕು, ಹೀಗೆ. ನೆಟ್ಟಗೆ ಕಾರಲ್ಲೇ ಬಂದಹಾಗಿದೆ! ಅದೇ ಸುಖ ಈ ಹಾಳಾದ ರೈಲಿಗಿಂತ.

ಬಂದವರು (ಸ್ವಲ್ಪ ಆಶ್ಚರ್ಯದಿಂದ)—ತಾವೇ ತಾನೇ ಮಿಸ್ಟರ್ ಸುಂದರರಾವ್?

ಸುಂದರ—ಹೌದು, ಹೌದು, ನಾನೇ. ನಿಮಗೆ ಸಂದೇಹವೇನು? ಬನ್ನಿ, ಹೀಗೆ ಕೂಡಿ. ಲೋ ಯಾರೋ ಅಲ್ಲಿ? ಬಾಲು, ಇವರ ಪೆಟ್ಟಿಗೆ ಸಾಮಾನು ಎಲ್ಲಾ ತಗೊಂಡು ಹೋಗಿ ಒಳಗಿಡೋ!

ಬಂದವರು—ಏನೂ ಬೇಡಿ, ಬೇಡಿ! ಇಲ್ಲೇ ಇರಲಿ ಅದು. ನಿಮ್ಮನ್ನ ಕುರಿತು ನಮ್ಮ . . . . (ಸೋಫಾದ ಮೇಲೆ ಕೂರುವರು).

ಸುಂದರ—ಹೌದು ಹೌದು; ನಮ್ಮ ಗೋಪಾಲಯ್ಯರ್ ತಾನೇ? ನಮಗೂ ಅವರಿಗೂ ಬಹಳ ಸ್ನೇಹ. ಅವರೇ ಎಲ್ಲಾ ಮಾಡಿದ್ದು. ಕೋಟು ತೆಗದು ಸ್ಟ್ಯಾಂಡಿನ ಮೇಲೆ ಹಾಕಬಹುದಲ್ಲಾ!

ಬಂದವರು—ಪರವಾ ಇಲ್ಲಾಂದರೆ! ತಮಗೆ ಎಷ್ಟು ಜನ ಮಕ್ಕಳು?

ಸುಂದರ—ಅದಕ್ಕೇನೂ ಕಡಮೆ ಇಲ್ಲ ಸಾರ್! ಆ ಭಾಗ್ಯ ಮಾತ್ರ ಬಹಳ ಕೊಟ್ಟಿದ್ದಾನೆ ದೇವರು. ಸರಿಯಾಗಿ ಅರ್ಧ ಡಜನ್ ಇವೆ. ಈಗ ಮದುವೆ ಆಗಬೇಕಾಗಿರುವುದು ದೊಡ್ಡ ಹುಡುಗೀಗೆ. ಅದಕ್ಕೋಸ್ಕರ ತಾನೇ . . ಹ . . ಹ . . ಹ . .

ಬಂದವರು—ಬಹಳ ಸಂತೋಷ. ದೇವರು ಎಲ್ಲಾ ಶುಭವಾಗಿ ನಡೆಸುತಾನೆ!

ಸುಂದರ—ಎಲ್ಲಾ ತಮ್ಮ ಕೈಯಲ್ಲಿದೆ. ನೀವು ಮನಸ್ಸುಮಾಡಿದರೆ ಆಯಿತು. ಲೋ, ಯಾರಲ್ಲಿ? ಆ ಮಣೀನ ಕಾಫಿ ತಗೊಂಡು ಬಾ ಅನ್ನು.

ಬಂದವರು—ಬೇಡಿ, ಬೇಡಿ, ಈಗತಾನೇ ಆಯಿತು ನನಗೆ ಕಾಫಿ.

ಸುಂದರ—ಛೆ, ಛೆ, ಹಾಗೆಲ್ಲಾ ಹೇಳಬಾರದು. ಕೊಂಚ ತಗೊಳ್ಳಿ. ವೈಗೇನೂ ಆಗೋಲ್ಲ; ನಮ್ಮನೆಯಲ್ಲಿ ಹಾಲು ಹೆಚ್ಚಾಗಿ ಹಾಕುತೀವಿ. (ಮಣಿ ಕಾಫಿಯನ್ನು ಕಪ್ ಅಂಡ್ ಸಾಸರಿನಲ್ಲಿ ಹಾಕಿ, ಟ್ರೇಯಲ್ಲಿಟ್ಟುಕೊಂಡು ಬರುತ್ತಾನೆ. ಶುಭ್ರವಾದ ಬಟ್ಟೆಯನ್ನು ತೊಟ್ಟಿರುತ್ತಾನೆ). ಲೋ, ಮಣಿ, ಬೇಗ ಇಡು ಟೇಬಲಿನ ಮೇಲೆ. ನಂಗೊಂದು ಕಪ್ ಅವರಿಗೊಂದು ಕಪ್.

ಮಣಿ—ಓ, ಓ, (ಎನ್ನುತ್ತ, ಬಂದವರ ಷರಾಯಿಯ ಮೇಲೆ ಸ್ವಲ್ಪ ಕಾಫಿಯನ್ನು ತುಳುಕಿಸಿ ಚೆಲ್ಲಿ ಪೆಚ್ಚುಮುಖ ಹಾಕಿಕೊಳ್ಳುತ್ತಾನೆ).

ಬಂದವರು (ಕೊಡವಿಕೊಳ್ಳುತ್ತ)—ಪರವಾಯಿಲ್ಲ, ಪರವಾಯಿಲ್ಲ. ಒರಸಿದರೆ ಹೋಗುತ್ತೆ.

ಸುಂದರ (ಮಣಿಯನ್ನು ಕೋಪದಿಂದ ನೋಡುತ್ತ)—ನೀನೊಬ್ಬ ದ್ರಾಬೆ! ಅವರ ಡ್ರೆಸ್ ಎಲ್ಲಾ ಹಾಳುಮಾಡಿಬಿಟ್ಟೆಯಲ್ಲೋ! ನಿಂಗೆ ಬುದ್ಧಿ ಅನ್ನೋದು ಸ್ವಲ್ಪವೂ ಇಲ್ಲ.

ಮಣಿ—ಕಾಣಲಿಲ್ಲ ರಾಯರೆ! ಕಾಫಿ ತುಳುಕಿಬಿಟ್ಟಿತು.

ಸುಂದರ—ಹೋಗು ಒಳಗೆ ಅಧಿಕಪ್ರಸಂಗಿ! (ಮಣಿ ಹೋಗುತ್ತಾನೆ. ಬಂದವರನ್ನು ನೋಡಿ) ಒಳ್ಳೆಯ ಶಕುನ! ನಮ್ಮ ಕೆಲಸ ಖಂಡಿತ ಆಗುತ್ತೆ. ಹಾಲು ಕಾಫಿ ಚೆಲ್ಲಿದರೆ ಬಹಳ ಒಳ್ಳೆಯದು ಅಂತ ಹೇಳ್ತಾರೆ!

ಬಂದವರು (ಕಾಫಿ ಕುಡಿದು)—ಅದೇನು ಪರವಾಯಿಲ್ಲ, ಅಗಸನಿಗೆ ಹಾಕಿದರೆ ಹೋಗಿಬಿಡುತ್ತೆ. ಅದಿರಲಿ, ಈಗ ಬಂದ ಕೆಲಸವನ್ನು ನೋಡೋಣ.

ಸುಂದರ—ಅಗತ್ಯವಾಗಿ ಆಗಬಹುದು! ಹುಡುಗನ ಜಾತಕ ಇಲ್ಲಿ ತೋರಿಸಿದಾಗ, ಬಹಳ ಚೆನ್ನಾಗಿ ಆಗುತ್ತೆ ಎಂತ ಹೇಳಿದರು. ನೀವು ಹುಡುಗೀನ ನೋಡಿ. . . .

ಬಂದವರು—ಈಗ ಮದುವೆಯಾಗುವ ಹುಡುಗೀನ ತಾನೇ? ಅದಕ್ಕೇನು ಅಗತ್ಯ ವಾಗಿ ನೋಡುತ್ತೇನೆ. ಒಂದು ಪಾಲಿಸಿ. . .

ಸುಂದರ—ಏನು? ಯಾತಕ್ಕೆ? ನಮ್ಮೊಳಗೆ ಪಾಲಿಸಿ ಗೀಲಿಸಿ ಒಂದೂ ಬೇಡ ಸಾರ್! ಹುಡುಗಿ ನೋಡೋದಕ್ಕೆ ಕೆಂಪಗೆ ಚೆನ್ನಾಗಿದ್ದಾಳೆ. ನಿಮ್ಮ ಮನಸ್ಸಿ ನಲ್ಲಿರೋದನ್ನ ಹೇಳಿಬಿಡಿ. ಪಾಲಿಸಿಗೋಸ್ಕರ 'ಊರಿಗೆ ಹೋಗಿ ಕಾಗದ ಬರೀತೀನಿ' 'ಹೆಂಗಸರನ್ನು ಕೇಳಿ ಯಾವುದನ್ನೂ ತಿಳಿಸುತೀನಿ' ಅಂತ ಅವೆಲ್ಲಾ ಬೇಡ. ಯಾವುದೂ ಎದುರೆದುರಿಗೆ ಖಂಡಿತ ಖಂಡಿತವಾಗಿರಬೇಕು.

ಬಂದವರು—ನನಗೂ ಅದೇ ಇಷ್ಟ.

ಸುಂದರ—ಬಹಳ ಸಂತೋಷ. ದೇವರೇ ನಮ್ಮಿಬ್ಬರನ್ನೂ ಸರಿಯಾಗಿ ಸೇರಿಸಿ ದ್ದಾನೆ.

ಬಂದವರು—ಅದರಲ್ಲೇನು ಸಂದೇಹ! ಆ ಭಗವಂತ ನಮ್ಮೆಲ್ಲರ ಕಾರ್ಯವನ್ನೂ ನೆರವೇರಿಸುತ್ತಾನೆ. ಅಂ . . . ನೀವು ದೊಡ್ಡ ಸಂಸಾರವಂದಿಗರು. ಅದೂ ಅಲ್ಲದೆ ನಿಮ್ಮ ಮಗಳ ಮದುವೆಗಾಗಿ ಬಹಳ ಹಣ ಖರ್ಚು ಆಗಬೇಕಾಗುತ್ತೆ. ಆದ್ದರಿಂದ ನಾನು ನಿಮಗೆ ಹೇಳೋದು ಏನೆಂದರೆ, ನೀವು ನಿಮ್ಮ ಮಕ್ಕಳ ಹೆಸರಿನಲ್ಲಿ ಪಾಲಿಸಿ ಗಳನ್ನು ತಗೋಬೇಕು. ನೀವು ನಿಮ್ಮ ಹಿರಿಯ ಹುಡುಗಿ ಹೆಸರಿನಲ್ಲಿ ಎರಡು ವರ್ಷಕ್ಕೆ ಮುಂಚೆ ತಗೊಂಡಿದ್ದರೆ. . . .

ಸುಂದರ (ಆಶ್ಚರ್ಯದಿಂದ)—ಏನು, ಏನು? ಮಕ್ಕಳ ಪಾಲಿಸೀನಾ? ಯಾಕೆ? ನಿಮಗೂ ಆ ಹಾಳಾದ ಇನ್ಷೂರೆನ್ಸ್ ಕಂಪೆನಿಗೂ ಏನೂ ಸಂಬಂಧ ಇಲ್ಲತಾನೇ?

ಬಂದವರು—ತಾವು ನನ್ನನ್ನು ಯಾರು ಅಂದುಕೊಂಡಿರಿ? ನಾನೇ ಆ ಪ್ಲಿನ್ತೀ ಸ್ಥಾನ್ ಇನ್ಷೂರೆನ್ಸ್ ಕಂಪೆನಿಯ ಆರ್ಗನೈಸರು. (ಇನ್ಷೂರೆನ್ಸ್ ಕಂಪೆನಿಯ ಸಣ್ಣ ಪುಸ್ತಕಗಳನ್ನೂ ಪ್ರಕಟನೆಗಳನ್ನೂ ಕೈಪೆಟ್ಟಿಗೆಯಿಂದ ತೆಗೆದು ಸುಂದರರಾಯರ ಕೈಗೆ ಕೊಡುತ್ತ) ನಮ್ಮ ಪ್ರೀಮಿಯಂ ಬಹಳ ಕಮ್ಮಿ. ಬೋನಸ್ ಬಹಳ ಜಾಸ್ತಿ. ನಮ್ಮ ಗೋಪಾಲ ಯ್ಯರೇ ನಿಮ್ಮ ಅಡ್ರೆಸ್ಸನ್ನ ಕೊಟ್ಟಿದ್ದು. ಅದಕ್ಕೇ ತಮ್ಮನ್ನ ನೋಡಿಬಿಟ್ಟು ಹೋಗೋಣ ಅಂತ ಬಂದೆ. ನಾನು ಮೊದಲು ಹೇಳುತ್ತಿದ್ದ ಹಾಗೆ, ಈಗ ಮದುವೆ ಆಗೋ ಹುಡುಗಿಯ ಹೆಸರಿನಲ್ಲಿ ಎರಡು ವರ್ಷಕ್ಕೆ ಮುಂಚೆ ಒಂದು ಪಾಲಿಸೀನ ತಗೊಂಡಿದ್ದಿದ್ದರೆ ಈಗ ಖರ್ಚಿಗೆ ಕೈತುಂಬ ಹಣ ಒದಗುತ್ತಿತ್ತು.

ಸುಂದರ (ಬೇಸತ್ತು ಬಿದ್ದು, ಸ್ವಗತ)—ನಾನೆಂಥ ಪೆದ್ದ ! ಇದೇನು ಇವೊತ್ತು ಎಲ್ಲಾ ಹೀಗೇ ಆಗ್ತಾ ಇದೆ ಬೆಳಗಿನಿಂದ ? (ಬಂದವರನ್ನು ಕೋಪದಿಂದ ನೋಡುತ್ತ, ಪ್ರಕಾಶವಾಗಿ) ಸರಿ ! ನಮಸ್ಕಾರ, ನನಗೆ ಕೆಲಸವಿದೆ. ನೀವು ಹೊರಡಬಹುದು !

ಬಂದವರು—ನೀವು ಯಾರೋ ಬೇರೆಯವರನ್ನು ಎದುರುನೋಡುತ್ತ ಇರುವ ಹಾಗಿದೆ. ಹಾಗಾದರೆ ಇನ್ನೊಂದು ದಿನ ಬಂದು ನೋಡಲೆ ತಮ್ಮನ್ನ ?

ಸುಂದರ—ಆ ಕಷ್ಟ ಏನೂ ತಗೋಬೇಡಿ. ಈಗ ಹೊರಡಿ. ನಮಸ್ಕಾರ ! (ಬಂದವರು ಹೋಗುತ್ತಾರೆ) ಹಾಳಾಗಿ ಹೋಗಲಿ, ಅವನೂ ಅವನ ಇನ್ಷೂರೆನ್ಸೂ ! ಇವನನ್ನೇ ನಾನು ಇಷ್ಟು ಹೊತ್ತೂ ಉಪಚಾರಮಾಡಿದ್ದು ? ಹಯ್ಯೊ, ನಾನೊಬ್ಬ ಹೇಳಿ ಮಾಡಿಸಿದ ಮಡಿಯ ! (ಹಣೆಯನ್ನು ಬಡಿದುಕೊಂಡು) ಅವನನ್ನು ಬೈದು ಏನು ಪ್ರಯೋಜನ ? ಎಲ್ಲಾ ನನ್ನ ದುರದೃಷ್ಟ ! ಇವೊತ್ತು ಎದ್ದ ಹೊತ್ತು ಒಳ್ಳೆಯದಲ್ಲ ಅಂತ ಕಾಣುತ್ತೆ. ಎಲ್ಲಾ ಎಡವಟ್ಟಾಗುತ್ತಿದೆ !

ಜಾನಕಿ (ಪ್ರವೇಶಿಸಿ, ಉತ್ಸಾಹದಿಂದ)—ಎಲ್ಲೀಂದ್ರೆ ಬೀಗರು ? ಕಾರು ಎಲ್ಲಿ ಹೋಯಿತು ? ಏನು ಹೇಳಿದರು ? ಒಪ್ಪಿಕೊಂಡರೆ ? ಹುಡುಗೀನೇ ನೋಡಲಿಲ್ಲವಲ್ಲ !

ಸುಂದರ—ಹೋಗೇ ! ಉರಿಯೋ ಬೆಂಕೀಗೆ ಎಣ್ಣೆ ಹಾಕಿದ ಹಾಗೆ, ನೀನೇನು ಕೇಳ್ತೀಯೆ !

ಜಾನಕಿ—ಏನು ? ಏನಾಯಿತು ? ಎಲ್ಲಿ ಅವರು ? ಏನು ಹೇಳಿದರು ? (ಹಿಂತಿರುಗಿ ನೋಡಿ) ಅದ್ಯಾರೋ ಬಂದಿದ್ದಾರೆ (ಎಂದು ಒಳಕ್ಕೆ ಹೋಗುವಳು.)

ಯಾಚಕ ಬ್ರಾಹ್ಮಣ (ಒಂದು ತಟ್ಟೆಯಲ್ಲಿ ತಾಳಿ, ಅರಿಸಿನ ಕುಂಕುಮ, ಕೆಲವು ಕಾಸುಗಳು ಇವುಗಳನ್ನು ಇಟ್ಟುಕೊಂಡು ಪ್ರವೇಶಿಸಿ)—ಯಾರೂ ಇಲ್ಲ ನಾನು. ಹಿ . . . ಹಿ . . . ಹಿ . . . ನಮ್ಮ ಹುಡುಗೀಗೆ ತಿರುಪತೀಲಿ ಮದುವೆ ಮಾಡ್ತೀನಿ ಅಂತ ಹರಸಿಕೊಂಡಿದ್ದೆ. ಅದಕ್ಕೋಸ್ಕರ ತಮ್ಮಂಥ ದೊಡ್ಡಮನುಷ್ಯರನ್ನು ನೋಡಿ ಹಾಗೇ . . .

ಸುಂದರ (ರೋಷದಿಂದ)—ನಡೀರಿ ಆಚೆಗೆ ! ಹೋಗಿ ಹೊರಕ್ಕೆ ! ನಮ್ಮ ಹುಡುಗೀಗೆ ಮದುವೆಯಾಗೋದರೊಳಗೇ ಕಟ್ಟಿದ ತಾಳಿ ಕಿತ್ತುಹೋಗುತಾ ಇದೆ. ನಿಮ್ಮ ಹುಡುಗೀಗೆ ಮದುವೆ ಆದರೇನು ಆಗದೆ ಇದ್ದರೇನು ? ನನ್ನ ತಾಪತ್ರಯವೇ ಎಷ್ಟೋ ಇದೆ ನನಗೆ.

ಯಾಚಕ—ತಮ್ಮಂಥ ಪ್ರಭುಗಳೇ ಹೀಗೆ ಹೇಳಿಬಿಟ್ಟರೆ, ನಮ್ಮಂಥ ಬಡವರು ಏನು ಮಾಡುವುದು ? ಮಾಂಗಲ್ಯದಾನ ಮಾಡಿದರೆ ಎಷ್ಟೋ ಪುಣ್ಯ ಅಂತ ತಮಗೇ ಗೊತ್ತು. ಅದನ್ನು ಕುರಿತು ನಾನು ತಮಗೆ ಹೇಳಬೇಕಾದ್ದೇ ಇಲ್ಲ.

ಸುಂದರ—ನಡೀರಿ ಆಚೆಗೆ ಎಂದರೆ ನಡೀಬೇಕು. ಇನ್ನೂ ನಿಂತುಕೊಂಡಿದ್ದೀರಾ? ಜವಾನನ್ನ ಕೂಗಿ ಕತ್ತುಹಿಡಿದು ತಳ್ಳಿಸಬೇಕ್ಕೇನು? ಸುಳ್ಳು ಹೇಳಿಕೊಂಡು ಯಾಚಕಕ್ಕೆ ಬರೋದು, ನಮ್ಮನ್ನು ಪೀಡಿಸೋದು. ಮದುವೆಯಂತೆ, ಮುಂಜಿ! ಎಲ್ಲಾದರೂ ಚಾಕರಿ ಮಾಡಿಹೋಗಿ!

ಯಾಚಕ (ಹೋಗುತ್ತಾ)—ಇವರೆಲ್ಲಾ ಊರಿನ ದೊಡ್ಡ ಮನುಷ್ಯರಂತೆ! ಯಾಚಕ ಕೊಡೋಕೆ ಬಂದಾಣೆ ಗತಿಯಿಲ್ಲ. ಎಂಥಾ ದೊಡ್ಡ ಮನುಷ್ಯರೋ ಇವರೆಲ್ಲಾ! ಬರ್ತಾ ಬರ್ತಾ ಎಲ್ಲಾ ಬರೀ ವೇಷ ಈ ಕಾಲದಲ್ಲಿ!

ಸುಂದರ—ಏಯ್, ಏನು ಹೇಳಿದೆ? ಭಿಕ್ಷಕ್ಕೆ ಬಂದು ಎಷ್ಟೋ ಜೋರು ನಿನಗೆ? ನನ್ನ ಸಮಾಚಾರ ಗೊತ್ತಿಲ್ಲ ಅಂತ ಕಾಣುತ್ತೆ ಇನ್ನೂ? ಯಾರು ಅಂತ ತಿಳಿದುಕೊಂಡೆ? ಹಲ್ಲು ಮುರಿದುಬಿಟ್ಟೇನು, ಹುಷಾರ್! (ಆಗ ಬೀಗನಾಗಬೇಕಾಗಿದ್ದ ಬ್ರಾಹ್ಮಣನು ಕಂಕುಳಲ್ಲಿ ಒಂದು ಮೂಟೆಯನ್ನೂ, ಎಡಗೈಯಲ್ಲಿ ಒಂದು ಬೀಸಣಿಗೆಯನ್ನೂ, ಬಲಗೈಯಲ್ಲಿ ಒಂದು ಮಡಿಚೀಲವನ್ನೂ ತೆಗೆದುಕೊಂಡು ಪ್ರವೇಶಿಸುತ್ತಾನೆ. ಆತನನ್ನೂ ಒಬ್ಬ ಯಾಚಕನೆಂದೆಣಿಸಿ ರೇಗಿ) ಏನ್ರೀ ನೀವೂ ಒಬ್ಬರು ಬಂದಿರೋ? ಇವೊತ್ತು ಏನೂ ಕೊಡಲಾರೆ; ಹೋಗಿ ಬಿಟ್ಟು ಬನ್ನಿ!

ಬೀಗ—ಇದು ತಾನೇ ಸುಂದರರಾಯರ ಮನೆ?

ಸುಂದರ—ಹೌದು, ಹೌದು. ಏನು, ಬರುತ್ತಾ ಬರುತ್ತಾ ಈ ಕಾಲದಲ್ಲಿ ಊರು ಹೆಸರು ಎಲ್ಲಾ ಕೇಳಿಕೊಂಡು ಭಿಕ್ಷಕ್ಕೆ ಬರೋದೇನು ಪದ್ಧತಿ?

ಬೀಗ (ಸ್ವಲ್ಪ ದೊಡ್ಡಗಂಟಲಲ್ಲಿ)—ಕಾಗದ ಕೂಡ ಹಾಕಿದ್ದೆ ಇವೊತ್ತು ಬರ್ತೀನಂತ. ಮೊದಲನೇ ರೈಲು ತಪ್ಪಿಹೋಯಿತು.

ಸುಂದರ—ಇದೇನು ತಮಾಷೆ ಇದು? ಬೇಡೋದು ಭಿಕ್ಷೆ; ಅದಕ್ಕೆ ಕಾಗದ ಹಾಕಿದ್ದರಂತೆ! ನಾನು ನಿಮ್ಮನ್ನು ಕರಕೊಂಡು ಬರೋದಕ್ಕೆ ಆಳು ಕಳುಹಿಸಬೇಕಾಗಿತ್ತೇನು ಸ್ಟೇಷನ್ನಿಗೆ? ಪರವಾಯಿಲ್ಲ! ಯಾವೂರು ನಿಮ್ಮದು?

ಬೀಗ—ಮದರಾಸು.

ಸುಂದರ—ಓಹೋ, ಮದರಾಸಿನಲ್ಲಿ ಇದೇನೋ ನಿಮಗೆ ಕೆಲಸ? ನಮ್ಮೂರಿನಲ್ಲಿ ಅದೆಲ್ಲಾ ನಡೆಯೋದಿಲ್ಲ. ಹೊರಡಿ ಮೊದಲು! ಜಾಸ್ತಿ ಮಾತನಾಡಿದರೋ ನಾಯಿ ಬಿಚ್ಚಿ ಬಿಡ್ತೀನಿ!

ಬೀಗ—ಸ್ವಾಮಿ ಯಾರನ್ನಾ . . .

ಸುಂದರ—ಏನು, ನನ್ನ ಹತ್ತಿರವೇ ಜೋರುಮಾಡ್ತೀಯಾ, ಯಾಚಕಕ್ಕೆ ಬಂದು?

ಬೀಗ—ಸ್ವಾಮಿ, ಯಾರು ಯಾಚಕಕ್ಕೆ . . . ನೀವು . . .

ಸುಂದರ—ನನ್ನನ್ನೇ ಬೈಯೋಕೆ ಪ್ರಾರಂಭಿಸಿಬಿಟ್ಟೆಯಾ? ಬೆಗರ್! ಯಾರಲ್ಲಿ? ಕತ್ತುಹಿಡಿದು ತಳ್ಳೋ ಇವನ್ನ ಹೊರಕ್ಕೆ!

ಬೀಗ—ಓಹೋ! ಭೇಷ್, ಒಳ್ಳೇ ಮರ್ಯಾದೆ ನಿಮ್ಮ ಮನೇಲಿ! ಕಾಗದ ಹಾಕಿ, ನಿಮ್ಮಮನೆ ಹುಡುಕಿಕೊಂಡು ಬಂದ ನನ್ನ ಬುದ್ಧೀನ ಚಪ್ಪಲೀಲಿ ಹೊಡೆಯ ಬೇಕು! ಸದ್ಯಕ್ಕೆ ನನ್ನ ಮಗನಿಗೆ, ಈ ಮನೇಲಿ ಮದುವೆಮಾಡದೆ ಹೋದೆನಲ್ಲ: ಮದುವೆಗೆ ಮುಂಚೇನೇ ಹೀಗಿರುವಾಗ ಮದುವೆ ಆದಮೇಲೆ . . .

ಸುಂದರ (ಕಕ್ಕಾಬಿಕ್ಕಿಯಾಗಿ, ಬಹಳ ಮರ್ಯಾದೆಯಿಂದ)—ಯಾರು ನೀವು? ನೀವು ಯಾರು?

ಬೀಗ—ಯಾರೋ! ನಾನು ಬೆಗರ್ ಅಲ್ಲ ಸ್ವಾಮಿ! ನಾನುತಾನೇ ಮದರಾಸು ಸುಬ್ರಹ್ಮಣ್ಯಶಾಸ್ತ್ರಿ. ನನ್ನ ಮಗನಿಗೆ ನಿಮ್ಮ ಹೆಣ್ಣನ್ನು ನೋಡೋಕೆ ಬಂದೆ. ಸದ್ಯಕ್ಕೆ ನಿಮ್ಮ ಗುಣ ಮೊದಲೇ ತಿಳೀತು. ದೇವರು ಕಾಪಾಡಿದ. ಸರಿ, ನಾನು ಹೀಗೇ ಹೊರಡುತೀನಿ.

ಸುಂದರ (ಅತಿದುಃಖದಿಂದಲೂ ದೈನ್ಯದಿಂದಲೂ)—ಸ್ವಾಮಿಾ, ಕ್ಷಮಿಸಬೇಕು, ಕ್ಷಮಿಸ ಬೇಕು. ತಪ್ಪಾಯ್ತು, ತಪ್ಪಾಯ್ತು, ತಿಳೀಲಿಲ್ಲ.

ಬೀಗ—ಹೋಗಿರಯ್ಯ ಹೋಗಿ! ನೀವೋ ನಿಮ್ಮ ನಡತೆಯೋ! (ಹೋಗುತ್ತಾನೆ).

ಸುಂದರ—ಸ್ವಾಮಿಾ, ಸ್ವಾಮಿಾ, ಶಾಸ್ತ್ರಿಗಳೇ! (ಸ್ವಲ್ಪದೂರ ಹೋಗಿ ಹಿಂತಿರುಗಿ ಬಂದು, ತಲೆಯ ಮೇಲೆ ಕೈಹೊತ್ತುಕೊಂಡು) ಅಯ್ಯೋ ನಾನು ಹಾಳಾಗಿಹೋಗಬಾರದೆ? ನಾನೊಬ್ಬ ಶುದ್ಧ ಮುಟ್ಠಾಳ! ಹೀಗೂ ಬುದ್ಧಿಬಂತೆ ನನಗೆ? (ತಲೆ ಚಚ್ಚಿಕೊಳ್ಳುವನು.)

ಮನೆಯ ಜವಾನ (ಪ್ರವೇಶಿಸಿ)—ಬುದ್ದೀ, ಈ ರೈಲಿನಾಗೂ ಯಾರೂ ಬರ್ನಿಲ್ಲ.

ಸುಂದರ—ನಡಿಯೋ ಆಚೆ! (ಜವಾನನು ಹೋಗುವನು.)

ಆಫೀಸಿನ ಜವಾನ (ಪ್ರವೇಶಿಸಿ)—ಬುದ್ದೀ ಇವೊತ್ತು ರಜಾ ಕೊಡಾಕೆ ಆಗೋಕಿಲ್ಲ ಅಂತ ಯೇಳಿದ್ರು ಯಜಮಾನರು. ಇಬ್ಬರು ಮೂವರು ರಜಾ ತಗೊಂಡವರಂತೆ. ಬಿರ್ರನೆ ಬರ್ಬ್ಯೋಳಿದ್ರು ಬುದ್ದೀ.

ಸುಂದರ—ಆಂ . . . ಏನು, ಏನು? (ಕಣ್ಣು ಕಣ್ಣು ಬಿಡುತ್ತ ಸೋಫಾದಲ್ಲಿ ಕುಳಿತು ಬಿಡುವನು.)

ತೆರೆ

---

# ಕೇಳಿದೆನು ಒಂದುದಿನ

[COLERIDGE: 'I asked my fair one happy day.']

೧

ಕೇಳಿದೆನು ಒಂದು ದಿನ ನಾನೆನ್ನ ಚೆಲುವೆಯನು—
"ಪ್ರಿಯೆ ನಿನಗೆ ಹೆಸರಾವುದಿಷ್ಟ"ವೆಂದು.
"ಸಿರಿಯೊ ಸರಸತಿಯೊ ರತಿಯೊ ಪಾರ್ವತಿಯೋ—
ನಿನ್ನ ನಾನೇನೆಂದು ಕರೆಯಲೆಂ"ದು.

೨

ಮಂದಹಾಸವ ಬೀರಿ ಮೆಲ್ಲನೆಂದಳು ಚೆಲುವೆ—
"ಹೆಸರೊಳೇನಿಹುದು? ಯಾವುದೋ ಒಂದು!
ಏನಾದರೂ ಕರೆ, ಚೆನ್ನ. ಸಾಕು ಮರೆಯದಿರೆ;
ಕರೆಯೆ ನೀನೆನ್ನ ನಿನ್ನವಳು ಎಂದು."—

ಎಂ. ರಾಮರಾವ್

# ಅಕ್ಬರ್ ಮತ್ತು ಇಸ್ಲಾಂ

ಮೊಗಲ್ ಚಕ್ರಾಧಿಪತ್ಯಕ್ಕೆ ನಿಜವಾದ ತಳಹದಿಯನ್ನು ಹಾಕಿದವನೂ, ಸುಮಾರು ೪೫ ವರ್ಷಗಳ ಕಾಲ ಬೀಹಾರ ಮತ್ತು ಬಂಗಾಲದ ಪಠಾಣರೊಂದಿಗೂ, ಮೇವಾರ ಮಾಳವಗಳ ರಾಜಪುತ್ರರೊಂದಿಗೂ, ದರ್ಖ್ಖನ ರಾಜ್ಯಗಳಾದ ಅಹಮದ್‌ನಗರ ಖಾನ್ದೇಶಗಳೊಂದಿಗೂ, ರಣರಂಗದಲ್ಲಿ ಹೋರಾಡಿ ಮೊಗಲ್ ಸಾಮ್ರಾಜ್ಯವನ್ನು ವಿಸ್ತರಿಸಿದವನೂ ಆದ ಅಕ್ಬರನನ್ನು ಚರಿತ್ರೆಯನ್ನು ಅರಿಯದವರಿಲ್ಲ. ಕೇವಲ ೧೩ ವರ್ಷದ ಹುಡುಗನಾಗಿದ್ದಾಗಲೇ ರಾಜ್ಯದ ಹೊರೆಯು ಇವನ ಮೇಲೆ ಬಿತ್ತು. ಮೊಗಲರಿಗೆ ಸೋತು ರಾಜ್ಯವನ್ನು ಕಳೆದುಕೊಂಡಿದ್ದ ಪಠಾಣರು ಈ ದೇಶದಿಂದಲೇ ಅವರನ್ನು ಅಟ್ಟಿಬಿಡಬೇಕೆಂದು ಹೆಚ್ಚು ಸೈನ್ಯಗಳನ್ನು ಶೇಖರಿಸುತ್ತಿದ್ದರು. ಆದರೆ ಅಕ್ಬರನ ರಾಜಕೀಯ ಪಟುತ್ವ, ಸೈನಿಕವೃತ್ತಿಯ ಮಿಗಿಲಾದ ಪರಿಶ್ರಮ, ಚಾತುರ್ಯ, ರಾಯಭಾರದ ನಿಪುಣತ್ವ, ವಿಶಾಲವಾದ ಮನಸ್ಸು, ದೂರದೃಷ್ಟಿ—ಇವುಗಳು ಅವನ ಶತ್ರುಗಳನ್ನು ಪರಾಜಿತರನ್ನಾಗಿ ಮಾಡಿ ರಾಜಕೀಯ ಯಶಸ್ಸನ್ನು ಹೆಚ್ಚಿಸಿದುವು. ಮೊಗಲರ ರಾಜ್ಯಭಾರಕ್ರಮವನ್ನು ಒಂದು ರೂಪಕ್ಕೆ ತಂದು, ಹಿಂದುಗಳೂ ಮುಹಮ್ಮದೀಯರೂ ಒಂದೇ ಜನಾಂಗಕ್ಕೆ ಸೇರಿದವರೆಂಬ ಅಂಶವನ್ನು ಸಾಧಿದವನು ಅಕ್ಬರ್ ಮಹಾಶಯ. ಹಿಂದುಗಳ ಮತ್ತು ಮುಹಮ್ಮದೀಯರ ಏಕೀಕರಣಕ್ಕಾಗಿ ದುಡಿದ ಚರಿತ್ರೆಯ ಮಹಾವ್ಯಕ್ತಿಗಳ ಪೈಕಿ ಅಕ್ಬರನೊಬ್ಬನು. ಪ್ರತಿಭಾಶಾಲಿಯೂ, ಪರಾಕ್ರಮಿಯೂ, ರಾಜಕಾರಣಪಟುವೂ, ಪಠಾಣರ ತಿಲಕಸ್ವರೂಪನೂ, ಮೊಗಲರ ಮಾರ್ಗದರ್ಶಕನೂ ಆದ ಷೇರ್‌ಷಹನೇ ಅಕ್ಬರನಿಗೆ ಈ ವಿಷಯದಲ್ಲಿಯೂ ಮೇಲ್ಪಂಕ್ತಿಯನ್ನು ಹಾಕಿಕೊಟ್ಟವನು.

ಕ್ರಿ.ಶ. ೧೯ನೆಯ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರು ಮೊಗಲರ ಚರಿತ್ರೆಯಲ್ಲಿ ಶೋಧನೆಗಳನ್ನು ನಡಸಲು ಪ್ರಾರಂಭಿಸಿದರು. ಒಟ್ಟಿನಲ್ಲಿ ಭರತ ಖಂಡದ ಚರಿತ್ರೆಯು ಈ ಸಂಶೋಧಕರಿಂದಲೇ ಬಹಳ ಮುಂದುವರಿಯಿತು. ಈ ವಿಷಯದಲ್ಲಿ ಭಾರತೀಯ ವಿದ್ವಾಂಸರು ಪಾಶ್ಚಾತ್ಯ ವಿದ್ವಾಂಸರಿಗೆ ಋಣಿಗಳು. ಆದರೆ ಪಾಶ್ಚಾತ್ಯ ವಿದ್ವಾಂಸರು ಮೊಗಲ ಇತಿಹಾಸದ ಶೋಧನೆಯಲ್ಲಿ ಕೆಲವು ತಪ್ಪುಗಳನ್ನು ಮಾಡಿದ್ದಾರೆ. ಅವರು ಮೊಗಲ ಇತಿಹಾಸಕ್ಕೆ ಸಂಬಂಧಪಟ್ಟ ಪರ್ಷಿಯನ್ ಗ್ರಂಥಗಳನ್ನು ಕೂಲಂಕಷವಾಗಿ ವಿಮರ್ಶಿಸಿ ಅವುಗಳಲ್ಲಿ ಅಡಕವಾದ ಚರಿತ್ರೆಯ ವಿಷಯ

ಗಳನ್ನು ಬಯಲಿಗೆ ತರುವಾಗ ತಮ್ಮ ದೇಶದ ರಾಜಕೀಯ ಆರ್ಥಿಕ ಸಾಮಾಜಿಕ ಮತೀಯ ಚಿತ್ರಗಳನ್ನು ಇವುಗಳಲ್ಲಿಯೂ ಹುಡುಕಿದ್ದಾರೆ. ಇದನ್ನು ನಾವು ಕೆನಡಿ, ಡಾ|| ಸ್ಮಿತ್, ಇರ್ವಿನ್, ಬ್ಲಾಕ್‌ಮನ್, ಮೊದಲಾದವರ ಬರವಣಿಗೆಯಲ್ಲಿ ಕಾಣಬಹುದು. ನಮ್ಮಲ್ಲಿ ಜೀವನದ ಹೆಚ್ಚು ಕಾಲವನ್ನು ಮೊಗಲ ಚರಿತ್ರೆಯ ಸಂಶೋಧನೆಗಾಗಿ ಮುಡುಪಾಗಿಟ್ಟವರು ಸರ್ ಜದುನಾಥ್ ಸರ್ಕಾರ್ ಅವರು. ಮೊಗಲರ ಚರಿತ್ರೆಯಲ್ಲಿ ಪಾಶ್ಚಾತ್ಯ ಚರಿತ್ರೆಕಾರರಿಗೆ ಆಸಕ್ತಿಬರಲು ಒಂದು ಕಾರಣವುಂಟು. ಬ್ರಿಟಿಷರು ಇಲ್ಲಿ ರಾಜ್ಯ ಕಟ್ಟಿದಾಗ ಅವರು ಮೊಗಲರ ರಾಜ್ಯಭಾರಕ್ರಮವನ್ನೇ ಅನುಸರಿಸಿದರು. ಅಕ್ಬರನೇ ಮೊಗಲರ ರಾಜ್ಯಭಾರಕ್ರಮದ ಮೂಲಸ್ತಂಭನಾದುದರಿಂದ ಆಂಗ್ಲೇಯ ವಿದ್ವಾಂಸರು ಅಕ್ಬರನ ರಾಜತಂತ್ರ, ಸೈನ್ಯ ಮತ್ತು ಅವನ ರಾಜ್ಯದ ಬೆಳವಣಿಗೆ, ರಾಜಕೀಯ ಮತ್ತು ಮತೀಯ ಸುಧಾರಣೆಗಳು—ಇವುಗಳನ್ನು ಕುರಿತು ಬರೆಯಲುಪಕ್ರಮಿಸಿದರು.

ಅಕ್ಬರನ ಮತೀಯ ಸುಧಾರಣೆಗಳು ವಿದ್ವಾಂಸರಲ್ಲಿ ಒಂದು ದೊಡ್ಡ ಚರ್ಚೆಗೆ ಕಾರಣವಾಗಿವೆ. ಕೆಲವು ಚರಿತ್ರೆಕಾರರು ಈ ಸುಧಾರಣೆಗಳು ಅಂತರಂಗದಲ್ಲಿ ರಾಜಕೀಯ ಬದಲಾವಣೆಗಳಿಗೆ ಅನುಕೂಲವಾಯಿತೆಂದು ವಾದಿಸುತ್ತಾರೆ. ಫ್ರಾನ್ಸಿನ ನಾಲ್ಕನೆಯ ಹೆನ್ರಿ, ಇಂಗ್ಲೆಂಡಿನ ರಾಣಿ ಎಲಿಜಬೆತ್ ಇವರುಗಳಂತೆಯೇ ಅಕ್ಬರನು ಮತದ ಸುಧಾರಣೆಗಳನ್ನು ರಾಜಕೀಯ ಕಾರಣಗಳಿಗಾಗಿ ಮಾಡಿದನೆಂದು ಇವರುಗಳ ಅಭಿಪ್ರಾಯ. ಇನ್ನೊಂದು ಗುಂಪಿನವರು ಅಕ್ಬರನ ಹೆಮ್ಮೆಯೂ ಹೊಗಳಿಕೆಯ ಆಸೆಯೂ ಇದಕ್ಕೆ ಕಾರಣವೆನ್ನುವರು. ಅಕ್ಬರನಿಗೆ ದೇವರಲ್ಲಿ ಸ್ವಾಭಾವಿಕವಾಗಿ ಭಕ್ತಿಯಾಗಲಿ ಮತೀಯ ಧರ್ಮದಲ್ಲಿ ನಂಬಿಕೆಯಾಗಲಿ ಇರಲಿಲ್ಲವೆಂಬುದು ಇವರ ಅಭಿಪ್ರಾಯ.

ಮೇಲೆ ಹೇಳಿದ ಈ ಅಭಿಪ್ರಾಯಗಳಿಗೆ ಎರಡು ಆಧಾರಗಳಿವೆ. ಒಂದನೆಯದು ಅಬ್ದುಲ್ ಖಾದರ್ ಅಥವಾ ಬದೋನಿ ಎಂಬಾತನ ಪುಸ್ತಕ. ಇದು ಪರ್ಷಿಯನ್ ಭಾಷೆಯಲ್ಲಿದೆ. ಇದನ್ನು ಇಂಗ್ಲೀಷಿಗೆ ತರ್ಜುಮೆಮಾಡಿದ್ದಾರೆ. ಎರಡನೆಯದು ಜಸೂಟ್ ಮತ್ತು ಪೋರ್ಚುಗೀಸ್ ಪಾದ್ರಿಗಳ ಬರವಣಿಗೆ. ಅಬ್ದುಲ್ ಖಾದರ್ ಬದೋನಿ, ಅಬುಲ್ ಫಸಲ್ ಮತ್ತು ಫೈಸಿ—ಈ ಮೂವರೂ ಸಹಪಾಠಿಗಳು. ಇವರ ಗುರು ಷೇಕ್ ಮುಬಾರಕ್. ವಿದ್ಯಾಭ್ಯಾಸ ಮುಗಿದಮೇಲೆ ಇವರು ಮೂವರೂ ಅಕ್ಬರನ ಆಸ್ಥಾನಕ್ಕೆ ಸೇರಿದರು. ಫಸಲ್ ಮತ್ತು ಫೈಸಿ ಬಹಳ ಬೇಗ ದೊಡ್ಡದೊಡ್ಡ ಪದವಿಗೆ ಬಂದರು. ಬದೋನಿಯು ಮೇಲಕ್ಕೇರಲಿಲ್ಲ. ಇದ್ದ ಜಾಗದಲ್ಲಿಯೇ ಇದ್ದನು. ಇಷ್ಟೇ ಅಲ್ಲ, ಇವನ ಕೆಲಸವೇ ಹೋಯಿತು. ಇವನು ಅಕ್ಬರನ ಮೆಚ್ಚುಗೆಯನ್ನು

ಪಡೆದಿದ್ದ "ಖಿರದ್ ಆಫ್ ಜ" ಎಂಬ ಪುಸ್ತಕದ ಕೈ ಬರೆಹದ ಪ್ರತಿಯನ್ನು ನೀಗಿ ಅಕ್ಬರನಿಗೆ ಮುಖವನ್ನು ತೋರಿಸಲಾರದೆ ಕೆಲಸವನ್ನು ಕಳೆದುಕೊಂಡನು. ಆಗ ಫಸಲ್‌ನ ಅಣ್ಣ ಫೈಸಿ ಇವನ ಸಹಾಯಕ್ಕೆ ಬಾರದಿದ್ದರೆ ಅಕ್ಬರನ ಆಸ್ಥಾನಕ್ಕೆ ಪುನಃ ಪ್ರವೇಶಮಾಡಲು ಇವನಿಗೆ ಅವಕಾಶವೇ ಸಿಕ್ಕುತ್ತಿರಲಿಲ್ಲ. ಆದರೆ ಬದೋನಿಗೆ ಕೃತಜ್ಞತೆಗೆ ಬದಲಾಗಿ ಫಸಲ್ ಮತ್ತು ಫೈಸಿಯನ್ನು ಕಂಡರೆ ಅಸೂಯೆ ದ್ವೇಷಗಳು ಉಂಟಾದುವು. ಫೈಸಿಯು ಸತ್ತಾಗ ಬರೆದ ಒಂದು ಚರಮಶ್ಲೋಕದಲ್ಲಿ ಅವನನ್ನು "ನರಕದ ನಾಯಿ" ಎಂದು ಹೀಯಾಳಿಸಿದ್ದಾನೆ. ಇದೇ ಫೈಸಿಯು ಮಾಡಿದ ಉಪಕಾರಕ್ಕೆ ಬದೋನಿಯು ಮಾಡಿದ ಪ್ರತ್ಯುಪಕಾರ. ಅಕ್ಬರನು ಫೈಸಿಯನ್ನು ತನ್ನ ಆಸ್ಥಾನದ ಕವಿ ಸಾರ್ವಭೌಮನನ್ನಾಗಿ ಮಾಡಿದುದೂ ಬದೋನಿಗೆ ಸಹಿಸಲಿಲ್ಲ. ಅವನ ಮೇಲಿನ ದ್ವೇಷವನ್ನು ಅವನ ಕವನಗಳ ಮೇಲೂ ತೋರಿಸಿದ್ದಾನೆ. ಫೈಸಿ ಸುಮಾರು ೪೦ ವರ್ಷಗಳ ಕಾಲ ಕವನಗಳನ್ನು ರಚಿಸಿದನು ಮತ್ತು ೨ ಲಕ್ಷ ಪದ್ಯ ಗಳನ್ನು ಮಾಡಿದನು. ಬದೋನಿಯು ಅವನ ಪದ್ಯಗಳಲ್ಲಿ ಒಂದೂ ಚೆನ್ನಾಗಿಲ್ಲವೆಂದು ಹೇಳಿದ್ದಾನೆ. ಅಕ್ಬರನು ಇವನಿಗೆ ರಾಮಾಯಣ ಮತ್ತು ಮಹಾಭಾರತಗಳನ್ನು ಪಾರ್ಸೀಭಾಷೆಗೆ ಭಾಷಾಂತರಮಾಡಬೇಕೆಂದು ನೇಮಿಸಿದುದು ಬಹಳ ದುಃಖ ವನ್ನುಂಟುಮಾಡಿತೆಂದು ಬದೋನಿಯೇ ಬರೆದಿದ್ದಾನೆ. ಬದೋನಿಯು ಮುಲ್ಲಾ ಪಂಗಡಕ್ಕೆ ಸೇರಿದವನು. ಪರಮತಗಳಲ್ಲಿ ಇವನಿಗೆ ಸಹನೆ ಕಡಮೆ. ಅಕ್ಬರನು ಇಸ್ಲಾಂ ಮತವನ್ನು ತ್ಯಜಿಸಿದನೆಂದು ಚರಿತ್ರೆಕಾರರು ಸಿದ್ಧಾಂತಮಾಡಿರುವುದು ಈ ಬದೋನಿಯ ಬರವಣಿಗೆಯ ಆಧಾರದಮೇಲೆಯೇ. ಆತನ ಬರವಣಿಗೆಗೆ ಎಷ್ಟು ಬೆಲೆ ಕೊಡಬೇಕೆಂಬ ವಿಷಯವನ್ನು ನಿರ್ಣಯಿಸುವಾಗ ಬದೋನಿಯ ವಿಷಯವಾಗಿ ಮೇಲೆ ಹೇಳಿದ ಕೆಲವು ಮಾತುಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಮತಸಂಬಂಧದ ವಿಚಾರವಾಗಿ ಅವನು ಬರೆಯುವಾಗ ಆತನು ಶುದ್ಧ ಸುನ್ನಿಯಾಗಿದ್ದನೆಂಬ ವಿಷಯ ವನ್ನು ಮರೆಯಬಾರದು. ಅಕ್ಬರನು ಇತರ ಮತಗಳಲ್ಲಿ ತೋರಿಸುತ್ತಿದ್ದ ಸಹನೆಯು ಬದೋನಿಗೆ ಸರಿಬೀಳಲಿಲ್ಲ. ಇವನು ಬರೆದ ಪುಸ್ತಕದಲ್ಲಿ ಅಕ್ಬರನ ಮೇಲೆ ಬಹಳ ದೂರುಗಳಿದ್ದುದರಿಂದ ಅಕ್ಬರನು ಜೀವಂತನಾಗಿದ್ದಾಗ ಇವನ ಪುಸ್ತಕವು ಬೆಳಕಿಗೆ ಬರಲಿಲ್ಲ. ಇವನ ಜೊತೆಗೆ ಕಾಜ಼ಿಗಳೂ, ಮುಲ್ಲಾಗಳೂ ಸೇರಿಕೊಂಡರು. ಮಧ್ಯಮ ಕಾಲದ ಭಾರತೀಯ ಚರಿತ್ರೆಯ ಮುಸಲ್ಮಾನ ಚಕ್ರವರ್ತಿಗಳ ಪೈಕಿ ಮಹಮದ್‌ಬಿನ್ ತೊಗಲಖ್ ಮತ್ತು ಅಕ್ಬರ್ ಇವರಿಬ್ಬರೇ ಕಾಜ಼ಿಗಳ ಮೇಲೆ ಎದುರುಬಿದ್ದವರು ಮತ್ತು ಅವರನ್ನು ಶಿಕ್ಷೆಗೆ ಗುರಿಮಾಡಿದವರು. ನ್ಯಾಯಶಾಖೆಯೂ, ನ್ಯಾಯದ ತೀರ್ಪೂ ಸಾಮಾನ್ಯವಾಗಿ ಕಾಜ಼ಿಗಳಿಗೆ ಸೇರಿತ್ತು. ಆದರೆ ಕೆಲವು ಚಕ್ರವರ್ತಿಗಳು

4

ಅಪಾರವಾದ ನ್ಯಾಯದ ಮಮತೆಯ ಸಲುವಾಗಿ ತಾವೇ ನ್ಯಾಯತೀರ್ಪನ್ನು ಮಾಡುತ್ತಿದ್ದರು. ಇದು ದಕ್ಷರೂ ಶಕ್ತರೂ ಆದ ಚಕ್ರವರ್ತಿಗಳಿಗೆ ಸಾಧ್ಯವಾಗಿತ್ತು. ಮಹಮದ್ ಬಿನ್ ತೊಗಲಖನ ಕಾಲದಲ್ಲಿ ಕಾಜಿಗಳ ಪ್ರಾಬಲ್ಯವು ಅತಿಯಾಗಿ ಕೊನೆಗೆ ಅವರೇ ಇವನಿಗೆ ಐಲುದೊರೆ ಎಂಬ ನಾಮಕರಣವನ್ನು ಮಾಡಿದರು. ಅಕ್ಬರನ ಮುಂದೆ ಇವರ ಸಾಹಸವು ಸಾಗಲಿಲ್ಲ.

ಇಂಡಿಯಾ ದೇಶಕ್ಕೆ ಮೊಗಲ ಚಕ್ರವರ್ತಿಗಳ ಕಾಲದಲ್ಲಿ ಬಂದ ಕ್ರೈಸ್ತ ಪಾದ್ರಿಗಳ ಬರವಣಿಗೆಯೂ ಇದೇ ಕ್ರಮವನ್ನು ಅನುಸರಿಸಿದೆ. ವಾಸ್ಕೋಡಗಾಮನು ಕ್ಯಾಲಿಕಟ್‌ನಲ್ಲಿ ಬಂದಿಳಿದಾಗ ಅವನಿಗೆ ಎಲ್ಲೆಲ್ಲಿಯೂ ಕ್ರೈಸ್ತರ ಚರ್ಚುಗಳೇ ಕಂಡು ಬಂದುವಂತೆ. ಇದರಿಂದ ಇಂಡಿಯಾದ ಜನರು ಕ್ರೈಸ್ತರೆಂದು ಅವನು ತೀರ್ಮಾನಿಸಿದನು. ಅವನಿಗೆ ಚರ್ಚುಗಳಂತೆ ಕಂಡುಬಂದ ಗೋಪುರಗಳು ದೇವಸ್ಥಾನಗಳೆಂದು ತಿಳಿಯಲಿಲ್ಲ. ಹೀಗೆಯೇ ಕ್ರೈಸ್ತಪಾದ್ರಿಗಳ ಬರವಣಿಗೆಗಳಲ್ಲಿ ಅವರು ಮೋಸಹೋಗಿರುವ ಅನೇಕ ಸಂದರ್ಭಗಳಿವೆ. ಇವರ ಬರವಣಿಗೆಗಳೇ ಸಿದ್ಧಾಂತಗಳೆಂದೂ ಅವೇ ಮೊಗಲ ಚರಿತ್ರೆಯ ಮೂಲಾಧಾರವೆಂದೂ ಸುಪ್ರಸಿದ್ಧ ಆಂಗ್ಲೇಯ ಚರಿತ್ರೆಕಾರರಾದ ಡಾ|| ವಿನ್ಸೆಂಟ್‌ಸ್ಮಿತ್‌ರ ಅಭಿಪ್ರಾಯ. ಈ ಪಾದ್ರಿಗಳು ಅಕ್ಬರನನ್ನು ಕ್ರೈಸ್ತ ಮತಕ್ಕೆ ಸೇರಿಸಿಕೊಳ್ಳಲು ಬಲು ಪ್ರಯತ್ನಿಸಿದರು. ಕೊನೆಗೆ ವಿಫಲರಾದಾಗ ಅಕ್ಬರನಲ್ಲಿ ಇವರಿಗೆ ಅಸಮಾಧಾನವಾಗಿ ಅದು ಅವರ ಬರವಣಿಗೆಯ ಮೇಲೆ ಮುದ್ರೆಯೊತ್ತಿತು.

ಅಕ್ಬರನ ಮತವನ್ನು ವಿಮರ್ಶಿಸುವಾಗ ಕ್ರಿ.ಶ. ೧೬ನೆಯ ಶತಮಾನದ ಪ್ರಾಮುಖ್ಯತೆಯನ್ನು ನೆನಪಿನಲ್ಲಿಡಬೇಕು. ಪ್ರಪಂಚದ ಇತಿಹಾಸದಲ್ಲೇ ೧೬ನೆಯ ಶತಮಾನವು ಸಂಸ್ಕೃತಿಯಲ್ಲಿ ಕ್ರಾಂತಿಯನ್ನೆಬ್ಬಿಸಿತು. ಯೂರೋಪಿನಲ್ಲಿ ನವಜೀವನ (Renaissance) ಉಂಟಾಯಿತು. ಇಸ್ಲಾಂ-ನಲ್ಲಿ ಮಹದಿ ಚಳವಳಿಯೂ, ಇಂಡಿಯಾದಲ್ಲಿ ಭಕ್ತಿಚಳುವಳಿಯೂ ಉತ್ಪನ್ನವಾದುವು. ಎಲ್ಲೆಲ್ಲಿಯೂ ಒಂದು ಹೊಸ ಹುರುಪು ಕಾಣಿಸಿತು. ಇಂಗ್ಲೆಂಡಿನಲ್ಲಿ ಟ್ಯೂಡರ್, ಫ್ರಾನ್ಸಿನಲ್ಲಿ ಬೋರ್ಬನ್, ಸ್ಪೇಯಿನ್ ಮತ್ತು ಆಸ್ಟ್ರಿಯದಲ್ಲಿ ಹಾಪ್ಸ್‌ಬರ್ಗ್, ಪ್ರಷ್ಯದಲ್ಲಿ ಹೊಹೆನ್‌ಜೊಲರ್ನ್, ಈಜಿಪ್ಟಿನಲ್ಲಿ ಮಾಮ್ಲುಕ್, ಪರ್ಷಿಯದಲ್ಲಿ ಸಫಾವಿ, ಚೈನಾದಲ್ಲಿ ಮಿಂಗ್, ಇಂಡಿಯಾದಲ್ಲಿ ಮೊಗಲ್ ಮುಂತಾದ ನಿರಂಕುಶ ಪ್ರಭುತ್ವಗಳು ಸ್ಥಾಪಿತವಾದುವು.

೧೬ನೆಯ ಶತಮಾನವು ಸಂಸ್ಕೃತಿಗಳ ಮಿಳನದ ಕಾಲ. ಈಗ ಜಾತಿ ಮತ್ತು ಮತಗಳಲ್ಲಿದ್ದ ಪರಸ್ಪರ ತಿರಸ್ಕಾರವು ಸಡಿಲವಾಗಿ ಒಂದು ಮತವು ಮತ್ತೊಂದು ಮತದ ಗುಣಗ್ರಹಣ ಮಾಡುವ ಪದ್ಧತಿಯು ಅಂಕುರವಾಯಿತು. ಹಿಂದೂಗಳೂ, ಮುಸಲ್ಮಾನರೂ ಒಂದಾಗಲು ಪ್ರಾರಂಭವಾಯಿತು. ಸಾಧುಸಂತರು ಇದೇ ತತ್ವ

ವನ್ನು ಬೋಧಿಸಿ ಹರಡಿದರು. ಜಾತಿ ಮುಖ್ಯವಲ್ಲ, ಭಕ್ತಿಯೇ ಮುಖ್ಯವೆಂಬ ತತ್ವದ ಮೂಲಕ ಇವರು ಹಿಂದೂ ಮುಸಲ್ಮಾನರ ಏಕೀಕರಣಕ್ಕೆ ಕಾರಣರಾದರು. ಚೈತನ್ಯನು ಬಂಗಾಳದಲ್ಲಿ ಹಿಂದೂಗಳನ್ನೂ ಮುಸಲ್ಮಾನರನ್ನೂ ತನ್ನ ಶಿಷ್ಯವರ್ಗಕ್ಕೆ ಸೇರಿಸಿಕೊಂಡನು. ಯವನ ಹರಿದಾಸನು ಚೈತನ್ಯನ ಪಟ್ಟಶಿಷ್ಯ. ರಮಾನಂದನ ಶಿಷ್ಯರಲ್ಲಿ ಕಬೀರನೇ ಅತ್ಯಂತ ಪ್ರಿಯನಾದವನು. ನಾನಕ್ ಮತ್ತು ದಾದು ಕಬೀರ ನಂತೆಯೇ ಹಿಂದೂಮುಸ್ಲಿಂ ಅಭಿವೃದ್ಧಿಗಾಗಿ ಬೋಧಿಸಿದರು. ಇವರುಗಳ ಬೋಧ ನೆಯ ಫಲವಾಗಿ ರಾಂರಹೀಂ ಕೇಶವ್‌ಕರೀಂ ಎಂಬುದು ಜನಗಳಲ್ಲಿ ಬೇರೂರಿತು.

ಬೈರಾಂಖಾನನ ಮಗನಾದ ಅಬ್ದುಲ್‌ರಹೀಂ ೧೬ನೆಯ ಶತಮಾನದ ಹಿಂದೂ ಮಹಮ್ಮದೀಯ ಸಂಸ್ಕೃತಿಗಳ ಮಿಳನಕ್ಕೆ ಉತ್ತಮವಾದ ಉದಾಹರಣೆ. ಅವನು ಹಿಂದೀ ಸಂಸ್ಕೃತ ಪಾರಸೀಗಳಲ್ಲಿ ಉದ್ದಾಮಪಂಡಿತನಾಗಿದ್ದನು. ಇದೇ ಶತಮಾನದಲ್ಲಿ ಸೂಫಿಗಳು ಹಿಂದೂಮತದ ಗುರುಶಿಷ್ಯ ತತ್ವವನ್ನು ತಾವೂ ಸೇರಿಸಿ ಕೊಂಡರು. ಒಂದು ಕಡೆ ರಮಾನಂದ, ರವಿದಾಸ್, ಕಬೀರ್, ಚೈತನ್ಯ, ದಾದು, ಮೀರಾಬಾಯ್, ನಾಮದೇವ್ ; ಮತ್ತೊಂದು ಕಡೆ ಸಬರ್, ಅಬುಅಲಿಖಲಂದರ್, ಚಿಷ್ಟಿ, ಬಹ್ಲೂಲ್ ಅಕ್ಬರನ ಗುರುವಾದ ಲಥೀಫ್ ಮುಬಾರಕ್, ಫೈಜಿ, ಫಸಲ್ ; ಇವರಿಂದ ಸಂಸ್ಕೃತಿಯ ಮಿಳನಕ್ಕೆ ಬಹಳ ಉಪಕಾರವಾಯಿತು. ಬಡೋನಿಯು ಅಬುಲ್‌ಫಸಲ್‌ನನ್ನು ಹಗಲು ಹೊತ್ತಿನಲ್ಲೇ ದೀಪವನ್ನು ಕೈಯಲ್ಲಿ ಹಿಡಿದುಕೊಂಡು ಏನುಮಾಡಬೇಕೆಂದು ತೋಚದೆ ಬೀದಿಗೆ ಬರುವ ಒಬ್ಬ ಮನುಷ್ಯನಿಗೆ ಹೋಲಿಸಿದ್ದಾನೆ. ನಿಜ, ಈ ವಿದ್ವಾಂಸರು ಬೆಳಕನ್ನು ಕತ್ತಲೆಯನ್ನಾಗಿಯೂ ಕತ್ತಲೆಯನ್ನು ಬೆಳಕ ನ್ನಾಗಿಯೂ ಮಾಡಿದರು. ಅಕ್ಬರನು ಈ ಸಂಸ್ಕೃತಿಯ ಮಿಳನದ ಯುಗಕ್ಕೆ ಸೇರಿ ದವನು. ಅವನು ಕಾಲಧರ್ಮಕ್ಕೆ ತಕ್ಕಂತೆ ನಡೆದನು. ಇದನ್ನು ಪಾಶ್ಚಾತ್ಯ ವಿದ್ವಾಂಸರು ಗಣನೆಗೆ ತಾರದೆ ಅಕ್ಬರನ ಮತೀಯ ವಿಚಾರಗಳಲ್ಲಿ ಅಪಾರ್ಥಗಳನ್ನು ಕಲ್ಪಿಸಿಕೊಂಡಿದ್ದಾರೆ.

ಅಕ್ಬರನ ದಿನೇ ಇಲಾಹಿಯು ಎಲ್ಲಾ ಮತಗಳ ಸಂಪರ್ಕದ ಸಾರ. ಅಕ್ಬರನು ಕಟ್ಟಿಸಿದ ಇಬದತ್ ಖಾನೆಯಲ್ಲಿ ಪ್ರತಿಯೊಂದು ಮತಕ್ಕೂ ಆಹ್ವಾನವಿದ್ದಿತು. ಈ ಇಬದತ್ ಖಾನೆಯನ್ನು ಪ್ರಪಂಚದ ಮೊದಲನೆಯ ಮತೀಯ ಪಾರ್ಲಿಮೆಂಟ್ ಎಂದು ಕರೆದರೆ ತಪ್ಪಾಗಲಾರದು. ಸುನ್ನಿ, ಷಿಯಾ, ಹಿಂದೂ, ಪಾರ್ಸೀ, ಜೈನ, ಸಿಕ್, ಬೌದ್ಧ ಮತ್ತು ಕ್ರೈಸ್ತ ಮತಗಳ ಪ್ರತಿನಿಧಿಗಳು ಅಕ್ಬರನ ಎದುರಿನಲ್ಲಿಯೇ ಚರ್ಚೆ ಗಳನ್ನು ನಡಸುತ್ತಿದ್ದರು. ದಿನೇ ಇಲಾಹಿಯು ಒಂದು ಹೊಸ ಮತವಲ್ಲ. ಬೌದ್ಧ ಮತದಂತೆ ಅದರಲ್ಲಿಯೂ ಒಳ್ಳೆಯ ನಡತೆ ಮತ್ತು ಒಳ್ಳೆಯ ಗುಣಗಳಿಗೆ ಹೆಚ್ಚು

ಬೆಲೆ ಇದ್ದಿತು. ಉದಾರತೆ, ತಪ್ಪುಮಾಡಿದವರನ್ನು ಕ್ಷಮಿಸುವುದು, ಕೋಪವನ್ನು ಶಾಂತಿಯಿಂದ ಗೆಲ್ಲುವುದು, ಪ್ರಾಪಂಚಿಕವಾದ ಆಶೆಗಳಿಂದ ನಿವೃತ್ತಿ, ಪ್ರಾಪಂಚಿಕ ಸಂಕೋಲೆಗಳಿಂದ ಬಿಡುಗಡೆ, ಮುಂದಿನ ಪ್ರಪಂಚದ ಸಲುವಾಗಿ ಪುಣ್ಯ ಸಂಪಾದಿಸುವುದು, ಮೃದುಸ್ವರ, ಮಧುರಭಾಷಣ, ಸಂತೋಷಕರವಾದ ಮಾತುಗಳನ್ನು ಪ್ರತಿಯೊಬ್ಬರಿಗೂ ಉಪಯೋಗಿಸುವುದು, ಎಲ್ಲರಲ್ಲಿಯೂ ಸಹೋದರಭಾವ, ದೇವರಲ್ಲಿ ಆಸಕ್ತಿ, ದೇವರಲ್ಲಿ ಆತ್ಮಸಮರ್ಪಣೆ—ಇವೇ ದಿನೇ ಇಲಾಹಿಯ ಕೆಲವು ಮುಖ್ಯಾಂಶಗಳು. ಇವುಗಳಲ್ಲಿ ಯಾವುದು ಇಸ್ಲಾಂ ಮತಕ್ಕೆ ವಿರೋಧವಾಗಿದೆ?

ದಿನೇ ಇಲಾಹಿಯಲ್ಲಿ ಪಾದ್ರಿಗಳಾಗಲಿ, ಪುರೋಹಿತರುಗಳಾಗಲಿ ಇರಲಿಲ್ಲ. ದಿನೇ ಇಲಾಹಿಗಾಗಿ ಬೇರೆ ಮಸೀದಿ ಬೇಕಾಗಿರಲಿಲ್ಲ. ಏಕೆಂದರೆ ದಿನೇ ಇಲಾಹಿಯು ಇಸ್ಲಾಂ ಮತಕ್ಕೆ ವಿರುದ್ಧವಾಗಿರಲಿಲ್ಲ. ಅದು ಇಸ್ಲಾಂ ಮತದ ಮಡಿಲಿನಲ್ಲಿಯೇ ಬೆಳೆದ ಸೂಫಿಗಳ ಒಂದು ಸಂಸ್ಥೆ.

ಈ ಸಂಸ್ಥೆಗೆ ಸೇರಿದವರು ಸ್ವಸ್ತಿಕದಂತಹ ಗುಂಡಾದ ಅಂಕಿತವನ್ನು ರುಮಾಲಿನ ಮೇಲೆ ಧರಿಸುತ್ತಿದ್ದರು. ಆ ಅಂಕಿತದ ಮಧ್ಯೆ 'ಹೂ' ಎಂಬ ಅಕ್ಷರವು ಕೆತ್ತಲ್ಪಟ್ಟಿತ್ತು. ಬಡೋನಿಯು ಆ ಅಂಕಿತದ ಮೇಲೆ ಅಕ್ಬರನ ಚಿತ್ರವಿತ್ತೆಂದು ಬರೆಯುತ್ತಾನೆ. ಈ ಗುಂಪಿನವರು ಯಾರಾದರೂ ಮತ್ತೊಬ್ಬನನ್ನು ಕಂಡಾಗ 'ಅಲ್ಲಾ ಹೊ ಅಕ್ಬರ್' ಎಂದು ಹೇಳುತ್ತಿದ್ದರು. ಎದುರಾಳಿಯು 'ಜಲ್ಲಾ ಜಲಾಹು' ಎಂದು ಪ್ರತ್ಯುತ್ತರ ಕೊಡುತ್ತಿದ್ದನು. ಮನುಷ್ಯನ ಜೀವನಕಾಲದಲ್ಲೇ ವರ್ಧಂತಿ ಹಬ್ಬದ ಊಟಗಳ ಸ್ನೇರ್ಪಡಿಸುವುದೂ, ಪ್ರಾಣಿಗಳ ಮಾಂಸವನ್ನು ಸಾಧ್ಯವಾದ ಮಟ್ಟಿಗೆ ಉಪಯೋಗಿಸದೆ ಇರುವುದೂ, ಕಟುಕರ ಬೆಸ್ತರ ಜೊತೆಯಲ್ಲಿ ಊಟಮಾಡದೆ ಇರುವುದೂ ಇವರಲ್ಲಿ ಆಚರಣೆಯಲ್ಲಿದ್ದ ಕೆಲವು ಪದ್ಧತಿಗಳಾಗಿದ್ದುವು. ಸತ್ತಮೇಲೆ ಹೂಳುವುದೂ ಸುಡುವುದೂ ಈ ಎರಡೂ ಇವರಲ್ಲಿ ಆಚರಣೆಯಲ್ಲಿತ್ತು. ಇವರಲ್ಲಿ ಎರಡು ಪಂಗಡಗಳು. ಮೇಲೆ ಹೇಳಿದ ಅಂಕಿತವನ್ನು ಮಾತ್ರ ಧರಿಸಿದವರು ಒಂದು ಗುಂಪು. ಹೊರಗಿನ ಮತ್ತು ಒಳಗಿನ ಷರತ್ತನ್ನು ಚಾಚೂ ತಪ್ಪದಂತೆ ನಡೆಯಲು ಒಪ್ಪಿದ್ದವರು ಇನ್ನೊಂದು ಗುಂಪು. ಷೇಕ್ ಮುಬಾರಕ್, ಷೇಕ್ ಫೈಸಿ, ಜಫಾರ್‌ಬೇಗ್, ಕಾಸಿಂಕಹಿ, ಅಬುಲ್‌ಫಜಲ್, ಆಜಂಖಾನ್, ಅಬ್ದುಲ್‌ಸಮದ್, ಮುಲ್ಲಾಷಾ ಮಹಮದ್ ಷಹದಾದ್, ಸೂಫಿ ಅಹಮದ್, ಮಿರ್ ಷರಿಫ್ ಅಮಲ್, ಸುಲ್ತಾನ್ ಕ್ವಾಜಾ, ಮಿರ್ಜಾ ಜಾನಿತಟ್ಟಾ, ತಕೀ ಸುಸ್ತರ್, ಷೇಕ್ ಜದಾಗೊಸ್ಲಾಬೆನಾರಸಿ, ಸಾದರ್ ಜಹಾನ್, ಅವನ ಇಬ್ಬರು ಮಕ್ಕಳು, ಬೀರ್‌ಬಲ್ ಮತ್ತು ಯುವರಾಜ ಸಲೀಮ್— ಈ ಹತ್ತೊಂಬತ್ತು ಜನ ಇಲಾಹಿ ಮತದ ಶಿಷ್ಯರು. ಸ್ಕಾಟ್ಲೆಂಡಿನ ಪ್ರೆಸ್ಬಿಟೇರಿಯನ್ನರು

ಎಷ್ಟರಮಟ್ಟಿಗೆ ಕ್ರೈಸ್ತರೋ ಇಲಾಹಿ ಪಂಗಡಕ್ಕೆ ಸೇರಿದವರೂ ಅಷ್ಟರಮಟ್ಟಿಗೇ ಇಸ್ಲಾಂಗೆ ಸೇರಿದವರು. ಆದುದರಿಂದ ಅಕ್ಬರನು ಇಸ್ಲಾಂ ಮತವನ್ನು ತ್ಯಜಿಸಿದನೆಂಬ ಸಿದ್ಧಾಂತವನ್ನು ಒಪ್ಪುವುದಕ್ಕಾಗುವುದಿಲ್ಲ.

ಇಸ್ಲಾಮನ್ನು ಅಕ್ಬರನು ತ್ಯಜಿಸಿದನೆಂದು ಹೇಳುವವರು ಈ ಕೆಳಗೆ ಕಾಣಿಸಿದ ಆಧಾರದಮೇಲೆ ನಿರ್ಧರಿಸಿದ್ದಾರೆ. ಮೊದಲನೆಯದಾಗಿ ಅಕ್ಬರನು "ಬಿಸ್‌ಮಿಲ್ಲಾ-ಇರ್ ರಹಮಾನ್-ಇರ್ ರಹೀಂ" ಇದಕ್ಕೆ ಬದಲಾಗಿ "ಅಲ್ಲಾ ಹೋ ಅಕ್ಬರ್" ಎಂಬುದನ್ನು ವಿಧಿಸಿದನು. ಬದೋನಿಯೂ ಇತರ ಮುಲ್ಲಾಗಳೂ ಅಕ್ಬರನು ದೇವರ ಹೆಸರಿಗೆ ಬದಲಾಗಿ ತನ್ನ ಹೆಸರನ್ನೇ ಸೇರಿಸಿದನೆಂದು ಅಕ್ಬರನ ಮೇಲೆ ಆಗ್ರಹಮಾಡಿದರು. ಆದರೆ ಬಿಸ್ಮಿಲ್ಲಾ ಮುಂತಾದ ಪದಗಳನ್ನು ಉಪಯೋಗಿಸದೆ ಇರತಕ್ಕ ಅನೇಕ ಪುಸ್ತಕಗಳೂ ಅನೇಕ ಸಂದರ್ಭಗಳೂ ಉಂಟು. ಕೆಲವು ಪುಸ್ತಕಗಳ ಮೊದಲಲ್ಲಿ ದೇವರ ನಾಮ ಅಥವಾ ಬಿಸ್ಮಿಲ್ಲಾಕ್ಕೆ ಬದಲಾಗಿ ೭೮೬ ಎಂಬ ಅಂಕಿಯನ್ನು ಹಾಕುವುದುಂಟು. ಮುಲ್ಲಾಗಳ ಈ ದೂರಿನಲ್ಲಿ ಯಾವ ತಿರುಳೂ ಇಲ್ಲ. ಎರಡನೆಯದಾಗಿ ಅಕ್ಬರನ ಖಾಸುಬಂಗಲೆಯಲ್ಲಿ ಸಾಕಿದ್ದ ನಾಯಿಯೂ ಹಂದಿಯೂ ಇಸ್ಲಾಂ ಮತಕ್ಕೆ ವಿರುದ್ಧವಾಗಿತ್ತೆಂದು ಬದೋನಿಯು ಬರೆದಿದ್ದಾನೆ. ಆದರೆ ೧೬ನೆಯ ಶತಮಾನದಲ್ಲಿ ಇಂಡಿಯಾದಲ್ಲಿ ಜೂಜಿನ ನಾಯಿಗಳನ್ನು ಓಟಕ್ಕಾಗಿ ಸಾಕುತ್ತಿದ್ದರು. ಬೇಟೆನಾಯಿಯ ಆವಶ್ಯಕತೆ ಬೇಟೆಯಲ್ಲಿ ಆಸಕ್ತಿಯಿದ್ದ ಅಕ್ಬರನಂತಹ ರಾಜರಿಗೆ ಬಹಳವಾಗಿತ್ತು. ಹಂದಿಯು ಹಿಂದೂಗಳ ದಶಾವತಾರದ ದೇವರ ರೂಪಗಳಲ್ಲಿ ಒಂದಾಗಿತ್ತೆಂದೂ ಆದುದರಿಂದ ಅಕ್ಬರನು ಹಿಂದೂಗಳ ಪ್ರೇರಣೆಯಮೇಲೆ ಅದನ್ನು ಖಾಸುಬಂಗಲೆಯಲ್ಲಿ ಸಾಕಲು ಅಪ್ಪಣೆಮಾಡಿದನೆಂದೂ ಬದೋನಿಯ ಹೇಳಿಕೆ. ಆದರೆ ಅಕ್ಬರನಿಗೆ ದೇವರ ದಶಾವತಾರ ರೂಪಗಳಲ್ಲೇ ನಂಬಿಕೆಯಿರಲಿಲ್ಲ. ಇವನು ಇಬದತ್ ಖಾನೆಯಲ್ಲಿ ಈ ವಿಷಯದಲ್ಲಿ ಅನೇಕಸಲ ಚರ್ಚೆಮಾಡಿ ದೇವರು ಮೀನು, ಆಮೆ, ಹಂದಿಯ ರೂಪವನ್ನು ಧರಿಸಿದ್ದನೆಂಬುದನ್ನು ಒಪ್ಪದೆ ಖಂಡಿಸಿದ್ದನು. ಅರಮನೆಯ ಖಾಸುಬಂಗಲೆಯಲ್ಲಿ ನಾಯಿ ಹಂದಿ ಮತ್ತು ಇತರ ಅನೇಕ ಪ್ರಾಣಿಗಳನ್ನು ಸಾಕುವಂತೆ ಅಕ್ಬರನು ಏರ್ಪಾಡುಮಾಡಿದ್ದಕ್ಕೂ ಮತೀಯ ವಿಚಾರಗಳಿಗೂ ಯಾವ ಸಂಬಂಧವೂ ಇಲ್ಲ.

ಅರಬ್ಬಿ ಭಾಷೆಯ ವ್ಯಾಸಂಗಕ್ಕೆ ಇದ್ದ ಉತ್ತೇಜನವನ್ನು ಅಕ್ಬರನು ಕಡಮೆ ಮಾಡಿದುದು ನಿಜ. ಮದ್ರಸಗಳಲ್ಲಿ ಅರಬ್ಬಿ ಭಾಷೆಯ ವ್ಯಾಸಂಗವೇ ಹೆಚ್ಚಾಗಿ ನಡೆಯುತ್ತಿತ್ತು. ಅರಬ್ಬಿ ಭಾಷೆ ಬಹಳ ಕಷ್ಟವಾಗಿದ್ದು ಸಾಮಾನ್ಯಜನರಿಗೆ ಚೆನ್ನಾಗಿ ತಿಳಿಯುತ್ತಿರಲಿಲ್ಲ. ಆದ್ದರಿಂದ ಇದಕ್ಕೆ ಬದಲಾಗಿ ಜನಸಾಮಾನ್ಯಕ್ಕೆ ಹೆಚ್ಚು ಉಪಯೋಗ

ಕರವಾಗಿದ್ದ ಫಾರಸೀಭಾಷೆಗೆ ಹೆಚ್ಚು ಉತ್ತೇಜನ ಸಿಕ್ಕಿತು. ಅರಬ್ಬಿಭಾಷೆಯ ವ್ಯಾಸಂಗವು ಮುಲ್ಲಾಗಳ ಪ್ರಾಬಲ್ಯವನ್ನು ಹೆಚ್ಚಿಸುವುದೆಂದು ಅಕ್ಬರನು ತಿಳಿದು ಕೊಂಡಂತೆ ಕಾಣುತ್ತದೆ. ಅದೂ ಅಲ್ಲದೆ ಅಕ್ಬರನಿಗೆ ಮದ್ರಸಗಳಲ್ಲಿ ಅನೇಕ ವಿಧವಾದ ವಿಷಯಗಳನ್ನು ಕಲಿಸಲು ಅವಕಾಶ ಕಲ್ಪಿಸಬೇಕೆಂಬ ಆಸೆಯಿತ್ತು. ಬರಿಯ ಅರಬ್ಬಿಗೆ ಬದಲಾಗಿ ಗಣಿತಶಾಸ್ತ್ರ, ಪದ್ಯ, ತತ್ವಶಾಸ್ತ್ರ ಮೊದಲಾದ ಹೊಸ ವಿಷಯಗಳನ್ನು ಸೇರಿಸುವಂತೆ ಮಾಡಿದನು. ಕೆಳಗೆ ಚುಕ್ಕಿಹಾಕುವುದು ಮೇಲೆ ಚುಕ್ಕಿಹಾಕುವುದು ಇವುಗಳಿಂದ ಅರಬ್ಬಿ ಕಷ್ಟವಾಗಿ ಕಂಡುಬಂದು ಅಕ್ಬರನಿಗೆ ಫಾರಸೀಭಾಷೆಯಲ್ಲಿ ಹೆಚ್ಚು ಅಭಿರುಚಿ ಹುಟ್ಟಿತು ಅಷ್ಟೇ; ಅದು ಇಸ್ಲಾಂ ಮೇಲಿನ ದ್ವೇಷದಿಂದಲ್ಲ.

ಅಕ್ಬರನು ಇಸ್ಲಾಂ ಮತಕ್ಕೆ ಸೇರಿದವನಾಗಿದ್ದರೆ ಅವನು ಕುರಾನ್ ಪ್ರತಿಗಳನ್ನು ಏಕೆ ನಾಶಮಾಡಲು ಅಪ್ಪಣೆ ಮಾಡಿದನು? ಇದು ರಾಜಕೀಯಕ್ಕೆ ಸಂಬಂಧಿಸಿದ ಪ್ರಶ್ನೆ. ಕುರಾನಿನ ಎಲ್ಲಾ ಪ್ರತಿಗಳನ್ನೂ ಅಕ್ಬರನು ನಾಶಮಾಡಲು ಅಪ್ಪಣೆಮಾಡಲಿಲ್ಲ. ಬಂಗಾಳ ಮತ್ತು ಬಿಹಾರಗಳ ದಂಗೆಯ ಕಾಲದಲ್ಲಿ ಕೆಲವು ಪುಂಡುಗಾರರು ನಕಲಿ ಖುರಾನಿನ ಪ್ರತಿಗಳನ್ನು ತಯಾರಿಸಿದರು. ಕೇವಲ ಈ ಪ್ರತಿಗಳು ಮಾತ್ರ ನಾಶವಾದುವು. ಇವುಗಳ ನಾಶವು ದಂಗೆಯನ್ನು ಅಡಗಿಸಲು ಉಪಯೋಗಿಸಿದ ಶಾಸನಗಳಿಗೆ ಸಂಬಂಧಪಟ್ಟಿದೆ. ಈ ಕುಹಕ ಕುರಾನ್ ಪ್ರತಿಗಳ ನಾಶದಿಂದ ಅಕ್ಬರನು ಇಸ್ಲಾಂ ತ್ಯಜಿಸಿದನೆಂದು ಹೇಳುವುದು ನ್ಯಾಯವಲ್ಲ. ಇದರಿಂದ ಇಸ್ಲಾಂಗೆ ಯಾವ ನಷ್ಟವೂ ಆಗಲಿಲ್ಲ.

ಹಾಗಾದರೆ ಮಹಮುದ್, ಅಹಮುದ್, ಮೊದಲಾದ ಹೆಸರನ್ನು ಜನಗಳು ತಮ್ಮ ಮಕ್ಕಳಿಗೆ ಇಡಕೂಡದೆಂದು ಅಕ್ಬರನು ಕಟ್ಟುಮಾಡಿದುದೇಕೆ? ಇದೂ ಇಸ್ಲಾಮಿನ ಮೇಲ್ಮೆಗಾಗಿ. ಈ ಸಂದರ್ಭದಲ್ಲಿ ಅಕ್ಬರನ ಹೆಸರೆ ಜಲಾಲುದ್ದೀನ್ ಮುಹಮ್ಮದ್ ಎನ್ನುವುದನ್ನು ನಾವು ಮರೆಯಕೂಡದು. ಈ ತರದ ನಾಮಕರಣಕ್ಕೆ ಅವಕಾಶ ಕೊಡದೆ ಇದ್ದುದಕ್ಕೆ ಒಂದು ಪ್ರಬಲವಾದ ಕಾರಣವಿದೆ. ಮುಹಮ್ಮದ್ ಎಂಬ ಪದವನ್ನು ಉಚ್ಚರಿಸಿದ ಕೂಡಲೆ 'ಸಲ್ಲಾಲಹೂ' ಎಂಬುದಾಗಿ ಪ್ರತಿ ಉತ್ತರವನ್ನು ನಮ್ರಪೂರ್ವಕವಾಗಿ ಹೇಳಬೇಕಾದುದು ಒಂದು ನಿಯಮ. ಪ್ರತಿಯೊಂದು ಸಣ್ಣಪುಟ್ಟ ಸಂಭಾಷಣೆಯಲ್ಲಿಯೂ ಈ ಪದ್ಧತಿಯನ್ನು ಅನುಸರಿಸುವುದು ಕಷ್ಟವಾಗಿ ಗುರುವಾದ ಮುಹಮ್ಮದನ ಹೆಸರಿಗೆ ಅವಮಾನವಾಗುವುದೆಂಬ ಶಂಕೆಯಿಂದ ಈ ನಾಮಕರಣವು ನಿಲ್ಲಿಸಲ್ಪಟ್ಟಿತು.

ಇನ್ನು ಮಸೀದಿಗಳನ್ನು ಕೆಡವಿಸಿದ ವಿಚಾರ. ಬಂಗಾಳವು ಪಠಾಣರ ಕಾರ್ಯಕಲಾಪಗಳ ಕೇಂದ್ರವಾಗಿತ್ತೆಂದು ಹಿಂದೆಯೇ ತಿಳಿಸಿದೆ. ಇಲ್ಲಿಯ ಮಸೀದಿಗಳಲ್ಲಿ ದಂಗೆಕಾರರು ಸೇರುತ್ತಿದ್ದುದರಿಂದ ಅಕ್ಬರನು ಆ ಮಸೀದಿಗಳನ್ನು ಕೆಡವಿಸಿದನು.

ಅಕ್ಬರನು ಮಕ್ಕಾ ಯಾತ್ರೆಯನ್ನು ನಿಲ್ಲಿಸಿದುದು ಅವನು ಮುಸಲ್ಮಾನ್ ಮತವನ್ನು ತ್ಯಜಿಸಿದುದಕ್ಕೆ ಗುರುತೆಂದು ಅನೇಕರ ಅಭಿಪ್ರಾಯ. ಅಕ್ಬರನು ತನ್ನ ಅಂತ್ಯಕಾಲದವರೆಗೂ ತನ್ನ ಸಂಸಾರಕ್ಕೆ ಸೇರಿದವರನ್ನು ಮಕ್ಕಾ ಯಾತ್ರೆಗೆ ಕಳುಹಿಸುತ್ತಿದ್ದನು. ಮಕ್ಕಾ ಯಾತ್ರಿಕರ ಸಲುವಾಗಿ ಸರ್ಕಾರದಲ್ಲಿ ಒಂದು ಇಲಾಖೆಯೇ ಇತ್ತು. ಅಕ್ಬರನ ಸರ್ಕಾರವು ಪ್ರತಿಯೊಬ್ಬ ಯಾತ್ರಿಕನಿಗೂ ಖರ್ಚಿಗಾಗಿ ೬೦೦ ರೂಪಾಯಿ ಕೊಡುತ್ತಿತ್ತು. ಈ ಇಲಾಖೆಗೆ ಹಾಜ್ ಇಲಾಖೆಯೆಂದು ಹೆಸರು. ಮಿರ್-ಇ-ಹಾಜಿ ಎಂಬವನೇ ಇದರ ಅಧ್ಯಕ್ಷ. ಇವನ ಕೈಯಲ್ಲಿ ಯಾತ್ರಿಕರಿಗಾಗಿ ಸರ್ಕಾರದ ಹೆಚ್ಚು ಹಣವೂ ಕೆಲವು ಹಡಗುಗಳೂ ಇದ್ದುವು. ಆದರೆ ಧರ್ಮಾಧಿಕಾರಿಯಾದ ಸಾದರ್ ಮತ್ತು ಮಿರ್-ಇ-ಹಾಜಿ ಇಬ್ಬರೂ ಒಂದಾಗಿ ಸರ್ಕಾರದ ಹಣವನ್ನೆಲ್ಲಾ ತಾವೇ ತಿಂದುಹಾಕಿದರು. ಶುದ್ಧ ಮುಸಲ್ಮಾನನಾದ ಅಜಂಖಾನನ ಮಕ್ಕದ ಷರೀಫರ ದುರಾಚಾರಗಳ ವರ್ಣನೆಯೂ, ಪೋರ್ಚುಗೀಸ್ ನಾವಿಕರ ಹಾವಳಿಯೂ, ಮಕ್ಕಾಯಾತ್ರೆಗೆ ಹೋಗುವಾಗ ಕ್ರೈಸ್ತ ಹಡಗು ಮಾಲೀಕರು ಕೊಡುತ್ತಿದ್ದ ಮೇರಿಯ ಚಿತ್ರವಿದ್ದ ಟಿಕೀಟುಗಳನ್ನು ಕೊಳ್ಳಲು ಶುದ್ಧ ಮುಸಲ್ಮಾನರು ಒಪ್ಪದೆ ಹೋದದ್ದೂ, ಅಕ್ಬರನು ಮಕ್ಕಾ ಯಾತ್ರೆಯನ್ನು ನಿಲ್ಲಿಸಬೇಕಾಗಿ ಬಂದದ್ದಕ್ಕೆ ಕಾರಣಗಳು.

ಚೆನ್ನಾಗಿ ಪರಿಶೀಲನೆಮಾಡಿ, ಪಕ್ಷಪಾತವಿಲ್ಲದೆ ಯೋಚಿಸಿ ನೋಡುವ ಪ್ರತಿಯೊಬ್ಬನಿಗೂ ಅಕ್ಬರನು ಮುಸಲ್ಮಾನ್ ಮತವನ್ನು ತ್ಯಜಿಸಲಿಲ್ಲವೆಂಬ ವಿಷಯವು ವ್ಯಕ್ತವಾಗುವುದು.

ಎಂ. ಶೇಷಾದ್ರಿ.

---

# ಮೈಸೂರಿನ ಮಧುವನ

ರಂಗುರಂಗಿನ ಹೂಗಳಾಭರಣ ಒಪ್ಪಿರಲು
ಕಂಗಳನು ಮೋಹಿಸುವ ಹಸುರುಡುಗೆಯ
ಸಿಂಗರಿಸಿ ನಿಂತಿರುವ ಅಂಗನೆಯ ತೆರದಲ್ಲಿ
ಸೊಗವಡೆದ ಮಧುವನವು ನಲಿಯುತಿಹುದು.

ಕುಲವನಿತೆ ಸೂಸುತಿಹ ಎಳನಗೆಯ ರೀತಿಯಲಿ
ಅರಳಿರಲು ಬಿಳಿಬಿಳಿಯ ತಾವರೆಗಳು,
ಬಂಡುಂಡು ಝೇಂಕರಿಪ ಮರಿದುಂಬಿ ತಂಡಗಳು
ಹಾಡುವುವು ಮಧುರಸಂಗೀತಗಳನು.

ತಂಗಾಳಿ ಸುಳಿಯುತಿರೆ ತನಿಗಂಪು ಬೀರುತಿರೆ
ಗಿಳಿವಿಂಡು ತನಿರಸವನೀಂಟುತಿಹುವು ;
ಹಾರುವುವು ಬಿಳಿಮುಗಿಲ ತೆರೆತೆರೆಯ ಜೊತೆಯಲ್ಲಿ
ಪಚ್ಚೆತೆನೆಗಳ ಸಾಲುತೋರಣದೊಲು.

ಹೂಬಿಟ್ಟು ಬಳುಕುತಿಹ ಬಳ್ಳಿಮಾಲೆಗಳಲ್ಲಿ
ತೂಗುವುವು ಮಾಮರದ ಕೊಂಬೆಯಲ್ಲಿ ;
ಚೆಲುವುಕಂಗಳ ನವಿಲು ಕುಣಿಯುತಿರೆ ಸಂತಸದಿ
ಕೋಗಿಲೆಯು ಹಾಡುವುದು ಸವಿದನಿಯಲಿ.

ದನಿಯೆತ್ತಿ ಕೂಗುತಿಹ ಹಕ್ಕಿಗಳ ಕಲರವದ
ಮಾರ್ದನಿಯು ಸೆಲೆಯುತಿರೆ ಮಧುವನದಲಿ,
ಆಡುವುವು ಅರಸಂಚೆ ತಿಳಿನೀರ ಕೊಳದಲ್ಲಿ
ಅನುದಿನವು ತಾವರೆಯ ಹೆಬ್ಬನದಲಿ.

ಮಧುವನದ ಸೌಂದರ್ಯಜಲಧಿಯಲಿ ವನಲಕ್ಷ್ಮಿ
ಯೋಲಾಡಿ ಹಗಲಲ್ಲಿ ನಲಿಯುತಿಹಳು,
ಸಮರಾತ್ರಿ ಸಮನಿಸಲು ಕಾಣುವಳು ಋಷಿಯಂತೆ,
ಯೋಗನಿದ್ರೆಯ್ನು ತಳೆದ ಯೋಗಿಯಂತೆ !

ಓ. ಎಲ್. ಲಿಂಗಯ್ಯ.

# ಹೊಸ ರಸಾಯನಶಾಸ್ತ್ರ

## ಹಳೆಯ ಮತ್ತು ಹೊಸ ಶಾಸ್ತ್ರಗಳ ನಿಯಮ

ಹತ್ತೊಂಬತ್ತನೆಯ ಶತಮಾನದ ಕೊನೆಯ ವರೆಗೂ ರಾಸಾಯನಿಕ ಮೂಲಭೂತಗಳ ಪರಿವರ್ತನೆಯ ಬಗ್ಗೆ ಯಾವ ಸಂಶಯವೂ ಇರಲಿಲ್ಲ. ಆಗ, ಒಂದು ಮೂಲಭೂತವನ್ನು ಬೇರೊಂದು ಮೂಲಭೂತವಾಗಿ ಪರಿವರ್ತಿಸುವುದು ಅಶಕ್ಯವೆಂಬ ತತ್ವವು ಸರ್ವಮಾನ್ಯವಾಗಿತ್ತು. ಮಧ್ಯಯುಗದ ಲೋಹಪರಿವರ್ತಕರು ವಿವಿಧ ಲೋಹಗಳನ್ನು ಚಿನ್ನವಾಗಿ ಪರಿವರ್ತಿಸಬಹುದೆಂದು ಭಾವಿಸಿದ್ದರು. ಆದರೆ ರಾಬರ್ಟ ಬಾಯಿಲ್‌ನ (೧೬೨೭–೯೧) ಅನಂತರ ಪರಮಾಣು ಅಭೇದ್ಯ ಮತ್ತು ಒಂದು ಭೂತದ ಪರಮಾಣುವನ್ನು ಇನ್ನೊಂದು ಭೂತದ ಪರಮಾಣುವಾಗಿ ಪರಿವರ್ತಿಸುವುದು ಅಶಕ್ಯವೆಂಬ ಸಿದ್ಧಾಂತವು ಸ್ಥಿರವಾಯಿತು. ಪ್ರಸಿದ್ಧ ಗಣಿತಜ್ಞನೂ ವೈಜ್ಞಾನಿಕನೂ ಆದ ಕ್ಲರ್ಕ ಮೆಕ್ಸವೆಲ್ಲನು "ಎನ್‌ಸೈಕ್ಲೊಪೀಡಿಯ ಬ್ರಿಟಾನಿಕಾ" ದಲ್ಲಿ ಬರೆದ 'ಪರಮಾಣು' ಎಂಬ ಲೇಖನದಲ್ಲಿ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ. ಆತನು ಬರೆದುದು "ಪರಮಾಣು ವಿಭಜನೆ ಇಂದಿನ ನಿಸರ್ಗ ನಿಯಮದಂತೆ ಅಶಕ್ಯವಾಗಿದೆ" ಎಂದು.

ಸ್ವಯಂಪ್ರಭೆಯುಳ್ಳ ವಸ್ತುಗಳ ಸಂಶೋಧನೆಯಿಂದ ಪರಮಾಣುವಿನ ಅವಿಭಜ್ಯತೆಯ ಬಗ್ಗೆ ಸಂಶಯಗಳು ಉಂಟಾದುವು. ಯುರೇನಿಯಂ ಲೋಹದ ಪರಮಾಣು ತನ್ನಿಂದ ತಾನೆ ಪರಿವರ್ತನೆ ಹೊಂದಿ ಸೀಸವಾಗುವುದು ಲೋಹ ಪರಿವರ್ತನೆಯ ಮೊದಲನೆಯ ಮೆಟ್ಟಲು. ಆದರೆ ಈ ತರದ ಪರಿವರ್ತನೆಯನ್ನು ಪ್ರಯೋಗಶಾಲೆಯಲ್ಲಿ ಮಾಡಲು ಶಕ್ಯವಲ್ಲದುದರಿಂದ, ಇದು ಕೆಲವೇ ಅತಿಭಾರವಾದ ಲೋಹಗಳ ಗುಣವೆಂದೂ, ಎಲ್ಲ ಲೋಹಗಳಲ್ಲಿ ಈ ಗುಣವು ಇಲ್ಲವೆಂದೂ ಊಹಿಸಲಾಯಿತು. ಆದರೂ ಮೇಲಿನ ಸಂಶೋಧನೆಯಿಂದ ಪರಮಾಣುವನ್ನು ಪರಿವರ್ತಿಸಬಹುದೆಂಬ ಸಿದ್ಧಾಂತವು ಬೆಳಕಿಗೆ ಬರತೊಡಗಿತು.

ಕಳೆದ ಮಹಾಯುದ್ಧದನಂತರ ರದರ್‌ಫೋರ್ಡ್ ಮತ್ತು ಆತನ ಶಿಷ್ಯರು ಕೆವೆಂಡಿಷ್ ಪ್ರಯೋಗಶಾಲೆಯಲ್ಲಿ ಲೋಹಪರಿವರ್ತನೆಯ ಪ್ರಯೋಗಗಳನ್ನು ಮಾಡಲು ಆರಂಭಿಸಿದರು. ಇವರ ಪ್ರಯೋಗಗಳಿಂದ ಪರಿವರ್ತಿಸಿದ ಲೋಹವು ಅತ್ಯಂತ ಕಡಮೆ ಪ್ರಮಾಣದಲ್ಲಿ—ರಾಸಾಯನಿಕ ತಕ್ಕಡಿಯಿಂದ ತೂಗುವಷ್ಟು

ಅಲ್ಲ—ಇದ್ದಿತು. ಎಲ್ಲಕ್ಕೂ ಮೊದಲು ಲಿಥಿಯಂ ಲೋಹವನ್ನು ಅಕರ್ಾನಿಲ ವಾಗಿಯೂ ಸಾರಜನಕವನ್ನು ಆಮ್ಲಜನಕವಾಗಿಯೂ ಪರಿವರ್ತಿಸಿದರು. ಒಂದು ಪರಮಾಣುವನ್ನು ಇನ್ನೊಂದು ಪರಮಾಣುವಾಗಿ ಪರಿವರ್ತಿಸುವ, ಎಂದರೆ ಹೊಸ ಪರಮಾಣುಗಳನ್ನು ಹುಟ್ಟಿಸುವ, ಈ ಶಾಸ್ತ್ರವು ಅಣುಗಳಿಂದ ಸಂಯುಕ್ತಗಳನ್ನು ಹುಟ್ಟಿಸುವ ಶಾಸ್ತ್ರಕ್ಕಿಂತಲೂ ಭಿನ್ನ ಮತ್ತು ಹೊಸದಾದುದರಿಂದ, ಪ್ರೊ. ಅಂಡ್ರೇಡ ರವರು ಇದನ್ನು "ಹೊಸ ರಸಾಯನಶಾಸ್ತ್ರ"ವೆಂದು ಕರೆದಿದ್ದಾರೆ.

ಹೊಸ ಶಾಸ್ತ್ರದ ನಿಯಮಗಳ ಅರಿವು ಆಗಬೇಕಾದರೆ, ಹಳೆಯ ಶಾಸ್ತ್ರದ ನಿಯಮ ಸಿದ್ಧಾಂತಗಳ ಆಕಲನೆಯಾಗಬೇಕು. ಹಳೆಯ ರಸಾಯನಶಾಸ್ತ್ರದಲ್ಲಿ ಒಂದು ಮೂಲಭೂತದ ಅಣುಗಳ ಗುಂಪು, ಇನ್ನೊಂದು ಭೂತದ ಗುಂಪಿನೊಡನೆ ವರ್ತಿಸಿ ಆ ಎರಡು ಭೂತಗಳ ಪರಮಾಣುಗಳನ್ನೊಳಗೊಂಡ ಒಂದು ಸಂಯುಕ್ತದ ಅಣುಗಳ ಉತ್ಪಾದನೆಯಾಗುವುದು. ಅಥವಾ ಒಂದು ಸಂಯುಕ್ತವು ಇನ್ನೊಂದು ಸಂಯುಕ್ತ ದೊಡನೆ ವರ್ತಿಸಿ, ಬೇರೆ ಸಂಯುಕ್ತವನ್ನು ಹುಟ್ಟಿಸುವುದು. ಈ ರಾಸಾಯನಿಕ ವ್ಯತ್ಯಾಸಗಳು ಎರಡು ಮೂಲಭೂತ ನಿಯಮಗಳಿಗನುಸಾರವಾಗಿ ಆಗುವುವು. ಒಂದು 'ತೂಕ ಸಂಸ್ಥಿತಿಯ ನಿಯಮ'; ಎರಡನೆಯದು 'ಶಕ್ತಿ ಸಂಸ್ಥಿತಿಯ ನಿಯಮ'. ತೂಕಸಂಸ್ಥಿತಿಯ ನಿಯಮದ ಮೇರೆಗೆ ರಾಸಾಯನಿಕ ಕ್ರಿಯೆಯಲ್ಲಿ ವ್ಯತ್ಯಾಸ ಹೊಂದಿದ ವಸ್ತುಗಳ ತೂಕವೂ ಹುಟ್ಟಿರುವ ಹೊಸ ವಸ್ತುಗಳ ತೂಕವೂ ಸಮವಾಗಿರುವುವು. ಇದನ್ನು ರಾಸಾಯನಿಕ ಸಮೀಕರಣದಿಂದ ಸ್ಪಷ್ಟವಾಗಿ ವಿವರಿಸಬಹುದು.

ರಾಸಾಯನಿಕ ಕ್ರಿಯೆಗಳಲ್ಲಿ ಉಷ್ಣತೆಯು ಹೊರಬೀಳುತ್ತದೆ, ಅಥವಾ ಉಷ್ಣತೆಯ ಆಕರ್ಷಣೆಯಾಗುತ್ತದೆ. ಇಂಗಾಲ ಮತ್ತು ಆಮ್ಲಜನಕಗಳ ರಾಸಾಯನಿಕ ವರ್ತನೆಯಿಂದ ಇಂಗಾಲಾಮ್ಲ ಅನಿಲವು ಹುಟ್ಟುವುದು. ಅದರ ಜೊತೆಗೆ ಉಷ್ಣತೆಯೂ ಹೊರಬೀಳುವುದು. ಅದನ್ನು ರಾಸಾಯನಿಕ ಸಮೀಕರಣದಿಂದ ಕೆಳಗಿನಂತೆ ವಿಶದಗೊಳಿಸುತ್ತಾರೆ—



$$C + O_2 \longrightarrow Co_2 + 94,400$$ ಕ್ಯಾಲೊರಿಗಳು*

ಇಂಗಾಲ + ಆಮ್ಲಜನಕ ⟶ ಇಂಗಾಲಾಮ್ಲ + ಉಷ್ಣತೆ

ಸಮೀಕರಣದ ಎರಡೂ ಭಾಗಗಳ ಆಂತರಿಕ ಶಕ್ತಿಗಳ ಭೇದವು ಉಷ್ಣತೆಯ ರೂಪದಲ್ಲಿ ಹೊರಸೂಸುತ್ತದೆ. ರಾಸಾಯನಿಕ ಕ್ರಿಯೆಯು ಯಾವ ರೀತಿಯಿಂದಲೇ ಆಗಲಿ, ಆಂತರಿಕ ಶಕ್ತಿಯ ಭೇದವನ್ನು ಮಾರ್ಪಡಿಸುವುದಿಲ್ಲ. ಉದಾಹರಣೆ: ಇಂಗಾ

---

* ೪ ಡಿಗ್ರಿ ಸೆಂಟಿಗ್ರೇಡ್ ಶಾಖದಲ್ಲಿರುವ ಒಂದು ಗ್ರಾಂ ತೂಕದ ನೀರನ್ನು ಒಂದು ಡಿಗ್ರಿ ಏರುವಂತೆ, ಎಂದರೆ ೫ ಡಿಗ್ರಿ ಸೆಂಟಿಗ್ರೇಡ್ ಶಾಖಕ್ಕೆ ಬರುವಂತೆ, ಕಾಯಿಸುವುದಕ್ಕೆ ಬೇಕಾದ ಉಷ್ಣಕ್ಕೆ ಒಂದು (ಸಣ್ಣ) ಕ್ಯಾಲೊರಿ ಎಂದು ಹೆಸರು.

ಲಾಮ್ಲ ಅನಿಲವನ್ನು ಎರಡು ವಿಧಾನದಿಂದ ಹುಟ್ಟಿಸಬಹುದು. ಇಂಗಾಲದ ಮತ್ತು ಆಮ್ಲ ಜನಕದ ನೇರವಾದ ವರ್ತನೆಯಿಂದ ಹುಟ್ಟುವುದು ಒಂದು. ಆ ವರ್ತನೆಯಿಂದ ೯೪,೪೦೦ ಕ್ಯಾಲೊರಿಯ ಉಷ್ಣತೆ ಹೊರಬೀಳುವುದು. ಇಂಗಾಲಾಮ್ಲ ಅನಿಲವನ್ನು ಇನ್ನೊಂದು ರೀತಿಯಿಂದ ಸಿದ್ಧಪಡಿಸಬಹುದು. ಮೊದಲನೆಯ ಹಂತದಲ್ಲಿ ಇಂಗಾಲವು ಆಮ್ಲ ಜನಕದೊಡನೆ ವರ್ತಿಸಿ ಇಂಗಾಲೇಕಾಮ್ಲವೆಂಬ ಒಂದು ವಿಷಾನಿಲವನ್ನು ಹುಟ್ಟಿಸುವುದು. ಆ ಮೇಲೆ ಇಂಗಾಲೇಕಾಮ್ಲವು ಇನ್ನೊಮ್ಮೆ ಆಮ್ಲ ಜನಕದೊಡನೆ ವರ್ತಿಸಿ ಇಂಗಾಲಾಮ್ಲವನ್ನು ಹುಟ್ಟಿಸುವುದು. ಆಗ ಉಷ್ಣತೆಯು ಎರಡು ಹಂತಗಳಲ್ಲಿ ಹೊರಬೀಳುವುದು.


$C + \frac{1}{2}O_2 \longrightarrow Co + 26{,}100$ ಕ್ಯಾಲೊರಿಗಳು


$Co + \frac{1}{2}O_2 \longrightarrow Co_2 + 68{,}300$ ಕ್ಯಾಲೊರಿಗಳು


$C + O_2 \longrightarrow Co_2 + 94{,}400$ ಕ್ಯಾಲೊರಿಗಳು

ಎರಡು ವ್ಯತ್ಯಾಸಗಳಿಂದ ಹೊರಬೀಳುವ ಒಟ್ಟು ಉಷ್ಣತೆಯು ಇಂಗಾಲ ಮತ್ತು ಆಮ್ಲ ಜನಕದ ನೇರವಾದ ವರ್ತನೆಯಿಂದ ಹೊರಬೀಳುವ ಉಷ್ಣತೆಯಷ್ಟೇ ಇರುತ್ತದೆ. ಆದ್ದರಿಂದ ಎರಡು ವಸ್ತುಗಳಿಂದ ಬೇರೆ ವಸ್ತುಗಳ ಉತ್ಪಾದನೆಯಲ್ಲಿ—ಯಾವ ರೀತಿಯಲ್ಲಿಯೇ ಆಗಲಿ, ಎಷ್ಟು ಹಂತಗಳಲ್ಲಿಯೇ ಆಗಲಿ—ಹೊರಬೀಳುವ ಅಥವಾ ಆಕರ್ಷಿಸುವ ಶಕ್ತಿಯ ಪ್ರಮಾಣವು ಒಂದೇ ಆಗಿರುತ್ತದೆ. ಇದು ಶಕ್ತಿ ಸಂಸ್ಥಿತಿಯ ನಿಯಮದ ಸಿದ್ಧಾಂತವೆನ್ನಬಹುದು.

ಹಳೆಯ ಶಾಸ್ತ್ರದ ಮೇರೆಗೆ ರಾಸಾಯನಿಕ ವ್ಯತ್ಯಾಸಗಳು ಎರಡು ಸಂಸ್ಥಿತಿಯ ನಿಯಮಗಳನ್ನು ಬೇರೆ ಬೇರೆಯಾಗಿ ಅನುಸರಿಸುವುವು. ಆದರೆ ಹೊಸ ಶಾಸ್ತ್ರದಲ್ಲಿ, ಒಂದು ಪರಮಾಣು ಕೇಂದ್ರದ ಸುತ್ತಮುತ್ತಲು ಚಲಿಸುವ ಋಣವಿದ್ಯುತ್ಕಣಗಳ ಸಂಖ್ಯೆ ಮಾರ್ಪಡಿಸಬೇಕಾಗುವುದು. ಇಂತಹ ಪರಿವರ್ತನೆಗಳಲ್ಲಿ ತೂಕ ಮತ್ತು ಶಕ್ತಿ ಸಂಸ್ಥಿತಿಯ ನಿಯಮಗಳ ಪಾಲನೆ ಬೇರೆ ಬೇರೆಯಾಗಿ ಆಗುವುದಿಲ್ಲ. ಉದಾಹರಣೆಗಾಗಿ, ಜಲಜನಕ ಪರಮಾಣುಕೇಂದ್ರ ಎಂದರೆ ಧನಕಣ ಮತ್ತು ಲಿಥಿಯಂನ ಒಂದು ಕೇಂದ್ರದ ವರ್ತನೆಯಿಂದ ಆರ್ಕಾನಿಲದ ಎರಡು ಕೇಂದ್ರಗಳು ಹುಟ್ಟುವುವು. ಈ ಪರಿವರ್ತನೆಯ ಸಮೀಕರಣವನ್ನು ಕೆಳಗಿನಂತೆ ಬರೆಯಬಹುದು.


$${}^{7}_{3}Li + {}^{1}_{1}H \longrightarrow 2\,{}^{4}_{2}He$$

${}^{7}_{3}Li$ ಎಂದರೆ, 3 ವಿದ್ಯುದಂಶವುಳ್ಳ 7 ಪರಮಾಣು ತೂಕದ ಲಿಥಿಯಂ ಪರಮಾಣು. ಕೆಲವು ಲೋಹಗಳ ವಿದ್ಯುದಂಶವು ಅಷ್ಟೇ ಇದ್ದು ಪರಮಾಣು ತೂಕಮಾತ್ರ

ಭಿನ್ನವಾಗಿರುತ್ತದೆ. ಅಂತಹ ಪರಮಾಣುಗಳನ್ನು ಸಕ್ಷೇತ್ರವೆನ್ನುವರು. ಲಿಥಿಯಂಗೆ ಎರಡು ಸಕ್ಷೇತ್ರಗಳಿವೆ. ಒಂದರ ಪರಮಾಣುತೂಕ ೬ ಇನ್ನೊಂದರದು ೭. ಡಾಕ್ಟರ್ ಆಸ್ಟನ್ ಅವರ ಸಂಶೋಧನೆಯ ಮೇರೆಗೆ ಸಕ್ಷೇತ್ರಗಳ ತೂಕ ಪೂರ್ಣಾಂಕ ಸಂಖ್ಯೆಯಾಗಿರುವುದಿಲ್ಲ, ಆದರೆ ಪರಮಾಣುವಿನ ತೂಕಕ್ಕಿಂತಲೂ ಸ್ವಲ್ಪ ಹೆಚ್ಚಿದ್ದು ಅಪೂರ್ಣಾಂಕವಾಗಿರುತ್ತದೆ. ಈ ಲೆಕ್ಕದ ಪ್ರಕಾರ ಮೇಲೆ ವಿವರಿಸಿದ ಸಮೀಕರಣದ ಎಡಭಾಗದ ತೂಕ ೮.೦೨೬೧ ಇದ್ದು ಬಲಭಾಗದ ತೂಕ ೮.೦೦೭೮ ಬರುತ್ತದೆ. ಆದುದರಿಂದ ಮೇಲಿನ ಪರಿವರ್ತನೆಯಲ್ಲಿ ೦.೦೧೮೩ ತೂಕ ಲಯಹೊಂದುವುದು. ಎಂದರೆ ತೂಕ ಸಂಸ್ಥಿತಿಯ ನಿಯಮದ ಉಲ್ಲಂಘನೆಯಾಯಿತೆಂದು ಹೇಳಬಹುದು.

ಲಿಥಿಯಂ ಮತ್ತು ಜಲಜನಕ ಕೇಂದ್ರಗಳು ಯಾವ ಚಲನಶಕ್ತಿಯಿಂದ ತಗಲುವುವೋ, ಅದಕ್ಕೂ ಹೆಚ್ಚಿನ ಶಕ್ತಿಯನ್ನು ಪಡೆದುಕೊಂಡು, ಅರ್ಕಾನಿಲದ ಎರಡು ಪರಮಾಣುಗಳು ಸಿಡಿದುಬರುವುವು. ಹೀಗೆ, ಪರಿವರ್ತನೆಯಿಂದ ಶಕ್ತಿ ಹೆಚ್ಚಾಗಿ ಶಕ್ತಿಸಂಸ್ಥಿತಿನಿಯಮದ ಉಲ್ಲಂಘನೆಯೂ ಆಯಿತೆಂದು ಹೇಳಬಹುದು.

ಮೇಲಿನ ಒಂದೇ ಪರಿವರ್ತನೆಯಲ್ಲಿ ಪರಿವರ್ತಿಸಲ್ಪಟ್ಟ ಪರಮಾಣುಗಳ ತೂಕಕ್ಕಿಂತಲೂ ಪರಿಣಮಿಸಿದ ಪರಮಾಣುವಿನ ತೂಕ ಕಡಮೆ. ಇದು ಪರಿಣಮಿಸಿದ ಪರಮಾಣುವಿನ ಶಕ್ತಿಮಾತ್ರ ಹೆಚ್ಚಾಗಿ ಕಂಡುಬರುತ್ತದೆ.

ತೂಕ ಮತ್ತು ಶಕ್ತಿಸಂಸ್ಥಿತಿ ನಿಯಮದ ವಿರೋಧವನ್ನು ಐನ್‌ಸ್ಟಿನನು ತಿಳುಹಿಸಿದನು. ಆತನ ತತ್ವದಂತೆ ಶಕ್ತಿ ಮತ್ತು ತೂಕಗಳಲ್ಲಿ ರೂಪಭೇದವಿದ್ದರೂ ಅವೆರಡೂ ಪರಸ್ಪರ ಪರಿವರ್ತಿತವಾಗಬಹುದು. ಆ ಪರಿವರ್ತನೆಯು ಕೆಳಗಿನ ಸಮೀಕರಣದಿಂದ ವಿಶದವಾಗುವುದು.—

$$E = mc^2$$

E = ಶಕ್ತಿ, m = ತೂಕ, c = ಬೆಳಕಿನ ವೇಗ

ಮೇಲಿನ ಸಮೀಕರಣದ ಮೇರೆಗೆ ಒಂದು ಗ್ರಾಮ್ ತೂಕದಿಂದ ೯ × ೧೦^೨೦ ಅರ್ಗ್ ಶಕ್ತಿ ನಿರ್ಮಾಣವಾಗುವುದು. ಈ ಶಕ್ತಿ ೩೩ ಗಂಟೆಗಳವರೆಗೂ ೧೦ ಅಶ್ವಶಕ್ತಿಯಷ್ಟು ಇರುವುದು.

ಶಕ್ತಿ ಮತ್ತು ತೂಕಗಳ ಪರಿವರ್ತನೆಯ ತತ್ವವನ್ನು ಒಪ್ಪಿದರೆ, ಲಿಥಿಯಂ ಮತ್ತು ಜಲಜನಕಗಳ ಪರಿವರ್ತನೆಯಲ್ಲಾಗುವ ಸಂಸ್ಥಿತಿನಿಯಮದ ವಿರೋಧವನ್ನು ದೂರ ಮಾಡಬಹುದು. ತೂಕವು ಕಡಮೆ ಆದರೆ ಶಕ್ತಿಯು ಹೆಚ್ಚಾಗುವುದು. ಆದುದರಿಂದ ಹೊಸ ರಸಾಯನಶಾಸ್ತ್ರದಲ್ಲಿ ಸಂಸ್ಥಿತಿನಿಯಮಗಳ ಪಾಲನೆ ಬೇರೆ ಬೇರೆಯಾಗಿ ಆಗುವುದಿಲ್ಲ. ಅವೆರಡೂ ನಿಯಮಗಳ ಪಾಲನೆ ಐನ್‌ಸ್ಟೀನ್‌ನ ತತ್ವಕ್ಕನುಸರಿಸಿ ಆಗುವುದು.

ಮೇಲಿನ ವಿವರಣೆಯ ಮೇರೆಗೆ ಒಂದು ಲೋಹದ—ಸೂಕ್ಷ್ಮವಾಗಿ ತೂಕಕ್ಕೆ ಬರುವಷ್ಟು—ಪರಿವರ್ತನೆಯನ್ನು ಮಾಡಿದರೆ ಅಪಾರವಾದ ಶಕ್ತಿ ಸಿಕ್ಕುತ್ತದೆ. ಆದರೆ ಇಂದಿಗೂ ಲೋಹಪರಿವರ್ತನೆಯ ಕಾರ್ಯವು ಪರಮಾಣುರೂಪದಲ್ಲಿಯೇ ಇದ್ದ ಮೂಲಕ ಇಷ್ಟು ಶಕ್ತಿ ದೊರಕಿಸುವುದು ಶಕ್ಯವಾಗಿಲ್ಲ. ಅದಲ್ಲದೆ ಇಲ್ಲಿಯ ವರೆಗೂ ಲೋಹಪರಿವರ್ತನೆಯ ಸಂಪೂರ್ಣ ಸಿದ್ಧಾಂತವು ಬೆಳಕಿಗೆ ಬಂದಿಲ್ಲ. ಆದರೆ ಇಂಗ್ಲೆಂಡ್ ಮತ್ತು ಅಮೇರಿಕಾ ದೇಶಗಳ ವೈಜ್ಞಾನಿಕರು ಒಂದು ಲೋಹದ ಕೆಲವು ಪರಮಾಣು ಗಳನ್ನು ಇನ್ನೊಂದು ಲೋಹದ ಪರಮಾಣುವಾಗಿ ಪರಿವರ್ತಿಸಿದ್ದಾರೆ. ಆಯಾ ಪರಿವರ್ತನೆಯಲ್ಲಿ ಉಪಯೋಗಿಸುವ ಹಲವಾರು ಕಣಗಳುಂಟು. ಆ ಕಣಗಳ ಸ್ಥೂಲ ವಿವೇಚನೆ ಕೆಳಗೆ ಕೊಡಲಾಗಿದೆ.

## ಲೋಹಪರಿವರ್ತನೆಯಲ್ಲಿ ಉಪಯುಕ್ತವಾದ ಕಣಗಳು

(i) ಋಣವಿದ್ಯುತ್ಕಣ—ಇದು ಋಣವಿದ್ಯುದಂಶವುಳ್ಳ ಕಣ. ಈ ಕಣದ ವಿದ್ಯು ದಂಶವನ್ನು ಪರಮಾಣು ಪ್ರತಿಕ್ರಿಯೆಗಳಲ್ಲಿ ಮೂಲಪ್ರಮಾಣವೆಂದು ಭಾವಿಸುತ್ತಾರೆ. ಇದರ ತೂಕವು ಜಲಜನಕ ಪರಮಾಣುವಿನ ತೂಕದ $\frac{೧}{೧೮೫೦}$ ಭಾಗವಾಗಿದೆ. ಇದರ ವಿದ್ಯುದಂಶ ಮತ್ತು ತೂಕದ ಪರಿಮಾಣವನ್ನು ಸರ್ ಜೆ. ಜೆ. ಥಾಂಸನ್ ಅವರ ಪ್ರಯೋಗದಿಂದ ಗೊತ್ತುಮಾಡಬಹುದು. ಇದರ ವಿದ್ಯುದಂಶವನ್ನು ಪ್ರೊ. ಮಿಲಿಕನ್ ರವರ 'ತೈಲಬಿಂದು' ಪ್ರಯೋಗದಿಂದ ಗೊತ್ತುಮಾಡಬಹುದು.

(ii) ಧನವಿದ್ಯುತ್ಕಣ—ಇದು ಧನವಿದ್ಯುದಂಶವುಳ್ಳ ಕಣ. ಇದರ ತೂಕ ಋಣ ಕಣದಷ್ಟೇ. ಈ ಕಣದ ಸ್ವತಂತ್ರ ಅಸ್ತಿತ್ವವು ತೀರ ಕಡಮೆಯಾದುದರಿಂದ ಮೊನ್ನೆ ತಾನೆ ಇದನ್ನು ಶೋಧಿಸಿದ್ದಾರೆ.

(iii) ಧನಕಣ—ಜಲಜನಕ ಪರಮಾಣುವಿನ ಕೇಂದ್ರ. ಇದರ ತೂಕವನ್ನು ಸ್ಥೂಲವಾಗಿ ಒಂದು ಎಂದು ಭಾವಿಸುತ್ತಾರೆ.

(iv) ಆಲ್ಫಾಕಣ—ಇದು ಅರ್ಕಾನಿಲದ ಕೇಂದ್ರ. ಇದರ ತೂಕಸಂಖ್ಯೆ ೪. ಎರಡು ಮಾನವುಳ್ಳ ಧನವಿದ್ಯುದಂಶವಿದೆ.

(v) ಶೂನ್ಯಕಣ—ಇದು ಧನಕಣದಷ್ಟೇ ತೂಕವಿರುವ, ಆದರೆ ಯಾವ ವಿಧ ವಾದ ವಿದ್ಯುದಂಶವೂ ಇಲ್ಲದ, ಕಣ. ಸಂಚರಿಸುವ ಕಣದ ವಿದ್ಯುಚ್ಛಕ್ತಿಯು ಇನ್ನೊಂದು ಪರಮಾಣುವಿನಲ್ಲಿರುವ ವಿದ್ಯುತ್ ಕ್ಷೇತ್ರದಲ್ಲಿ ಸೇರಿದರೆ, ಆ ಶಕ್ತಿಗಳ ಪ್ರತಿಕ್ರಿಯೆಯಿಂದ ವಿದ್ಯುದಂಶವುಳ್ಳ ಅಣುಗಳು ಹುಟ್ಟುವುವು. ಇವನ್ನು ವಿದ್ಯುದಣು ಎನ್ನಬಹುದು. ಶೂನ್ಯಕಣದಲ್ಲಿ ವಿದ್ಯುದಂಶವು ಇಲ್ಲದಿರುವುದರಿಂದ ಇದು ಹರಿ ದಾಡುವ ಭಾಗದಲ್ಲಿ ವಿದ್ಯುದಣುಗಳು ಹುಟ್ಟುವುದಿಲ್ಲ. ಇದರ ಸುತ್ತಮುತ್ತಲೂ

ವಿದ್ಯುತ್ ಕ್ಷೇತ್ರವು ಇಲ್ಲದಿರುವುದರಿಂದ ಇದು ವಿರೋಧವಿಲ್ಲದೆಯೇ ಪರಮಾಣುವಿನ ಒಳಭಾಗದಲ್ಲಿ ಹೊಕ್ಕು, ಅದರಲ್ಲಿಯ ಧನಕಣವನ್ನು ತಗುಲಿ ಅದನ್ನು ಪರಮಾಣುವಿನಿಂದ ಹೊರತಳ್ಳುವುದು. 'ಶೂನ್ಯಕಣದ ಶಕ್ತಿಯನ್ನು ಪಡೆದು ಧನಕಣವು ಅತ್ಯಂತ ವೇಗದಿಂದ ಹೊರಗೆ ಸಿಡಿಯುವುದು. ಇದರ ಚಿತ್ರವನ್ನು ಸಿ. ಟಿ. ಆರ್. ವಿಲ್ಸನ್ ರವರ ಮೇಘಮಂದಿರದಲ್ಲಿ ತೆಗೆಯಬಹುದು. ಶೂನ್ಯಕಣದ ಉತ್ಪಾದನೆಗಾಗಿ ಬೆರಿಲಿಯಂ ಲೋಹದ ಪುಡಿಯಲ್ಲಿ ರೇಡಿಯಂ ಪ್ರಕಾಶನವನ್ನು ಬೆರಸುವರು. ಅವುಗಳ ಕ್ರಿಯೆಯಿಂದ ಇಂಗಾಲದ ಒಂದು ಪರಮಾಣುವೂ, ಒಂದು ಶೂನ್ಯಕಣವೂ ಹುಟ್ಟುವುವು.



$$ {}^{9}_{4}Be + {}^{4}_{2}He \longrightarrow {}^{12}_{6}C + {}^{1}_{0}n $$

${}^{1}_{0}n$ ಎಂದರೆ ಶೂನ್ಯವಿದ್ಯುದಂಶ ಮತ್ತು ೧ ತೂಕವುಳ್ಳ ಕಣ.

### "ಹೊಸ ರಸಾಯನಶಾಸ್ತ್ರ"ದ ಸಲಕರಣೆಗಳು

ಕೇಂದ್ರ ಕ್ರಿಯೆಗಳಲ್ಲಿ ಕೆಲವೇ ಪರಮಾಣುಗಳು ಭಾಗವಹಿಸುವುವು. ಅವುಗಳ ಸಂಖ್ಯೆ ಹತ್ತರಿಂದ ೧೦೦ರ ವರೆಗೂ ಇದೆ. ಇವುಗಳ ಗುರುತು ಹಿಡಿಯಬೇಕಾದರೆ ಅತ್ಯಂತ ಸೂಕ್ಷ್ಮವಾದ ಸಲಕರಣೆಗಳು ಬೇಕು. ಕೇಂದ್ರ ಕ್ರಿಯೆಗಳಿಂದ ಹುಟ್ಟುವ ಕಣಗಳು ಅಪಾರವಾದ ಶಕ್ತಿಯನ್ನು ಪಡೆದು, ಅತಿ ಹೆಚ್ಚಾದ ವೇಗದಿಂದ ಹೊರಗೆ ಸಿಡಿಯುವುವು. ಈ ಶಕ್ತಿಯ ಮೂಲಕ ಇವುಗಳ ಪಥವೇ ವಿದ್ಯುದಂಶವನ್ನು ಹೊಂದುವುದು. ಕಣಗಳ ಈ ಸ್ವಭಾವದ ಉಪಯೋಗದಿಂದ ಅವುಗಳ ಗುರುತು ಹಚ್ಚುವ ಸಲಕರಣೆಗಳನ್ನು ಸಿದ್ಧಪಡಿಸಿದ್ದಾರೆ. ಇವುಗಳಲ್ಲಿ ಸಿ. ಟಿ. ಆರ್. ವಿಲ್ಸನ್ ರವರ ಮೇಘಮಂದಿರವು ಮಹತ್ವದ್ದಾಗಿದೆ.

ಆವಿಯು ನೀರಾಗಬೇಕಾದರೆ ಅದಕ್ಕೆ ಕಣಗಳ ಆಸರೆ ಬೇಕು. ಒಂದು ಕೊಳವೆಯಲ್ಲಿ ವಿದ್ಯುದಣುಗಳನ್ನು ಹುಟ್ಟಿಸಿ ಅದರಲ್ಲಿ ಗಾಳಿಯ ಪ್ರಸಾರದಿಂದ ಆವಿಯನ್ನು ಹುಟ್ಟಿಸುವರು. ಆವಿಯು ನೀರಾಗಬೇಕಾದರೆ, ಅದು ವಿದ್ಯುದಣುಗಳ ಆಸರೆಯನ್ನು ಪಡೆಯುವುದು. ವಿದ್ಯುದಂಶವುಳ್ಳ ನೀರಿನ ಗುಳ್ಳೆಗಳೊಳಗಿಂದ ಅತ್ಯಂತ ಶಕ್ತಿಯುಕ್ತ ವಿದ್ಯುತ್ಕಣಗಳು ಸಂಚರಿಸಿದರೆ ನೀರಿನ ಗುಳ್ಳೆಗಳು ಮಿಂಚುವುವು. ಅವುಗಳ ಚಿತ್ರವನ್ನು ತೆಗೆದರೆ, ಅದು ವಿದ್ಯುತ್ಕಣದ ಪಥದ ಚಿತ್ರವೇ ಆಗಿರುವುದು. ಪಥದ ಉದ್ದಳತೆಯಿಂದ ಅದರ ಶಕ್ತಿ, ವೇಗ, ಮುಂತಾದವುಗಳನ್ನು ಲೆಕ್ಕಾಚಾರಮಾಡಬಹುದು.

ರೇಡಿಯಂ ಸಿ. ಎಂಬ ಸ್ವಯಂಪ್ರಭೆಯುಳ್ಳ ಲೋಹದಿಂದ ೭೭ಲಕ್ಷ ಓಲ್ಟುಗಳ ಶಕ್ತಿಯುಳ್ಳ ಕಣಗಳು ಹೊರಗೆ ಸಿಡಿಯುವುವು. ಆದರೆ ಇಂಥ ಲೋಹಗಳು

ಸಿಗುವುದು ಬಹಳ ವಿರಳ. ಒಂದು 'ಮಿಲಿಗ್ರ್ಯಾಮ್' ರೇಡಿಯಂ ಲೋಹದಿಂದ ೩ ಕೋಟಿ ೭೦ಲಕ್ಷ ಕಣಗಳು ಸಿಡಿದುಬರುವುವು. ಆದರೆ ಲೋಹಪರಿವರ್ತನೆಯ ಪ್ರಯೋಗಗಳಲ್ಲಿ ೧೦ಲಕ್ಷಕ್ಕೆ ಒಂದರಂತೆ ಉಪಯುಕ್ತವಾಗಿ ಕಂಡುಬಂದಿವೆ. ಈ ಕಣಗಳಿಗೆ ಸಮವಾಗಿರುವ ವಿದ್ಯುತ್ಪ್ರವಾಹವು ೧.೨ × ೧೦–೧೧ ಆಂಪೇರ್. ೧೫ ವರ್ಷಗಳ ಹಿಂದೆ ಇಷ್ಟು ಶಕ್ತಿಯುಳ್ಳ ಕಣಗಳನ್ನು ಹುಟ್ಟಿಸುವುದು ಅಶಕ್ಯವಾಗಿದ್ದಿತು. ಲಂಡನ್ ವಿಶ್ವವಿದ್ಯಾನಿಲಯದ ವೈಜ್ಞಾನಿಕರಾದ ಗುರ್ನೆ, ಕ್ಲಾರ್ಕ್, ಗ್ಯಾಮೋ, ಕಾಕ್ರಾಫ್ಟ್, ವಾಲ್ಟನ್, ಕೇಂಬ್ರಿಜ್ಜಿನ ರದರ್‌ಫೋರ್ಡ್, ಆಲಿಫಂಟ್ ಕಿನ್ಸೆ, ಅಮೇರಿಕದ ಕ್ಯಾಲಿಫೋರ್ನಿಯ ವಿಶ್ವವಿದ್ಯಾನಿಲಯದ ಪ್ರೊ. ಇ. ಓ. ಲಾರೆನ್ಸ್, ಲಿವಿಂಗ್‌ಸ್ಟನ್ ಮುಂತಾದವರು ತಮ್ಮ ತಮ್ಮ ವಿವಿಧ ಶೋಧನೆ ಮತ್ತು ಸಲಕರಣೆಗಳ ಮೂಲಕ, ಮೇಲೆ ವಿವರಿಸಿದ ಶಕ್ತಿಯುಳ್ಳ ಕಣಗಳನ್ನು ಹುಟ್ಟಿಸಿರುತ್ತಾರೆ.

## ಪ್ರಬಲ ಒತ್ತಡದ ಸಲಕರಣೆಗಳು

ಪ್ರಬಲ ಒತ್ತಡದ ಸಲಕರಣೆಗಳನ್ನು ಒಂದು ಕೋವಿ ಎಂದು ಭಾವಿಸಿದರೆ, ಧನಕಣ ಶೂನ್ಯಕಣ ಮುಂತಾದವುಗಳು ಆ ಕೋವಿಯ ಗುಂಡುಗಳೆನ್ನಬಹುದು. ಆದುದರಿಂದ ಈ ಕಣಗಳು ಪ್ರಬಲ ಒತ್ತಡದ ಸಲಕರಣೆಗಳಲ್ಲಿ ಹೆಚ್ಚಾಗಿ ಶಕ್ತಿ ಮತ್ತು ವೇಗವನ್ನು ಪಡೆದು ಯಾವುದೇ ಲೋಹದ ಪರಮಾಣುವಿಗೆ ತಗುಲಿದರೆ, ಅವು ಅದನ್ನು ಭೇದಿಸಿ ಅದರಲ್ಲಿಯ ಋಣವಿದ್ಯುತ್ಕಣಗಳನ್ನು ಹೊರತಳ್ಳುವುವು. ಒಂದು ಪರಮಾಣುವಿನ ಕೇಂದ್ರದ ಸುತ್ತಲೂ ತಿರುಗುವ ಋಣಕಣಗಳ ಸಂಖ್ಯೆ ಹೆಚ್ಚು ಕಡಮೆಯಾದರೆ ಆ ಪರಮಾಣುವು ಇನ್ನೊಂದು ಪರಮಾಣುವಾಗಿ ಪರಿವರ್ತಿತವಾಗುವುದು. ಆದುದರಿಂದ ಲೋಹಪರಿವರ್ತನೆಯಲ್ಲಿ ಮಹತ್ವದ ಭಾಗವೆಂದರೆ ಪ್ರಬಲ ಒತ್ತಡಗಳನ್ನು ಹುಟ್ಟಿಸುವುದು.

ಕೇಂಬ್ರಿಜ್ ವಿಶ್ವವಿದ್ಯಾನಿಲಯದಲ್ಲಿ ಕಾಕ್ರಾಫ್ಟ್ ಮತ್ತು ವಾಲ್ಟನ್ ಎಂಬ ಇಬ್ಬರು ವೈಜ್ಞಾನಿಕರು ಪ್ರಬಲ ಒತ್ತಡವನ್ನು ಹುಟ್ಟಿಸುವ ಒಂದು ಸಲಕರಣೆಯನ್ನು ಸಿದ್ಧಪಡಿಸಿದರು. ಅದರ ಮೂಲತತ್ವವನ್ನು ಕೆಳಗೆ ವಿವರಿಸಲಾಗಿದೆ—

$K_1$, $K_2$, $K_3$ ಮತ್ತು $X_1$, $X_2$ ಇವು ವಿದ್ಯುತ್ಸಂಚಯಪಾತ್ರೆಗಳು. $K_1$, $K_2$, $K_3$ ಗಳನ್ನು $X_1$, $X_2$ ಗಳಿಗೆ ಎರಡು ರೀತಿಯಲ್ಲಿ ಜೋಡಿಸಬಹುದು—ಒಂದು $S'_1$, $S'_2$, $S'_3$ ಎಂಬ ಅಖಂಡ ರೇಖೆಯ ಮೂಲಕ, ಇನ್ನೊಂದು $S_1$, $S_2$, $S_3$ ಮುಂತಾದ ಖಂಡ ರೇಖೆಗಳ ಮೂಲಕ. $K_3$ ಸಂಚಯ ಪಾತ್ರೆಯನ್ನು ೧ ಲಕ್ಷ ಓಲ್ಟಿನ ಪೂರೈಕೆಯಂತ್ರಕ್ಕೆ ಜೋಡಿಸುವರು. ಇದನ್ನು ಖಂಡರೇಖೆಯ ಮೂಲಕ ಜೋಡಿಸಿದರೆ ಇದರಲ್ಲಿ ವಿದ್ಯುಚ್ಛಕ್ತಿಯ ಕೆಲಭಾಗವು $X_2$ ಸಂಚಯ ಪಾತ್ರೆಯಲ್ಲಿ ಸೇರುವುದು. ಅನಂತರ ಅಖಂಡ



(*From Proceedings of the Royal Society*)

ರೇಖೆಯೊಂದಿಗೆ ಜೋಡಿಸಿದರೆ $X_2$ ಸಂಚಯ ಪಾತ್ರೆಯಲ್ಲಿಯ ಶಕ್ತಿ $K_2$ ಪಾತ್ರೆಯಲ್ಲಿ ಸೇರುತ್ತದೆ. ಈ ವಿಧದಿಂದ ಹತ್ತಾರು ಸಲ ಜೋಡಿಸಿದರೆ $K_1$ ಪಾತ್ರೆಯ ಒತ್ತಡವು $K_3$ ಪಾತ್ರೆಯ ಒತ್ತಡದ ಮೂರರಷ್ಟಾಗುವುದು. ಈ ವಿಧಾನದಿಂದ ಪ್ರಬಲವಾದ ಒತ್ತಡವನ್ನು ಹುಟ್ಟಿಸಬಹುದು.

ಕ್ಯಾಲಿಫೋರ್ನಿಯ ವಿಶ್ವವಿದ್ಯಾನಿಲಯದ ಪ್ರೊ. ಇ. ಓ. ಲಾರೆನ್ಸರು ಮತ್ತು ಡಾ|| ಲಿವಿಂಗ್‌ಸ್ಟನ್‌ರವರು ಪ್ರಬಲ ಒತ್ತಡದ ಕಣಗಳ ಉತ್ಪಾದನೆಗಾಗಿ 'ಸೈಕ್ಲೊಟ್ರಾನ್' ಎಂಬ ಸಲಕರಣೆಯನ್ನು ಕಟ್ಟಿದರು. ಆದಕ್ಕಾಗಿಯೆ ೧೯೩೯ರಲ್ಲಿ ಪದಾರ್ಥ ವಿಜ್ಞಾನಶಾಸ್ತ್ರದ 'ನೋಬೆಲ್ ಪಾರಿತೋಷಕವು' ಪ್ರೊ. ಲಾರೆನ್ಸರಿಗೆ ದೊರಕಿತು.

ಇದರಲ್ಲಿ ಎ ಬಿ ಎಂಬ ಎರಡು ಅರ್ಧಗೋಲಾಕೃತಿಯ ಪೆಟ್ಟಿಗೆಗಳಿವೆ. ಇವುಗಳ ಅಂಚನ್ನು ವಿದ್ಯುತ್ಪ್ರವಾಹವನ್ನು ತಡೆಯುವ ಪದಾರ್ಥದಿಂದ ಜೋಡಿಸುವರು. ಎ ಬಿ ಗಳಲ್ಲಿ ೧೦ ಸಾವಿರ ಓಲ್ಟುಗಳ ಒತ್ತಡದ ವ್ಯತ್ಯಾಸವನ್ನು ಇಟ್ಟಿರುತ್ತಾರೆ. ಗೋಲದ ಮಧ್ಯಬಿಂದುವಿನಲ್ಲಿ ಧನಕಣವನ್ನಾಗಲಿ ಶೂನ್ಯಕಣವನ್ನಾಗಲಿ ಹುಟ್ಟಿಸುವ ಯೋಜನೆಯನ್ನು ಮಾಡಿರುತ್ತಾರೆ. ಈ ಗೋಲವನ್ನು ೮೫ ಟನ್ ಭಾರದ ಅಯಸ್ಕಾಂತದ ನಡುವೆ ಇಡುವರು. ಈ ಅಯಸ್ಕಾಂತದ ಪ್ರಬಲಕ್ಷೇತ್ರದ ಮೂಲಕ ಧನಕಣವು ಚಿತ್ರದಲ್ಲಿ ತೋರಿಸಿದಂತೆ ವರ್ತುಳಾಕೃತಿಯಲ್ಲಿ ಚಲಿಸುವುದು. ಎ ಮತ್ತು ಬಿ ಅರ್ಧಗೋಲಗಳ ವಿದ್ಯುದಂಶವನ್ನು ಅತಿವೇಗದಿಂದ ಒಂದು ಕ್ರಮದಲ್ಲಿ ಮಾರ್ಪಡಿಸು

ತ್ತಾರೆ. ಆದುದರಿಂದ ಧನಕಣವು ಎ ಭಾಗದಿಂದ ಬಿ ಭಾಗದಲ್ಲಿ ಬಂದರೆ ಅದರ ವೇಗವು ಹೆಚ್ಚಾಗಿ ಅದರ ಶಕ್ತಿಯೂ ಬೆಳೆಯುತ್ತದೆ. ವೇಗವು ಹೆಚ್ಚಾಗುತ್ತ ಹೋದಂತೆ ಧನಕಣವು ಹೆಚ್ಚಿನ ವ್ಯಾಸದ ವರ್ತುಳದಲ್ಲಿ ಚಲಿಸುವುದು. ಕೊನೆಗೆ ಪೂರೈಕೆಯ




(From Physical Review)

ಒತ್ತಡದ ೧೦೦ ರಷ್ಟು ಹೆಚ್ಚಾದ ಒತ್ತಡದ ಶಕ್ತಿಯಿಂದ 'ಲ' ಬಿಂದುವಿನ ಹತ್ತಿರ ಬರುವುದು. ಅಲ್ಲಿ ಪರಿವರ್ತಿಸುವ ಲೋಹದ ಪರಮಾಣುವನ್ನಿಟ್ಟರೆ ಧನಕಣವು ಅದನ್ನು ಭೇದಿಸಿ ಅದರಲ್ಲಿಯ ಋಣಕಣಗಳನ್ನು ಹೊರತಳ್ಳುವುದು. ಪರಮಾಣುವಿನಲ್ಲಿರುವ ಋಣವಿದ್ಯುತ್ಕಣಗಳ ಸಂಖ್ಯೆ ಕಡಮೆಯಾದರೆ ಪರಮಾಣು ಪರಿವರ್ತಿತವಾಗಿ ಇನ್ನೊಂದು ಲೋಹದ ಪರಮಾಣುವಾಗುವುದು.

ಆದ್ದರಿಂದ, ಲೋಹಪರಿವರ್ತಕರ ಕನಸು ನನಸು ಆಗುವ ಯುಗವು ಬೇಗನೆ ಬರುವುದೇನು ?

ಪದ್ಮನಾಭ ಪುರಾಣಿಕ.

---

5

## ಪಾರಿಭಾಷಿಕ ಶಬ್ದಗಳು

ಅರ್ಕಾನಿಲ = Helium.

ಅಶ್ವಶಕ್ತಿ = Horse power.

ಇಂಗಾಲ = Carbon.

ಋಣವಿದ್ಯುತ್ಕಣ = Electron.

ಕೇಂದ್ರಕ್ರಿಯೆ = Nuclear reaction.

ಚಲನಶಕ್ತಿ = Kinetic energy.

ತೂಕಸಂಸ್ಥಿತಿಯ ನಿಯಮ = Law of Conservation of mass.

ತೂಕಸಂಖ್ಯೆ = Atomic number.

ತೈಲಬಿಂದು = Oil drop.

ಧನಕಣ = Proton.

ಧನವಿದ್ಯುತ್ಕಣ = Positron.

ಪರಮಾಣುತೂಕ = Atomic weight.

ಪ್ರಕಾಶನ = Emanation.

ಪ್ರಬಲ ಒತ್ತಡ = High voltage.

ಪೂರೈಕೆಯ ಒತ್ತಡ = Supply voltage.

ಮೇಘಮಂದಿರ = Cloud chamber.

ಲೋಹಪರಿವರ್ತಕರು = Alchemists.

ವಿದ್ಯುದಣು = Ion.

ಶಕ್ತಿಸಂಸ್ಥಿತಿಯ ನಿಯಮ = Law of Conservation of energy.

ಶೂನ್ಯಕಣ = Neutron.

ಸಕ್ಷೇತ್ರ = Isotope.

ಸ್ವಯಂಪ್ರಭೆ = Radio activity.

## ಪ್ರಮಾಣ ಗ್ರಂಥಗಳು


1. *The Mechanism of Nature.*—By Andrade.
2. *The New Chemistry.*—By Andrade.
3. *Ramification of Chemistry.*—A. W. Stewart.
4. *Electron.*—By Millikan.
5. *Science and Human Experience.*—By Herbert Dingle.
6. *Encyclopædia Britannica.*—Volume II.

# ಅತ್ತೆ

ಅತ್ತೆಯೆಂದರೆ ಹೆಂಡತಿಯ ತಾಯಿ, ಅಥವಾ ಗಂಡನ ತಾಯಿಯೇ ಅಲ್ಲ. ತಂದೆಯ ತಂಗಿ, ಅಥವಾ ಸೋದರಮಾವನ ಹೆಂಡತಿಯೂ ಆಗಬೇಕಾಗಿಲ್ಲ. ಮುದುಕಿ, ಮಡಿಹೆಂಗಸು, ಆಗಿರಬೇಕೆಂಬ ನಿರ್ಬಂಧವಿಲ್ಲ. ಕೊನೆಗೆ ಹೆಂಗಸೂ ಆಗ ಬೇಕಾಗಿಲ್ಲ. ಅದೊಂದು ಮನುಷ್ಯವ್ಯಕ್ತಿಗಿಂತಲೂ ಮನಸ್ಸಿನ ವೃತ್ತಿ. ನಮಗೆ ಪರಿಚಿತ ರೊಬ್ಬರು, ಗಣ್ಯರಾದ ವ್ಯಕ್ತಿಗಳು—ಸರಕಾರದ ದೊಡ್ಡ ಉದ್ಯೋಗಸ್ಥರು—ವಿದ್ಯಾ ವಂತರು—ಷರಾಯಿ ಬೂಟ್ಸು ಧರಿಸುವ ಆಧುನಿಕ ದೊಡ್ಡ ಮನುಷ್ಯರು—ಎರಡು ಸಾರಿ ಸೀಮೆಗೆ ಹೋಗಿಬಂದವರು—ಗಂಡಸರು—ಇದ್ದಾರೆ; ಅವರನ್ನು ನಮ್ಮ ಗೋಷ್ಠಿಯಲ್ಲಿ 'ಅತ್ತೆ' ಎಂದೇ ಕರೆಯುತ್ತೇವೆ—ಅಲ್ಲ, ಹೇಳಿಕೊಳ್ಳುತ್ತೇವೆ. ಏಕೆಂದರೆ ಎದುರೆದುರಿಗೆ ಅವರನ್ನು ಹಾಗೆಂದು ಕರೆಯಲು ನಮಗೆ ಯಾರಿಗೂ ಧೈರ್ಯವಿಲ್ಲ. ಕಛೇರಿಯಲ್ಲಿ ಸಾಮಾನ್ಯವಾಗಿ ಅಧಿಕಾರಿಗಳು ಅತ್ತೆ, ಗುಮಾಸ್ತರು ಸೊಸೆ. ಆಫೀಸರು ಅಪ್ರಯೋಜಕನಾಗಿದ್ದರೆ ಗುಮಾಸ್ತರೇ ಅತ್ತೆ. ಮನೆಯಲ್ಲಿ, ಸೊಸೆ ಮೆತ್ತಗಿದ್ದರೆ ಅತ್ತೆ ಅತ್ತೆಯಾಗಿರುವುದಿರಲಿ, ಅತ್ತಿಗೆ ನಾದಿನಿಯರು ಮುಂತಾಗಿ ಮನೆಮಂದಿಯೆಲ್ಲಾ, ಹುಡುಗರು ಮಕ್ಕಳು ಸಹ, ಅತ್ತೆಯರೇ! ಸೊಸೆ ಗಟ್ಟಿಗಿತ್ತಿ ಯಾದರೆ ಅವಳೇ ಅತ್ತೆ; ಅತ್ತೆ, ಮಾವ, ಅತ್ತಿಗೆ, ನಾದಿನಿ, ಗಂಡ, ಮಕ್ಕಳು ಎಲ್ಲಾ ಸೊಸೆ.

ಅತ್ತೆಯ ಮುಖ್ಯಲಕ್ಷಣ ದರ್ಪ; ಆಳಬೇಕು, ಅನ್ನಬೇಕು, ಎಂಬುದೇ ಪ್ರಧಾನ ವಾದ ಮನೋವೃತ್ತಿ. ಅತ್ತೆಯಾಗಿ, ತನ್ನ ಹಿರಿಯತನವನ್ನು ಸ್ಥಾಪಿಸದಿದ್ದರೆ ಏನು ಪ್ರಯೋಜನ? ಅದರ ಪರಿಣಾಮ ಏನೇ ಆಗಲಿ, ಯಾರಿಗಾದರೂ ಮೂಗು ಹೋಗಲಿ, ಯಾರಿಗಾದರೂ ಕಿವಿ ಹರಿಯಲಿ, ಯಾರಾದರೂ ಮುನಿಸಿಕೊಳ್ಳಲಿ, ಯಾರಾದರೂ ಉಪವಾಸಮಾಡಲಿ, ತನ್ನ ಮಾತನ್ನು ನಡಸದಿದ್ದರೆ ಅದೆಂಥ ಅತ್ತೆಗಿರಿ? ಮುಂದೆ ಬಂದರೆ ಹಾಯಬೇಕು, ಹಿಂದೆ ಬಂದರೆ ಒದೆಯಬೇಕು, ಅತ್ತಲಾಗಿ ಬಿಡಕೂಡದು, ಇತ್ತಲಾಗಿ ಬಿಡಕೂಡದು, ಹೀಗೆ ಕಾಡಿಸದಿದ್ದರೆ ತನ್ನ ದೊಡ್ಡಸ್ತಿಕೆ ಏನು ಉಳಿಯಿತು? ದಿನಕ್ಕೊಂದು ಸಲವಾದರೂ, ಯಾರೊಡನೆಯಾದರೂ—ಕೊನೆಗೆ ಬೀದಿಬಸವ ನೊಡನೆ—ಕಲಕಲನೆ ಜಗಳವಾಡದಿದ್ದರೆ ತಿಂದ ಅನ್ನ ಮೈ ಹತ್ತಬೇಕು ಹೇಗೆ? ತಾಯಿ, ತಂದೆ, ಅಕ್ಕ, ತಂಗಿ, ಅಣ್ಣ, ತಮ್ಮ, ಗಂಡ, ಮಕ್ಕಳು, ಮೊಮ್ಮಕ್ಕಳು ಯಾರೊಡನೆ

ಯಾದರೂ ಕಾದಿ ಗೆಲ್ಲದಿದ್ದರೆ, ಕಾಲಕೂಟ ಉಕ್ಕಿ ಸುರಿದು ವಾಂತಿಯಾಗದೆ ಹೋದರೆ, ಸಂಕಟ. ಅದಕ್ಕೆ ದಿನದಲ್ಲಿ ಯಾರು ಮುಂಚೆ ಬಲಿಯಾಗುತ್ತಾರೋ ಅವರೇ ಪ್ರಧಾನಪಶುಗಳು; ಅವರ ತ್ಯಾಗದಿಂದ ಮಿಕ್ಕವರಿಗೆ ಮುಕ್ತಿಯಾಗುವುದೂ ಉಂಟು. ಯಾರೂ ಬಲಿಯಾಗಿ ಸಿಕ್ಕದಿದ್ದರೆ, ದೀಕ್ಷಿತರು ಒಬ್ಬರೇ ಬಯಲಲ್ಲಿ ನಿಂತೋ ಒಂದು ಮೂಲೆಯಲ್ಲಿ ಕುಳಿತೋ, ಮುಸುಕು ಹಾಕಿಕೊಂಡು ಮಲಗಿಯೋ ಒದರಿ, ಗೊಣಗಿ, ಆತ್ಮಯಜ್ಞದಿಂದ ಎದೆಯನ್ನು ಹಗುರಮಾಡಿಕೊಳ್ಳಬೇಕು; ಅಂದಿನ ಹೊಸ ಅಸಮಾಧಾನವೇನೂ ಇಲ್ಲದಿದ್ದರೂ, ಹಳೆಯದನ್ನಾದರೂ ಕೆರೆದು ಗಾಯಮಾಡಿಕೊಂಡು ಕೂಗಾಡಬೇಕು, ತನ್ನ ಸಮಾನ ದುರದೃಷ್ಟಶಾಲಿಗಳೇ ಇಲ್ಲ ಎಂದು ಗೋಳಾಡಬೇಕು, ತನ್ನ ಕಷ್ಟವನ್ನು ಯಾರೂ ಗಮನಿಸಿ 'ಅಯ್ಯೋ!' ಎನ್ನುವುದಿಲ್ಲವಲ್ಲ ಎಂದು ಪ್ರಪಂಚವನ್ನೇ ದೂರಬೇಕು. ಕೊನೆಗೆ, ತಾನೇ ವಾಸಿ, ತನ್ನ ಸಮಾನ ಸಹನೆಯವರಿಲ್ಲ, ಒಳ್ಳೆಯವರಿಲ್ಲ, ಉದಾರಿಗಳಿಲ್ಲ, ಕಲ್ಯಾಣಗುಣ ಪರಿಪೂರ್ಣರಿಲ್ಲ ಎಂದು ಪ್ರಶಂಸೆ ಮಾಡಿಕೊಳ್ಳಬೇಕು. ಇವು "ಅತ್ತೆ'ಯ ಕೆಲವು ಸ್ಥೂಲ ಲಕ್ಷಣಗಳು. ಈ ವಿಚಿತ್ರ ವಸ್ತು, ಬುನಾದಿಯಿಂದ ಎಲ್ಲ ದೇಶ ಕಾಲಗಳಲ್ಲಿಯೂ ಸಂಸಾರಕ್ಕೆ ಅಂಟಿಕೊಂಡು ಬಂದಿರುವ ಒಂದು ಬೇನೆ. ಸಾಕ್ರೆಟೀಸನ ಕಾಲದಿಂದ ಮೊದಲುಮಾಡಿಕೊಂಡು ಇಂದಿನ ವರೆಗೆ ಇದಕ್ಕೆ ಯಾರೂ ಮದ್ದನ್ನು ಕಂಡುಹಿಡಿದಿಲ್ಲ. ಇಂಥ ಒಂದು ಅತ್ತೆಯ ದಿನಚರಿಯಲ್ಲಿ ಬೆಳಗ್ಗೆ ಎಚ್ಚರವಾದಾಗಿನಿಂದ ರಾತ್ರಿ ನಿದ್ರೆಹತ್ತುವ ವರೆಗೆ ಜರುಗ ಬಹುದಾದ ಸಂಗತಿಗಳಲ್ಲಿ ಕೆಲವನ್ನು ಮುಂದೆ ಮಾದರಿಗಾಗಿ ಸೂಚಿಸಿದೆ.

೧

"ಲೋ, ಕಾಫೀ ಕುಡಿದುಹೋಗೋ ಬಂದು! ಮಹಾ ಓದಿ ಪ್ಯಾಸು ಮಾಡೋನು! ಮೂರು ಹೊತ್ತೂ ಒಂದು ಪುಸ್ತಕ ಕೈಲಿ ಹಿಡಿದುಕೊಂಡು, ಬಗ್ಗಿಸಿದ ಕತ್ತು ಎತ್ತದೆ ಬಿಳೀಕಾಗದದ ಮೇಲೆ ಕರೀಗೀಟು ಎಳೀತಾ ಇದ್ದುಬಿಟ್ಟರೆ ಆಗಿಹೋಯಿತು!"

"ನಾನು ನಿತ್ಯ ಅಲ್ಲಿಗೇ ಬಂದು ಕುಡೀತಿರಲಿಲ್ಲವೇನಮ್ಮ! ಆಗೋದಕ್ಕೆ ಮುಂಚೆ ಬಂದು ಕತ್ತಿನಮೇಲೆ ಕೂತುಕೊಂಡು ಪೀಡಿಸುತ್ತೀಯಲ್ಲಾಂದೆ! ಅದಕ್ಕೋಸ್ಕರ ಆಗಲಿ ಎಂತ ಕೂತುಕೊಂಡೆ."

"ಮತ್ತೆ, ಆಯಿತೇ ಆಯಿತೇ ಅಂತ ಒಂದು ಸೇಣುಹಾಕಿಕೊಂಡರೆ ಏನು ಮಾಡೋದು?"

"ನಾನೆಲ್ಲಿ ಹಾಗೆಂದನಮ್ಮ? ಅವೊತ್ತು ಬೆಳಗ್ಗೆ ಕ್ಲಾಸು; ಹೊತ್ತಾಗಿ

ಹೋಗಿತ್ತು; ಅದಕ್ಕೋಸ್ಕರ ಕೇಳಿದೆ.—ಕುಡೀದೆ ಹಾಗೇ ಹೋದರೆ ಅದಕ್ಕೂ ಬೈಯುತ್ತೀಯಲ್ಲಾ ಅಂತ."

"ಹೌದು, ನಾನು ಬೈಯ್ಯೋಳು; ನಾಳಿನಿಂದ ಬಯ್ಯದೆ ಯಾರು ಮಾಡುತಾರೋ ಮಾಡಲಿ!"

"ಅಕ್ಕ ಮಾಡುತೀನಿ ಅಂತಾಳಲ್ಲಮ್ಮ! ಬಿಟ್ಟುಬಿಡು, ಮಾಡಲಿ."

"ಮಾಡಲಪ್ಪ, ಮಾಡಲಿ; ಮಹಾರಾಯತಿಯಾಗಿ ಮಾಡಲಿ; ಅವಳುಮಾಡಿ ಮಾಡಿಯೇ ನೀನು ಇಷ್ಟು ದೊಡ್ಡೋನಾಗಿರೋದು. ಮಾಡಿ! ಮಾಡಿಸಿಕೊಳ್ಳಿ! ಯಾರು ಬೇಡ ಎಂದೋರು?"

"ಅವೊತ್ತು ಅವಳು ಮಾಡಿದ್ದು ಚೆನ್ನಾಗಿತ್ತಲ್ಲಮ್ಮ!"

"ಚೆನ್ನಾಗಿರದೇ ಏನುಮಾಡುತ್ತೆ? ಈ ತಗ್ಗಿನ ಧಾರಣೆಯಲ್ಲಿ ದಿನಕ್ಕೆ ಒಂದು ಸೇರು ಹಾಲು, ಒಂದು ಪೌಂಡು ಪುಡಿ ಹುಯ್ದರೆ! ನಾನು ಮಾಡುವುದು ಅಂದರೆ ನಿಮಗೆ ಯಾರಿಗೂ ಯಾವುದೂ ಒಪ್ಪಾಗುವುದಿಲ್ಲ. ನನ್ನ ಹಣೆಯಬರಹವೇ ಹೀಗಾಗಿ ಹೋಯಿತು; ದುಡಿಯೋದು, ಅನ್ನಿಸಿಕೊಳ್ಳೋದು!"

"ಈಗ ನಿನ್ನ ಯಾರೇನೆಂದರಮ್ಮ? ನೀನೇ ನಿತ್ಯ ಕಾಫಿ ಮಾಡುತಾ ಇದ್ದೀಯಲ್ಲಮ್ಮ!"

"ಮತ್ತಿನ್ನೇನು ಮಾಡುವುದು? ತೀರಾಬಾರ ನಾನೂ ಮಾಡುತೀನಿ ಮಾಡುತೀನಿ ಅಂತ ಬಂದು ಒಂದುದಿನ ಮಾಡಿದಳೋ ಇಲ್ಲವೋ ಅಲ್ಲಿಗೇ ನಿಂತುಹೋಯಿತು. ಮೈ ಬಗ್ಗಬೇಕೋ ಬೇಡವೋ!"

"ಅವಳು ಹದಿ ಮೈಲಿಗೆ ಎಂದೆ; ಅದಕ್ಕೆ ಅವಳು ಬಿಟ್ಟಳು."

"ಹೌದು ಹೌದು! ಅಂತು ಇಂತು ನನ್ನ ಮೇಲೇ ತಪ್ಪು!"

೨

"ಇದೇನು ಹೀಗೆ ಕಾಯಿಪಲ್ಯ ತಂದು ತಂದು ಎಳೆದರೆ? ಯಾರು ಇದನ್ನೆಲ್ಲಾ ಬೇಯಿಸೋರು?"

"ಇದೆಲ್ಲಾ ಒಂದೇ ದಿನಕ್ಕೇ? ನಾಳೆಗೆ, ನಾಡಿದ್ದಿಗೆ; ಮಿಕ್ಕರೆ ಇನ್ನೊಂದು ದಿನಕ್ಕೆ."

"ನಿತ್ಯ ನಿತ್ಯ ಎರಡೆರಡು, ಮೂರುಮೂರು, ಮಾಡುವುದಕ್ಕೆ ನಾನೊಬ್ಬಳು ಅಡಿಗೆ ಪರಿಚಾರಕಳು ಇದ್ದೀನಲ್ಲ!"

"ಹಾಗೆ ನೋಡೋದಕ್ಕೆ ಹೋದರೆ ಎಲ್ಲಾ ಪರಿಚಾರಕರೇಯೆ! ಯಾರಲ್ಲ?"

"ಅಯ್ಯೋ, ನೀವ್ಯಾಕೆ ಪರಿಚಾರಕರಾಗುತ್ತೀರಿ? ಬೀಯೆ ಎಮ್ಮೆ ಪ್ಯಾಸು ಮಾಡಿದ್ದೀರಿ; ನೂರಾರು ರೂಪಾಯಿ ಸಂಬಳ ತರುತ್ತಿದ್ದೀರಿ!"

"ಬಿ.ಎ., ಎಂ.ಎ. ಪ್ಯಾಸುಮಾಡಿ ನೂರಾರು. ರೂಪಾಯಿ ಸಂಬಳ ತರುವ ಪುಣ್ಯ ಪಡೆದುಕೊಂಡು ಬರಲಿಲ್ಲವಲ್ಲ! ಯಾರ್ಯಾರ ಪ್ರಾಪ್ತಿ ಎಷ್ಟೆಷ್ಟೋ ಅಷ್ಟಷ್ಟೇ!"

"ಆದರೂ ನಿಮ್ಮ ದೊಡ್ಡಸ್ತಿಕೆ ನಿಮ್ಮ ಧಾರಾಳ ಹೇಳುವ ಹಾಗಿಲ್ಲ!"

"ನನಗೇನು ತರ್ಕಾರಿಯ ಮೇಲೆ ಅಷ್ಟು ಇಷ್ಟವೇ ಇಲ್ಲ; ತರದೇ ಇದ್ದರೆ, 'ಬರೀ ಅನ್ನ ನೀರೂ ಅನ್ನ ನೀರೂ ಯಾರು ತಿಂದಾರು?' ಅಂತೀಯಲ್ಲ, ಅದಕ್ಕೆ ತರೋದು. ನಿನಗೆ ಕೈಲಾಗದಿದ್ದರೆ, ಇದೇ ಮಾಡಬೇಕು, ಅದೇ ಮಾಡಬೇಕು ಎಂಬ ನಿರ್ಬಂಧವಿಲ್ಲ."

"ನಿಮ್ಮದು ಯಾವುದೂ ನಿರ್ಬಂಧವಿಲ್ಲ. ಈ ಮನೇಲಿ ತಿನ್ನೋಳು ನಾನೊಬ್ಬಳು ತಾನೇ ಹೊಟ್ಟೆಬಿರಿಯ! ಹಾಳು ಹೊಟ್ಟೆ ಒಂದು ಇದೆಯಲ್ಲ!"

"ನಾವೆಲ್ಲಾ ಉಪವಾಸ ಇರುತ್ತೇವೆಯೇ? ನಾವೂ ತಿನ್ನುವುದಿಲ್ಲವೇ?"

"ಉಪವಾಸವೊ ಒಪ್ಪತ್ತೊ ಮಾಡಿಕೊಂಡು; ಇರೋದು ಇಲ್ಲದ್ದು ನೋಡಿ ಕೊಂಡು, ಹೊತ್ತಿಗೆ ಹೊತ್ತಿಗೆ ಇಷ್ಟು ಬೇಯಿಸಿ ಹಾಕುತೀನಲ್ಲ, ನಂದೇ ತಪ್ಪು. ಅಲ್ಲವೇ?"

೩

"ಏನೇ, ಆಗಲೇ ತಟ್ಟೆ ತಂದು ಹಾಕಿಕೊಂಡುಬಿಟ್ಟೆ?"

"ಹನ್ನೊಂದೂವರೆ ಆಯಿತಲ್ಲಮ್ಮ!"

"ಆಗಲಿ, ಆದರೇನು? ಇನ್ನೂ ಹಿಂದಿನ ಹತ್ತೂವರೆ."

"ಹನ್ನೆರಡು ಘಂಟೆಗೆ ಸ್ಕೂಲಿಗೆ ಹೋಗಬೇಕಲ್ಲಮ್ಮ!"

"ಹೋಗು; ಇನ್ನೂ ಅರ್ಧ ಘಂಟೆಯಿದೆಯಲ್ಲ! ಅನ್ನ ಕುದಿಹತ್ತುತಾ ಇದೆ; ಈಗ ಆಗುತ್ತೆ."

"ಇನ್ನೂ ಅನ್ನ ಅಗಿ, ಸಾರಾಗಿ, ನಾ ಊಟಮಾಡಿ, ಎಂದಿಗಮ್ಮ ಸ್ಕೂಲಿಗೆ ಹೋಗುವುದು?"

"ಹಾಗಾದರೆ ಕುದಿಯುತ್ತಿರುವ ಅನ್ನವನ್ನು ಹಾಗೇ ತೋಡಲೇನೇ? ಮೊನ್ನೆಯೂ ಹೀಗೆಯೇ ಆತಪಮಾಡಿದೆ. ಒಲೆ ಬೀಸಿ ಬೀಸಿ, ಊದಿ ಊದಿ, ಅನ್ನ ಮಾಡಿ ಹಾಕಿದೆ. ಇನ್ನೂ ರಟ್ಟೆ ಎರಡೂ ನೇದುತಾನೆ ಇದೆ—ಆದರೂ ಅನ್ನ ಆಗಿಲ್ಲ; ಅಕ್ಕಿ ಅಕ್ಕಿ, ಎಂತ ಎಲ್ಲಾ ಹಿಂಡಿಟ್ಟುಹೋದೆ. ಯಾಕೋ ಸಾಕಾಗಿ ಹೋಗಿದೆ

ಯಮ್ಮ ನಿಮ್ಮ ಓದು! ಬೆಳಗ್ಗೆ ಆರು ಘಂಟೆಗೆ ಎದ್ದರೆ ರಾತ್ರಿ ಹತ್ತು ಘಂಟೆಯಾದರೂ ನಿಮ್ಮ ಚಾಕರಿಯೇ ಆಗಿ ಹೋಗುತ್ತೆ."

"ಹೊತ್ತಾದರೆ ಕ್ಲಾಸಿಗೆ ಸೇರಿಸೋಲ್ಲಮ್ಮ ; ಹೊರಗೆ ನಿಲ್ಲಿಸಿಬಿಡುತ್ತಾರೆ."

"ನಿಲ್ಲಿಸಿದರೆ ನಿಲ್ಲಿಸಲಿ; ಮನೆಗೆ ಬಂದುಬಿಡು; ನೀವೆಲ್ಲಾ ಓದಿ ಓದಿ ಪ್ಯಾಸು ಮಾಡಿ ಏಸು ಉದ್ಧಾರವಾಗಬೇಕೋ ಕಾಣೆ! ದೊಡ್ಡೋರಾಗುವ ತನಕ ಹೀಗೆ ನಿಮಗೆ ದೇಹ ತೆಯ್ಯೋದು; ನೀವು ಆಮೇಲೆ ಗಂಡನ ಹಿಂದೆ ಪುಸಕ್ಕನೆ ಓಡಿ ಹೋಗೋದು; ಅಷ್ಟೆ ತಾನೇ ಉಡುಗೆರೆ ನೀವು ಕೊಡೋದು? ನಾವೆಲ್ಲಾ ಪ್ಯಾಸೇ ಮಾಡಿದ್ದೇವೆಯೇ? ಸಂಸಾರ ಮಾಡುತ್ತಲೇ ಇಲ್ಲವೇ?"

"ಹಾಗಾದರೆ ನಾನು ಎರಡು ಘಂಟೆಗೆ ಬಂದು ಊಟ ಮಾಡುತೇನಮ್ಮ."

"ಯಾಕೆ? ಬರಿಹೊಟ್ಟೇಲಿ ಉಪವಾಸ ಕಳುಹಿಸಿದಳು ಅಂತ ದೂರು ವುದಕ್ಕೆ!"

"ನಾನು ಎಂದು ಯಾರ ಕೈಲಿ ದೂರಿದ್ದೇನಮ್ಮ?"

"ದೂರಲೇಬೇಕೇನು? ಅಂತೂ ನನ್ನದೇ ತಪ್ಪು! ಇಷ್ಟು ದುಡೀತೀನಲ್ಲಾ ಎಂತ ಯಾರಿಗಾದರೂ ಅಂತಃಕರಣವೇ, ವಿಶ್ವಾಸವೇ?"

೪

"ಇದೇನ್ರೇ ಇದು, ಮಕ್ಕಳನ್ನ ಹೀಗೆ ಬಿಟ್ಟುಬಿಟ್ಟರೆ? ನಾನು ಇವೊತ್ತು ಆಗಲೆ ಎರಡು ಸಲ ನೀರು ಹುಯಿದುಕೊಂಡೆನಲ್ರೇ! ಇನ್ನೆಷ್ಟುಸಲ ಹುಯಿದು ಕೊಳ್ಳಲ್ರೇ? ಒದ್ದೆ ಉಟ್ಟು ಉಟ್ಟೇ ನನ್ನ ಮೈ ತುಂಬ ರೋಗ ತುಂಬಿಕೊಂಡಿತು."

"ಏನಾಯಿತು ಅತ್ತೇ?"

"ಏನಾಯಿತೇ? ನನ್ನ ತಲೆ! ಹೊಲೆಮಾದಿಗ ಮೈಲಿಗೆ!"

"ಯಾಕೆ? ಇಲ್ಲಿ ಯಾರು ಬಂದಿದ್ದರು?"

"ಯಾರೇ? ನಿನ್ನ ಮಕ್ಕಳು!"

"ಅವಕ್ಕೆ ಅಂಗಿ ಕೂಡ ಹಾಕಿಲ್ಲ, ಬರೀ ಮೈಯಲ್ಲಿ ಓಡಾಡುತ್ತಿವೆ!"

"ಬಟ್ಟೆಗೆ ಗತಿಯಿದ್ದರೆತಾನೇ ಹಾಕೀರಿ, ಪಾಪ!"

"ನಿಮ್ಮನ್ನೆಲ್ಲಾದರೂ ಮುಟ್ಟಿಬಿಟ್ಟಾರಲ್ಲಾ ಅಂತ ಹಾಕಲಿಲ್ಲ. ಬಟ್ಟೆಗಳಿಗೇನು ಕಡಮೆ? ಮಹಾರಾಯರು ಹೊಲಿಸಿಕೊಟ್ಟಿದಾರೆ!"

"ನಿನಗೇನೂ ಕಡಮೆ ಇಲ್ಲಮ್ಮ; ನನಗೇ ಕೋರಿ ಉಟ್ಟು ಉಟ್ಟು ಸಾಯುವುದು ಹಣೆಯಲ್ಲಿ ಬರೆದಿದೆ, ಅಷ್ಟೆ."

"ನಿಮಗೆತಾನೇ ಏನು ಕಡಮೆಮಾಡಿದ್ದಾರೆ? ಗಳುವಿನ ಮೇಲೆ ದಿನಾ ಮೂರು ನಾಲ್ಕು ಸೀರೆಗಳಿದ್ದೇ ಇರುತ್ತವೆಯಲ್ಲಾ?"

"ನಿಮಗೆ ಅದೂ ಸೈರಣೆಯಿಲ್ಲ! ಮೂರು ಇದ್ದರೇನು ಮುವ್ವತ್ತು ಇದ್ದರೇನು? ಅವೆಲ್ಲಾ ಮಧ್ಯಾಹ್ನದ ಹೊತ್ತಿಗೆ ಮೈಲಿಗೆಯಾಗಿ ತುಂಡು ಸುತ್ತಿಕೊಳ್ಳೋದು ಕಾಣೋದಿಲ್ಲವೇ?"

"ಅದೇಕೆ?"

"ಅದು ಇದಕೆ! ನೀನು ಮಕ್ಕಳನ್ನು ಹಡೆದದ್ದಕ್ಕೆ."

"ನನ್ನ ಮಕ್ಕಳೇನು ಮಾಡಿದವು?"

"ತಿರುಗಿ ಅದೇ ಮಾತಾಡೋದು ನೋಡು! ಮುಸರೆ ಸಾದು ಹಣೆಗೆ ಬಡಿದು ಕಳುಹಿಸಿದೆ; ಅದು ಬಂದು ನನ್ನನ್ನು ಮುಟ್ಟಿಬಿಟ್ಟಿತು!"

"ಹಣೆಗೆ ಏನೂ ಇಡದೆ ಹಾಳುಹಣೆ ಬಿಟ್ಟಿರುತ್ತೀರಿ ಅಂತೀರಲ್ಲಾಂತ ಇಟ್ಟು ಕಳುಹಿಸಿದೆ."

"ಆಹಹಹಹ! ನೀ ಬಿಡು, ಮಾತಿಗೆ ಮಾತು ಕೊಡೋದರಲ್ಲಿ ಕುಶಾಲಗಿತ್ತಿ! ನಾ ಹೇಳಿದ್ದು ತಾನೇ ಈ ಮನೆಯಲ್ಲಿ ಯಾರಿಗೂ ಆಗುವುದಿಲ್ಲ? ನನ್ನದೇ ತಪ್ಪು ಅಂತೂ ಇಂತೂ!"

೫

"ಅಕ್ಕಾ, ಅರಿಸಿನ ಕುಂಕುಮಕ್ಕೆ ಅವರ ಮನೆಗೆ ಎರಡುಸಲ ಬಂದು ಕರೆದರು; ಹೋಗಿಬಿಟ್ಟುಬರಲೇ?"

"ನಿನ್ನ ಇಷ್ಟ! ಏನಾದರೂ ಮಾಡು!"

"ಹೋಗು ಅಂದರೆ ಹೋಗುತ್ತೇನೆ; ಬೇಡ ಅಂದರೆ ಇಲ್ಲ."

"ಅಯ್ಯೋ ಪಾಪ! ಎಲ್ಲಾ ನನ್ನ ಕೇಳೇ ಮಾಡುತೀರಿ!"

"ನಿಮ್ಮನ್ನ ಕೇಳದೇ ಯಾವುದು ಮಾಡುತೀವಿ?"

"ಹೌದು ಹೌದು!"

"ನೀವೂ ಬಂದರೆ ಹೋಗಿಬರಬಹುದು."

"ನಾನು ಬರುವುದಿಲ್ಲ!"

"ನಾನೊಬ್ಬಳೇ ಹೇಗೆ ಹೋಗಲಿ?"

"ನಿನ್ನ ಗಂಡನ್ನ ಕರಕೊಂಡು ಹೋಗು! ಅವೊತ್ತು ಹೋಗಿರಲಿಲ್ಲವೇ? ಅವರೇ ನಿಮ್ಮನ್ನು ಇಷ್ಟು ಹೆಚ್ಚಿಸಿರೋರು!"

"ಅವೊತ್ತು ಮಂಗಳಾರತಿಗೆ ಎಲ್ಲರನ್ನೂ ಕರೆದಿದ್ದರು; 'ನಾನು ಹೇಗಿದ್ದರೂ ಹೋಗುತ್ತೀನಲ್ಲಾ, ನೀನೂ ಬಾ' ಎಂದರು; ನೀವು ಕೆಲಸದಲ್ಲಿದ್ದಿರಿ; ಅದಕ್ಕೋಸ್ಕರ ಹೋದೆ. ಅವರ ಜೊತೆಗೆ ಹೋದೆ, ಅವರ ಜೊತೆಗೇ ಬಂದೆ. . . . ಹಾಗಾದರೆ ನಾನೂ ಹೋಗಲೊ ಬೇಡವೋ ?"

"ಬೇಕಾದರೆ ಹೋಗು, ಸಾಕಾದರೆ ಬಿಡು; ನನ್ನ ಮೇಲೆ ಯಾಕೆ ಗೂಬೆ ಕೂರಿಸುತ್ತೀ ?"

"ಸಂಜೆಹೊತ್ತು ಲಕ್ಷಣವಾಗಿ ಅರಿಸಿನ ಕುಂಕುಮಕ್ಕೆ ಕರೆದರೆ ಹೋಗದೆ ಇರುತ್ತಾರೆಯೇ ಅಂದಿದ್ದಿರಿ; ಅದಕ್ಕೋಸ್ಕರ ಕೇಳಿದೆ. ನನಗೇನು ಹೋಗಲೇ ಬೇಕು ಅಂತ ಇಲ್ಲ."

"ಹೌದು; ನಾನು ಹಾಗೆಂತ ಹೇಳಿದ್ದು ತಪ್ಪೇನು ?"

"ಹಾಗಾದರೆ ನಾನು ಸೀತೂನ ಕರೆದುಕೊಂಡು ಹೋಗಿ ಬರುತೀನಿ."

"ಅಯ್ಯೋ ನೀವೇನಮ್ಮ, ಘಟ್ಟಿಗಿತ್ತಿಯರು; ಸೀತುತಾನೇ ಯಾಕೆ? ಏನೂ ಬೇಡ; ನೀವೇನು ಈಗ ಎಲ್ಲೆಲ್ಲಿಗೆ ಬೇಕಾದರೂ, ಎಷ್ಟು ಹೊತ್ತಿನಲ್ಲಿ ಬೇಕಾದರೂ ಒಬ್ಬೊಬ್ಬರೇ ಹೋಗುತ್ತೀರಿ. . . . ಯಾಕೇ, ಸುಮ್ಮನೆ ಕೂತುಬಿಟ್ಟೆ ?"

"ಮತ್ತೇನು ಮಾಡಲಿ ? ನೀವು ಯಾವುದೂ ಸರಿಯಾಗಿ ಹೇಳಲಿಲ್ಲ."

"ಇನ್ನು ಹೇಗೆ ಹೇಳುವುದು ಬೆಸವಾಗಿ ? ನೀವೆಲ್ಲಾ ಈಗಿನ ಕಾಲದವರು; ಮಾತಿನಲ್ಲಿ ಜಾಣೆಯರು; ನಮಗೆ ಮಾತನಾಡುವುದಕ್ಕೆ ಬಂದರೆ ತಾನೇ ಹಿಂದಿನ ಕಾಲದವಕ್ಕೆ! ಅಂತೂ ನನ್ನಿಂದಲೇ ತಪ್ಪು !"

೬

"ಅಮ್ಮ, ಅತ್ತಿಗೆಯ ಮಗುವಿಗೆ ತುಂಬ ಕಾಯಿಲೆಯಂತೆ."

"ಆದರೆ ಆಯಿತು; ಕಾಯಿಲೆ ಬರದೆ ಇದ್ದದ್ದು ಯಾರಿಗೆ ?"

"ನೀನು ಹೋಗಿ ನೋಡಿಕೊಂಡು ಬರುವುದಿಲ್ಲವೇನಮ್ಮ ?"

"ನಾನೇಕೆ ಹೋಗಲಿ ?"

"ಅಣ್ಣ ಕೂಡ ಊರಲ್ಲಿಲ್ಲವಂತೆ; ಮನೆಯಲ್ಲಿ ಇನ್ನಾರೂ ಇಲ್ಲ. ನಿನ್ನೆಯಿಂದ ಮಗು ಜ್ಞಾನಪಾನವಿಲ್ಲದೆ ಮಲಗಿದೆಯಂತೆ."

"ಅನುಭವಿಸಲಿ; ಯಾರಿಗೇನು ? ಅವರವರು ಕೇಳಿಕೊಂಡು ಬಂದದ್ದು ಅವರವರಿಗೆ. ಸುಖ ಬಂದಾಗ ಯಾರಿಗೆ ಕೊಡುತ್ತಾರೆ ? ಕಷ್ಟಬಂದರೆ ಯಾರು ತೆಗೆದು ಕೊಳ್ಳುವುದಕ್ಕಾಗುತ್ತೆ ?"

"ನಾನಾದರೂ ಹೋಗಿ ನೋಡಿಕೊಂಡು ಬರಲೇ ?"

"ನೀವೆಲ್ಲಾ ಒಳ್ಳೇಯವರೇಯೆ; ಒಂದು ಮಾರುದೂರ ಇಲ್ಲ, ಮನೆ! ಅವಳು ಒಂದು ಮಾತು ಹೇಳಿ ಕಳುಹಿಸುವುದಕ್ಕಿಲ್ಲ; ನಾವು ಮೇಲೆಬಿದ್ದು ಹೋಗಬೇಕೇನು ? ಅಂಥಾದ್ದೇನು ಹಿಡಿದಿದೆ ?"

"ಅವಳು ಯಾರ ಕೈಲಿ ಹೇಳಿಕಳುಹಿಸುತ್ತಾಳಮ್ಮ ? ಮನೆಯಲ್ಲಿ ನೀನೇ ಎನ್ನುವವರು ಮತ್ತೊಬ್ಬರಿಲ್ಲ."

"ನನಗೆ ಈಗ ನೀತಿ ಹೇಳೋಳು, ನಿಮ್ಮ ಅಣ್ಣ ಅತ್ತಿಗೆ ಬೇರೆ ಸಂಸಾರ ಮಾಡಿಕೊಂಡಿರುತೀವಿ ಅಂತ ಹೋದಾಗ ಅವರಿಗೆ ಏಕೆ ಹೇಳಬಾರದಾಗಿತ್ತು !"

"ಅವರೂ ಇಲ್ಲೇ ಇದ್ದರಲ್ಲಮ್ಮ ! ಈಗ ಇನ್ನೂ ಮೂರು ತಿಂಗಳಾಯಿತು ಬೇರೆ ಹೋಗಿ ; 'ಈ ನಿತ್ಯ ಜಗಳ ಸಾಕಾಗಿದೆ; ನಾನೆಲ್ಲಾದರೂ ಹೋಗುತೀನಿ' ಎಂತ ಅವೊತ್ತು ನೀನು ಅನ್ನುವ ಹೊತ್ತಿಗೆ ಅಲ್ಲವೇ ಅವರೂ ನಿಂತದ್ದು ನಿಂತಹಾಗೆ ಹೊರಟುಹೋದದ್ದು ?"

"ಹೋಗದೆ ಏನುಮಾಡುತಾರೆ ಪಾಪ! ನಾನು ಇಲ್ಲಿ ಅವರನ್ನು ಹುರುಕೊಂಡು ಮುಕ್ಕಿ ಅರಕೊಂಡು ಕುಡೀತಿದ್ದೆ ! ಸೋದರ ಸಂಬಂಧ, ಮನೆ ಹುಡುಗಿ, ಎಷ್ಟಾದರೂ ತಿಳಿದದ್ದು, ತಾಯಿ ಇಲ್ಲ, ಹೇಳಿದ ಹಾಗೆ ಕೇಳಿಕೊಂಡಿರುತ್ತೆ, ಅಂತ ಮೆಚ್ಚಿ ಮೆಚ್ಚಿ ಇವಳನ್ನ ತಂದರೆ ನನ್ನ ಮೇಲೇ ಕೋಗೀರು! ಮುಖ್ಯ, ಗಂಡಸಿಗೆ ಇವನಿಗೆ ಬುದ್ಧಿ ಇದ್ದರೆ ತಾನೇ ?"

"ಅವನೇನು ಮಾಡುತಾನಮ್ಮ, ಬರುವ ಹೊತ್ತಿಗೆ ಅವಳು ತನ್ನ ಸೀರೆ ಬಟ್ಟೆ ಗಂಟುಕಟ್ಟಿಕೊಂಡು, ಮಗುವನ್ನೂ ಕೊಂಕುಳಿಗೆ ಹಾಕಿಕೊಂಡು, ಈ ಮನೆ ಒಳಕ್ಕೆ ಮತ್ತೆ ನಾನು ಹೋಗೋಲ್ಲಾಂತ ಮಟಮಟ ಮಧ್ಯಾಹ್ನ ನಡುಬೀದೀಲಿ ಬಂದು ಅಳುತ್ತ ನಿಂತುಕೊಂಡುಬಿಟ್ಟಿದ್ದರೆ ?"

"ಅವನೇನು ಮಾಡುತಾನೆ ಪಾಪ! ಆ ತಾಟಗಿತ್ತಿ ಮಾತು ಕೇಳುತಾನೆ! ಕೇಳಲಿ, ಕೇಳಿದ್ದಕ್ಕೆ ಅನುಭವಿಸಲಿ !"

"ಆಗಲೇ ಹತ್ತುಘಂಟೆ ಹೊತ್ತಾಯಿತು; ಇನ್ನೂ ಅಣ್ಣ ಬಂದಿಲ್ಲ ಹಳ್ಳಿಗೆ ಹೋದೋನು! ಎಷ್ಟು ಹೊತ್ತಿಗೆ ಬರುತಾನೋ, ಇವೊತ್ತು ಬರುವುದೇ ಇಲ್ಲವೋ! ಹೊರಗೆ, ಕತ್ತಲೆ ಅಂದರೆ ಕತ್ತಲೆ. . . ."

"ಅದಕ್ಕೆ ನನ್ನನ್ನ ಏನುಮಾಡಬೇಕು, ಅಂತೀಯೇ ? ಕತ್ತಲೆ ಬೆಳಕು ನನ್ನ ಮಾತು ಕೇಳುತ್ತೆಯೇನೇ ? ಜೋಟುದ್ದ ಹುಡುಗಿ, ನೆನ್ನೆ ಮೊನ್ನೆ ಬಂದೋಳು, ಬೆಳೀಲಿಲ್ಲ ಬಾಳಲಿಲ್ಲ, ಅವಳಿಗೇ ಇಷ್ಟು ಅಹಂಕಾರವಾದರೆ ನಮಗೆಷ್ಟಿರಬಾರದು ?"

"ಇದ್ದೋವು ಎರಡು ಮಕ್ಕಳು; ಅದರಲ್ಲಿ ಒಂದು ಹೋಗಿ ಇನ್ನೂ ಆರು ತಿಂಗಳಾಗಿಲ್ಲ; ಇನ್ನೊಂದೂ ಹಾಗೇ ಏನಾದರೂ ಆದರೆ ಏನುಮಾಡೋದು?"

"ಆದರೆ ಆಗುತ್ತೆ; ಅನುಭವಿಸೋದು! ಈಗ ಆರುತಿಂಗಳ ಕೆಳಗೆ ದೊಡ್ಡದು ಹೋದಾಗ ಅದರ ಹತ್ತಿರವೇ ಕುಕ್ಕುರುಬಡಕೊಂಡಿದ್ದೆನಲ್ಲಾ ನಾನು ಏನುಮಾಡಿದೆ? ಹೆತ್ತ ತಾಯಿಯೇ ಏನುಮಾಡಿದಳು? ಹೋಗೋ ಜೀವಾನ ನಿಲ್ಲಿಸಿಕೊಳ್ಳುವುದಕ್ಕಾಗುತ್ತೆಯೇ ಯಾರಾದರೂ? ಮಕ್ಕಳನ್ನ ಕಳಕೊಳ್ಳದಿದ್ದವರು ಯಾರೂ! ಇನ್ನೂ ಚಿಕ್ಕವಳು, ಪುಟ್ಟವಳು; ಮುಂದೆ ಬೇಕಾದಷ್ಟು ಹೆರುತಾಳೆ! ಎಲ್ಲಾ ನನಗೆ ಬುದ್ಧಿ ಹೇಳೋರು ಹೊರತು, ನಾನು ಆಡೋದು ನ್ಯಾಯ ಅಂತ ಒಂದು ಪ್ರಾಣಿಯ ಬಾಯಲ್ಲೂ ಬರೋದು ಕಾಣೆ! ಹೀಗೇ ಆಗಿಹೋಯಿತು ನನ್ನ ಜನ್ಮ!"

ಆರ್. ಎ. ಕಪ್ಪಣ್ಣ.

---

# ಕಾವ್ಯಾವಲೋಕನ

**ಮರಳಿ ಮಣ್ಣಿಗೆ**—ಲೇಖಕರು : ಶ್ರೀಮಾನ್ ಶಿವರಾಮ ಕಾರಂತ ; ಮನೋಹರ ಗ್ರಂಥ ಮಾಲೆಯ ೪೯-೫೦-೫೧-೫೨ನೆಯ ಕುಸುಮ ; ಪ್ರಕಾಶಕರು : ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ ; ಕ್ರೌನ್ ಅ. ೬೦೮+ಏಳು ; ಬೆಲೆ, ರೂ. ೩—೮—೦.

ಕನ್ನಡ ಕಾದಂಬರಿಯ ಚರಿತ್ರೆ ಅಷ್ಟೇನೂ ದೀರ್ಘವಾಗಿಲ್ಲ. ವೆಂಕಟಾಚಾರ್ಯ ಗಳಗನಾಥರ ಕಾದಂಬರಿಗಳಲ್ಲಿ ಬೆಳೆ ಹುಲುಸಾಗಿರುವಂತೆ ಕಂಡರೂ ಅವುಗಳಲ್ಲಿ ಉತ್ಕೃಷ್ಟವಾದುವೆಲ್ಲ ಬಂಗಾಳಿಯಿಂದಲೋ ಮರಾಠಿಯಿಂದಲೋ ಇತರ ಸಾಹಿತ್ಯ ಗಳಿಂದಲೋ ಭಾಷಾಂತರಿತವಾದುವು. ಸ್ವತಂತ್ರ ಕಾದಂಬರಿಗಳೆಂದರೆ ಎಂ. ಎಸ್. ಪುಟ್ಟಣ್ಣನವರೇ ಮೊದಲಾದ ಒಬ್ಬಿಬ್ಬರು ಬರೆದವು. ಪುಟ್ಟಣ್ಣನವರ ಕೃತಿಗಳಲ್ಲಿ ಅವರು ಕಂಡು ಕೇಳಿದ ಅಥವಾ ಅವರ ಅನುಭವಕ್ಕೆ ಬಂದ ಪ್ರಪಂಚ, ಪರಿಮಿತಿ ಯುಳ್ಳದಾದರೂ ರಮ್ಯವಾಗಿ ರೂಪುಗೊಂಡಿದೆ. ಅಲ್ಲಿಂದೀಚೆಗೆ ಶ್ರೀ. ಕಾರಂತರ ಕಿರುಗಾದಂಬರಿಗಳೂ ಮನೋಹರ ಗ್ರಂಥಮಾಲೆಯ ಹಲವು ಕಾದಂಬರೀ ಕುಸುಮ ಗಳೂ ಅರಳಿ ತಮ್ಮ ಸೌರಭವನ್ನು ಎಲ್ಲೆಡೆಯಲ್ಲೂ ಸೂಸಿವೆ. ಮಹಾ ಕಾದಂಬರಿ ಯೆಂದರೆ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಒಂದೇ ಒಂದು ಕನ್ನಡಕ್ಕೆ ಇದ್ದುದು. ಅದನ್ನು ಸೃಷ್ಟಿಸಿರುವ ಶ್ರೀ. ಪುಟ್ಟಪ್ಪನವರ ಮಲೆನಾಡು ತನ್ನ ಉತ್ತುಂಗ ಗಿರಿ ಗಳಿಂದಲೂ ಕಾಡುಗಳ ಕಾವಣಗಳಿಂದಲೂ ಹೊಳೆಗಳ ಹೊಳಪಿನಿಂದಲೂ ಕಥೆಗೆ ಹಿನ್ನೆಲೆಯನ್ನು ಒದಗಿಸಿ ಅಲ್ಲಿನ ಜನರ ಬಾಳ್ವೆಯಲ್ಲಿ ಮಿಳಿತವಾಗಿ ರಂಜಿಸುತ್ತಿದೆ. 'ಮರಳಿಮಣ್ಣಿಗೆ' ಎಂಬ ಈ ಕಾದಂಬರಿ ಶ್ರೀ. ಕಾರಂತರ ಮಹಾಕಾದಂಬರಿ; ಕಾಲದ ದೃಷ್ಟಿಯಿಂದ ಕನ್ನಡಕ್ಕೆ ಎರಡನೆಯದು. ಇವರಿಗೆ ಪ್ರೇರಣೆ ಅನಂತವಾದ ಕಡಲಹಸರ ; ಅದಕ್ಕಿಂತಲೂ ಅಗಲವಾದ ಆಳವಾದ, ಸಕಲ ರೂಪಗಳನ್ನೂ ತಾಳುವ ಜೀವನಸಾಗರ. ಮಂಗಳೂರಿನ ಪಡುಕರಾವಳಿಯ ಬದುಕು ಬಡತನದೊಡನೆ ಸೆಣಸಿ ನಡಸುತ್ತಿರುವ ಸಂಗರವನ್ನು ಇವರು ಎಳೆಯೆಳೆಯಾಗಿ ರಸರಸವಾಗಿ ಹಿಡಿದು ಚಿತ್ರಿಸಿ ದ್ದಾರೆ. ಕನ್ನಡಕ್ಕೆ ಸ್ವತಂತ್ರ ಕಾದಂಬರಿಗಳಿಲ್ಲವೆಂಬ ಕೊರತೆಯಷ್ಟನ್ನೇ ಇದು ಹೋಗಲಾಡಿಸದೆ ಉತ್ಕೃಷ್ಟ ಕಾದಂಬರೀ ಮಾರ್ಗವನ್ನೂ ಕಾಣಿಸುತ್ತಿದೆ. ಕನ್ನಡ ಕಾದಂಬರಿ ಶ್ರೀ. ಕಾರಂತರ ಕೈಯಲ್ಲಿ ಉನ್ನತಿಯನ್ನು ಪಡೆದಿದೆ ; ಅದರ ಚರಿತ್ರೆಗೆ ಪ್ರಗತಿಯುಂಟಾಗಿದೆ. ಅವರ ಈ ಕೃತಿ ಬಹುಕಾಲ ನಿಲ್ಲಬಲ್ಲುದು. ಅದರಿಂದ ನಮ್ಮ

ನಾಡಿನ ಭಾವೀ ಲೇಖಕರಿಗೆ ಬೆಳಕೂ ಆವೇಶವೂ ಬರುವುವು. ಟಾಲ್‌ಸ್ಟಾಯ್, ಹಾರ್ಡಿ, ಗಾಲ್ಸ್‌ವರ್ದಿ, ರೋಮ್ಯೆ್ಕ ರೋಲ ಮುಂತಾದ ಪಾಶ್ಚಾತ್ಯ ವಿಭೂತಿಗಳ ಮಹಾ ಕಾದಂಬರಿಗಳಿಗೆ ಇದು ಸದೃಶವಾಗಿದೆ; ಅವುಗಳನ್ನು ಓದಿದಾಗ ಆಗುವಷ್ಟು ಸಂತೃಪ್ತಿ ಇದರಿಂದಲೂ ಬರುವಂತಿದೆ.

ಇದರ ಕಥೆಯನ್ನು ಸಂಗ್ರಹಿಸ ಹೊರಡುವುದು ಅನ್ಯಾಯ. ಆದರೂ ವಿಮರ್ಶೆಯ ಸೌಕರ್ಯಕ್ಕಾಗಿ ಅದರ ನಡಗೆಯನ್ನು ಮಾತ್ರ ಇಲ್ಲಿ ಸೂಚಿಸಬಹುದು.''

'ಮರಳಿಮಣ್ಣಿಗೆ'ಯಲ್ಲಿ ಮೂರು ತಲೆಮಾರುಗಳ ಕಥೆ ಒಂದಕ್ಕೆ ಒಂದು ಬೆಸೆದು ಬೆಳೆದಿದೆ. ಬಡತನದ ಕೋಟಲೆಯಲ್ಲಿ ಈ ತಲೆಮಾರಿನವರು ಬೆಂದು ಬಣ್ಣಬಣ್ಣವಾಗಿ ಬಾಡಿ ಬದುಕಿನ ಮರ್ಮವೇನೆಂಬುದನ್ನು ಕಂಡುಕೊಂಡ ಕಥೆ, ಇದರ ಮುಖ್ಯವಸ್ತು.

ರಾಮ ಐತಾಳರು ಕೋಡಿಯ ವೈದಿಕ ಬ್ರಾಹ್ಮಣರು; ತಂದೆ ಗಳಿಸಿದ ಕೊಂಚ ಆಸ್ತಿ ಹೊರತು ಬೇರೇನೂ ಇಲ್ಲದವರು; ಶ್ರಾದ್ಧಗಳನ್ನೂ ಮದುವೆಗಳನ್ನೂ ಮಾಡಿಸುವ ಪುರೋಹಿತರು. ಅದರಿಂದ ಅವರ ಬದುಕು ಸಾಗಬೇಕು. ಅವರ ಮನೆಯಲ್ಲಿದ್ದವರು ಅವರೂ ಸೇರಿ ಮೂವರು ಮಾತ್ರ. ಒಬ್ಬಾಕೆ ತಂಗಿ ಸರಸೋತಿ, ಮನೆತಪ್ಪಿದ ಹೆಣ್ಣು; ಇನ್ನೊಬ್ಬಳು ಕೈಹಿಡಿದ ಹೆಂಡತಿ ಪಾರೋತಿ. ಸ್ವಂತ ದುಡಿಮೆಯಿಂದ ಬೆವರು ಸುರಿಸಿ ಮೂವರೂ ಸೇರಿ ಬದುಕಿನ ಬಂಡಿಯನ್ನು ಎಳೆಯುತ್ತಿದ್ದರು; ಸಾಲಮಾಡದೆ ಇದ್ದದ್ದರಲ್ಲೇ ತಾವು ಬೆಳೆದದ್ದರಲ್ಲೇ ಹೇಗೋ ಬಾಳುತ್ತಿದ್ದರು. ಅತ್ತಿಗೆ ನಾದಿನಿಯರ ದೇಹಗಳು ಎರಡಾಗಿದ್ದರೂ ಜೀವ ಒಂದೇ ಎಂಬಂಥ ಪ್ರೀತಿ ಅವರಲ್ಲಿ. ಐತಾಳರು ದಿನಬೆಳಗಾದರೆ ಊರೂರು ಅಲೆಯುತ್ತ ಪೌರೋಹಿತ್ಯದ ಕಾಣಿಕೆಯನ್ನೂ ಕಾಯಿಪಲ್ಲೆಗಳನ್ನೂ ಮನೆಗೆ ತರುತ್ತಿದ್ದರು; ಊಟ ಎಲ್ಲಾದರಲ್ಲಿ. ಮನೆಯಲ್ಲಿದ್ದ ಎರಡು ಜೀವಗಳು ಗಂಜಿಕುಡಿದೋ ಅರೆಹೊಟ್ಟೆ ಉಂಡೋ ಹೇಗೋ ಇದ್ದರಾಯಿತು ಎಂದು ತಿಳಿದಿದ್ದವರು. ಐತಾಳರಿಗೆ ಇದ್ದ ಕೊರಗು ತಮ್ಮ ಸಂತತಿ ಬೆಳೆಯದಿದ್ದುದೇ. ಅದಕ್ಕಾಗಿ ಪಡುಮುನ್ನೂರಿನ ಸತ್ಯಭಾಮೆಯನ್ನು ಎರಡನೆಯ ಹೆಂಡತಿಯಾಗಿ ಮನೆಗೆ ತಂದರು. ಮನೆಯಲ್ಲಿ ಹೊಸ ಸಮಸ್ಯೆಗಳು ಏಳಲು ಮೊದಲಾಗುತ್ತದೆ. ಸವತಿಯರು ತಮ್ಮ ತಮ್ಮಲ್ಲಿ ಮೊದಮೊದಲು ಹುಟ್ಟಿದ ನಂಜನ್ನು ಉಂಡು ಆ ಮೇಲೆ ಹಿತವರಾದರು. ರಾಮ ಐತಾಳರಿಗೆ ಎರಡನೆಯ ಹೆಂಡತಿಯಿಂದ ಲಚ್ಚ, ಸುಬ್ಬಿ ಎಂಬ ಮಕ್ಕಳು ಆಗುತ್ತವೆ. ಇದರಿಂದ ಅವರು ಬಾಳು ಇನ್ನೂ ಕಠಿನವಾಗುತ್ತದೆ. ಲಚ್ಚ ಬೆಳೆಯುವುದು, ಅವನ ವಿದ್ಯಾಭ್ಯಾಸ, ಉಪನಯನ ಮುಂತಾದಕ್ಕೆಲ್ಲ ಐತಾಳರು ಹಣವನ್ನು ಒದಗಿಸಿದರು. ಹೊಟ್ಟೆ ಬಟ್ಟೆ ಕಟ್ಟಿ ತಮ್ಮ ಶ್ರಮವನ್ನು ಲೆಕ್ಕಿಸದೆ ಮಗ ಬೆಳೆದಾನು, ಕಲಿತಾನು, ಮುಂದಕ್ಕೆ ಬಂದಾನು, ತನ್ನ ಹೆಸರನ್ನು ಉಳಿಸಾನು ಎಂಬ ಆಸೆಯಿಂದ ಅವನಲ್ಲೇ ಪ್ರಾಣವನ್ನಿರಿಸಿದ್ದರು.

ಲಚ್ಚನು ಹಾಗೂ ಹೀಗೂ ಇಂಗ್ಲಿಷನ್ನು ಕಲಿತು ವಿದ್ಯೆಯಲ್ಲಿ ಮುಂದುವರಿದನು. ಆದರೆ ಅವನಿಗೆ ತಂದೆಯ ಮೇಲೆ ಅಸಮಾಧಾನ. ಕಾರಣ ಅವರು ಜಿಪುಣರೆಂದು; ತನಗೆ ಬೇಕಾದಷ್ಟು ಹಣ ಒದಗಿಸಲಿಲ್ಲವೆಂದು. ಓದಿನಲ್ಲಿ ಆಸಕ್ತಿಯುಳ್ಳವನು ಮತ್ತಾವ ಹವ್ಯಾಸಕ್ಕೂ ಸಿಕ್ಕಬಾರದೆಂಬು ದನ್ನು ಮರೆತು ಕುಂದಾಪುರದಲ್ಲಿ ಅವನು ಕೆಟ್ಟದಾರಿಗೆ ಬಿದ್ದನು. ಅವನಿಗೆ ಅಂಥ ಗೆಳೆಯರೂ ದೊರೆತರು. ತನ್ನ ಈ ವ್ಯಾಪಾರಗಳಿಗೆ ತಂದೆ ಹಣ ಕೊಡಲಿಲ್ಲವೆಂಬುದು ಅವನ ಅಸಂತೃಪ್ತಿಗೆ

ಕಾರಣವಾಯಿತು; ತನ್ನ ಮಗಳಾದ ಸುಬ್ಬಿಗೆ ಮಾತ್ರ ಅಷ್ಟು ಹಣವನ್ನು ಚೆಲ್ಲಿದನಲ್ಲಾ ಎಂದು ಅಸೂಯೆ. ಮನೆಗೆ ಬಂದರೆ ತಂದೆಯೊಡನೆ ಮಾತಿಲ್ಲ. ಆಡಿದವು ಕೆಲವು ನಂಜುನುಡಿಗಳು. ತಾಯನ್ನು ಗಣಿಸದೆ ಹಿರಿಯರ ಅಂಕೆಗೆ ಸಿಕ್ಕದೆ ಅವನು ತನ್ನ ದಾರಿಯನ್ನೇ ಹಿಡಿದನು. ಹೀಗಾಗಿ ಐತಾಳರ ಆಸೆಯೆಲ್ಲ ಮಣ್ಣುಪಾಲಾಗುವ ಸ್ಥಿತಿ ಬಂತು. ಮದುವೆಯಾದರೆ ದಾರಿಗೆ ಬಂದಾನೆಂದು ಅದನ್ನೂ ಮಾಡಿಯಾಯಿತು. ಮಂಗಳೂರಿನ ವಕೀಲರು ವಾಸುದೇವಯ್ಯನವರು ಬೀಗರಾದರು. ಲಚ್ಚ ಅವರ ಮನೆಯಳಿಯನಾಗಿ ಅಲ್ಲೇ ಓದಿದನು. ಎಫ್.ಎ. ಪರೀಕ್ಷೆಯಲ್ಲಿ ಉತ್ತೀರ್ಣನೂ ಆದನು. ಅವನ ಸಂಸರ್ಗದಿಂದ ಅವನ ಹೆಂಡತಿ ನಾಗವೇಣಿ ಕಾಯಿಲೆಯಿಂದ ನರಳುವಂತಾಯ್ತು. ಆ ಮೇಲೆ ಮದ್ರಾಸಿಗೆ ಬಿ.ಎ. ಓದಲಿಕ್ಕೆ ಅವನು ಹೊರಟನು. ಐತಾಳರ ಬೊಕ್ಕಸ ಬರಿದಾಗುವುದೇ ಅವನ ಹಂಬಲವಾಗಿತ್ತು. ಬಿ.ಎ. ಮುಗಿಸಿ ಮನೆಗೆ ಬಂದವನು ಅಲ್ಲಿ ನಿಲ್ಲಲು ಮನಸ್ಸಿಲ್ಲದೆ ಅತ್ತ ಇತ್ತ ಅಲೆದಾಡಿ ಹಿರಿಯರ ಆಸೆಗಳನ್ನು ಚಿವುಟಿ, ಪ್ರೀತಿಯನ್ನು ತಳ್ಳಿ, ಸೇವೆಯನ್ನು ತೊರೆದು ಸ್ವೇಚ್ಛಾ ವೃತ್ತಿಯಲ್ಲಿ ಬಾಳತೊಡಗಿದನು. ಈ ಕೊರಗಿನಿಂದ ಅವನ ದೊಡ್ಡ ತಾಯಿ ಪಾರೋತಿ ಗತಿಸಿದಳು: ಐತಾಳರು ಕಣ್ಣುಮುಚ್ಚಿದರು. ಲಚ್ಚನಾದರೋ ತಿಂಗಳಿಗೆ ಒಂದೂರಂತೆ ಸುತ್ತಾಡಿ ಸಾಲಮಾಡಿ ಕಾಯಿಲೆಯ ಕುಪ್ಪೆಯಾಗಿ ಭಂಡ ಬದುಕನ್ನು ಸಾಗಿಸುತ್ತಿದ್ದನು. ತಂದೆ ಸಾಯುವಾಗ ಅವನು ಎಲ್ಲೋ ಯಾರಿಗೂ ತಿಳಿಯದು. ಐತಾಳರು ತಮ್ಮ ಆಸ್ತಿಯನ್ನು ಮಗನಿಗೆ ಬಿಟ್ಟರೆ ಹಾಳುಮಾಡುವ ನೆಂದು ತಿಳಿದು ಸೊಸೆಯ ಹೆಸರಿಗೆ ಮಾಡಿದರು. ಇದನ್ನು ತಿಳಿದ ಲಚ್ಚ ಸತ್ತ ತಂದೆಯ ಮೇಲೆ ವಿಷ ವನ್ನು ಕಾರಿದನು. ಹೆಂಡತಿಯನ್ನು ಮರುಳುಮಾಡಿ ಅವಳಿಂದ ಹಣದ ಸುಲಿಗೆಗೆ ತೊಡಗಿದನು. ನಾಗ ವೇಣಿಗೆ ಇವನ ನಡತೆಯನ್ನು ಕಂಡು ದ್ವೇಷವೇ ದಿನದಿನಕ್ಕೆ ಬೆಳೆಯುತ್ತಿದ್ದರೂ ಒಂದೊಂದು ಸಲ ಕೈಹಿಡಿದ ಗಂಡನಿಗೆ ಸೋಲಬೇಕಾಯ್ತು. ಇದರ ಫಲವಾಗಿ ಹಡೆದ ಮೊದಲೆರಡು ಮಕ್ಕಳು ಬೇನೆಗೆ ತುತ್ತಾಗಿ ಸತ್ತುವು; ಆಸ್ತಿ ಲಚ್ಚನ ಕೈಗೆ ಸಿಕ್ಕಿ ಹಾಳಾಯ್ತು. ಎಲ್ಲವನ್ನೂ ಯಾರಿಗೊ ಮಾರಿ ಊರು ಬಿಟ್ಟುಹೋಗಿ ಆ ಹಣದಿಂದ ಹೊಟೇಲೊಂದನ್ನು ಸ್ಥಾಪಿಸಿ ಜೂಜಿನಲ್ಲಿ, ಇಸ್ಪೀಟಿನಲ್ಲಿ, ಕುಲಟೆ ಯರಲ್ಲಿ ನಿರತನಾದನು. ಇಟ್ಟ ಹೋಟಲೂ ಹಾಗೆಯೇ ಕರಗಿತು. ಇತ್ತಕಡೆ ನಾಗವೇಣಿ, ತಂದೆಯ ಆರೈಕೆಯಲ್ಲಿ ಕಷ್ಟವನ್ನು ತಿಳಿಯದೆ ಬೆಳೆದವಳು, ತನ್ನ ಹೊಟ್ಟೆಗಾಗಿ ವ್ಯವಸಾಯದ ಕೆಲಸ ಮಾಡ ಬೇಕಾಯ್ತು. ಅವಳಿರುವ ಮನೆ, ಸ್ವಲ್ಪ ಗದ್ದೆ ಹೊರತಾಗಿ ಎಲ್ಲವೂ ಲಚ್ಚನ ಬಾಯಿಗೆ ಆಹುತಿ ಯಾದವು. ಅವಳ ಅತ್ತೆ ಸತ್ಯಭಾಮೆಯೂ ಸರಸೋತಿಯೂ ಕಾಶೀಯಾತ್ರೆ ಹೋದ ಸಮಯದಲ್ಲಿ ಲಚ್ಚ ಬಂದು ಇದ್ದ ಮನೆಯನ್ನೂ ಮಾರಿಹೋದನು. ನಾಗವೇಣಿ ಮೂರನೆಯ ಸಲಕ್ಕೆ ಬಸಿರಾಗಿ ಒಂದು ಮಗುವನ್ನು ಹಡೆದಳು. ಹುಟ್ಟುವಾಗ ತಂದೆಯಿದ್ದರೂ ಇಲ್ಲದಂತಾಯಿತು. ಗಂಡ ಬದುಕಿದ್ದರೂ ತಾನು ವಿಧವೆ ಎಂಬ ಭಾವನೆ ನಾಗವೇಣಿಗೆ ಬಂತು. ಹುಡುಗನಿಗೆ ನಾಮಕರಣವಾಗುವಾಗ ತಂದೆಯ ಮುಖವಿಲ್ಲ. ಅವನು ತೀರ ಕಟುಕನಾಗಿದ್ದನು; ಕರುಣೆ ಅವನ ಬಳಿಗೆ ಸುಳಿಯದು. ನಾಗವೇಣಿಗೆ ಬಡತನ ಇನ್ನೂ ಭಯಂಕರವಾಯಿತು. ಯಾರು ಎಷ್ಟು ಕರೆದರೂ ತನ್ನ ಊರನ್ನು ಬಿಡುವವಳಲ್ಲ ಅವಳು. ಇನ್ನೊಬ್ಬರ ಹಂಗಿನ ಅನ್ನ ಅವಳಿಗೆ ನರಕವೆನಿಸಿತು. ತನ್ನ ಬಾಳನ್ನು ಸತ್ಯಭಾಮೆ ಸರಸೋತಿ ಯರ ಸೇವೆಗೆ ಸವೆಸಿದಳು. ಕೊಂಚಕಾಲದ ಮೇಲೆ ವಯಸ್ಸಾಗಿದ್ದ ಸರಸೋತಿಯು ತೀರಿಕೊಂಡಳು. ಜ್ವರದಿಂದ ಸತ್ಯಭಾಮೆಯೂ ಸತ್ತಳು. ನಾಗವೇಣಿ ತನ್ನ ಮಗನ ವಿದ್ಯಾರ್ಜನೆಗಾಗಿ ತಂದೆಯ ಮನೆಯನ್ನು ಸೇರಿದಳು. ತನ್ನ ಗಂಡನಂತೆ ತನ್ನ ಮಗನೂ ಆದರೆ ಏನುಗತಿ ಎಂಬ ಭೀತಿ ಅವಳಿಗೆ.

ಅಪ್ಪನ ಆರೈಕೆಯಲ್ಲಿ ಕೆಲವು ವರ್ಷಗಳು ಸಂದವು. ಮಗನು, ಅಜ್ಜನ ಹೆಸರನ್ನೇ ಹೊತ್ತಿದ್ದವನು, ಬುದ್ಧಿವಂತನಾಗಿ ಅವಳ ಮನಸ್ಸಿಗೆ ಹಿತವನ್ನು ತಂದನು. ತಾನು ಎಂದೋ ಕಲಿತುಬಿಟ್ಟ ಸಂಗೀತ ವನ್ನು ನಾಗವೇಣಿ ಎತ್ತಿಕೊಂಡು ಅದರಲ್ಲಿ ತನ್ನ ಬೇಸರವನ್ನು ಹಗುರಮಾಡಿಕೊಂಡಳು. ನೂರುಸಲ ನೊಂದ ಜೀವ ಕೊಂಚ ಸುಖವನ್ನು ಆಗ ಕಂಡಿತು. ಮಗನಿಗಾಗಿ ತನ್ನ ಬಾಳು ಎಂದು ಬಗೆದಳು. ಹೀಗೆ ಇರುತ್ತಿರಲು ಅವಳ ತಂದೆಯೂ ಸಾಯಬೇಕೆ? ಅಣ್ಣ ಸದಾಶಿವನ ಮನೆಯಲ್ಲಿ ಕೊಂಚಕಾಲ ಇದ್ದುದು ಅವಳಿಗೆ ಸಾಕಾಯಿತು. ಅಲ್ಲಿಂದ ತಾಯನ್ನು ಕರೆದುಕೊಂಡು ತಿರುಗಿ ತನ್ನ ಊರಿಗೆ ಬಂದಳು. ಅಲ್ಲಿ ಏನಿದೆ ತಿನ್ನಲಿಕ್ಕೆ? ಎದೆಗೆಡದ ಆಶಾವಾದಿಯಾದ ಅವಳು ಕಷ್ಟದಿಂದ ಬದುಕಿದಳು. ತಾಯಿಯೂ ಸಾವಿಗೆ ಒಕ್ಕಲಾಗಿ ನಾಗವೇಣಿಯು ಒಂಟಿಯಾದಳು, ಅನಾಥಳಾದಳು, ದಿಕ್ಕಿಲ್ಲ ದಾದಳು. ಚಿಕ್ಕಪ್ಪನ ನೆರವಿನಲ್ಲಿ ತನ್ನ ಊರಲ್ಲೇ ಇರುವ ಹಠವನ್ನು ತೊಟ್ಟಳು.

ಇತ್ತ ಅವಳ ಮಗ ರಾಮರಾವ್ ಮಂಗಳೂರಿನ ಓದನ್ನು ಮುಗಿಸಿಕೊಂಡು ಮದ್ರಾಸಿಗೆ ಹೋಗಿ ಬಿ.ಎ. ಕಲಿಯಲು ಆರಂಭಿಸಿದನು. ಅವನ ಅಗಲಿಕೆಯಿಂದ ನಾಗವೇಣಿಗೆ ಬಾಳು ಬರಿದಾದಂತೆ ಕಂಡಿತು. ಹುಡುಗನು ತನ್ನ ಓದಿಗೆ ಬೇಕಾದ ಹಣವನ್ನು ತಾನೇ ಸಂಪಾದಿಸಿ ತಾಯಿಗೂ ಕೊಂಚ ಕಳುಹಿಸುತ್ತ ಮುಂದಕ್ಕೆ ಬಂದನು. ಮದರಾಸಿನಲ್ಲಿಯೇ ಇದ್ದ ನಾಗವೇಣಿಯ ತಂಗಿ ಕೃಷ್ಣೆಯೂ ಅವಳ ಗಂಡ ಮಾಧವನೂ ರಾಮನಿಗೆ ನೆರವಾದರು. ಹೀಗೆ ಅವನು ಸ್ವಾವಲಂಬನೆಯನ್ನು ಕಲಿತು ಬಿ.ಎ. ಗೆ ಕಟ್ಟಿದನು. ಪರೀಕ್ಷೆ ಆಗುವುದರೊಳಗೆ ಉಪ್ಪಿನ ಸತ್ಯಾಗ್ರಹ ಪ್ರಾರಂಭವಾಗಿ ರಾಮನು ಆವೇಶಗೊಂಡು, ತನ್ನ ತಾಯ ಸಂಕಟ ಎಂಥದಿರಬಹುದೆಂಬುದನ್ನೂ ಲೆಕ್ಕಿಸದೆ ಸುಗ್ಗಿ ಕೈದಿಯಾಗಿ ವೆಲ್ಲೂರು ಜೈಲನ್ನು ಕಂಡನು. ಅವನನ್ನೇ ಸದಾ ಹಂಬಲಿಸುತ್ತ ಊರಲ್ಲಿದ್ದ ತಾಯಿಗೆ ಈ ಸುದ್ದಿ ಸಿಡಿಲಾಯಿತು. ಆಗ ಅವಳ ಸಂಕಟ ಕಡಲಿನಷ್ಟು ವಿಶಾಲವಾಯಿತು. ಮಗನು ತನ್ನನ್ನು ಕೈಬಿಡನು ಎಂಬೊಂದು ನಂಬಿಕೆ ಅವಳಿಗೆ ಅನ್ನವಾಗಿ ಬದುಕಿದಳು. ರಾಮನು ಜೈಲಿನಿಂದ ಹೊರಗೆ ಬಂದು ತನ್ನ ಕೆಲಸಕ್ಕೆ ತಾನೇ ನಾಚಿ ಓದು ಪೂರ್ತಿಯಾಗದೆ ತಾಯ ಬಳಿಗೆ ಧಾವಿಸಿದನು. ಮತ್ತೊಂದು ಸಲ ಮದ್ರಾಸಿಗೆ ಬಂದು ಬಿ.ಎ. ಗೆ ಕಟ್ಟಿ ಯಾವ ರಾಜಕೀಯದ ಅತಿರೇಕಕ್ಕೂ ಮನಸ್ಸುಕೊಡದೆ ಪರೀಕ್ಷೆಯಲ್ಲಿ ಗೆದ್ದನು.

ಇನ್ನು ಚಾಕರಿಹುಡುಕುವ ಅಲೆದಾಟ. ಎಲ್ಲಾದರೂ ಕೆಲಸಹಿಡಿದು ಅಮ್ಮನನ್ನು ಕರೆದು ತಂದು ಅವಳ ಕಷ್ಟದ ಹೊರೆ ಕಡಮೆಯಾಗುವಂತೆ ಮಾಡಬೇಕೆಂಬ ಸಂಕಲ್ಪ ಅವನಿಗೆ. ಆದರೆ ಎಲ್ಲೂ ಏನೂ ಅನುಕೂಲವಾದ ಕೆಲಸ ಸಿಕ್ಕದೆ ಊರಿಗೆ ಬರಿಗೈಯಲ್ಲಿ ಬಂದನು. ಅಲ್ಲಿಂದ ತನ್ನ ತಾತನ ಶಪ್ಪ ಶೀನಮಯ್ಯರ ಮಕ್ಕಳು ಬೆಂಗಳೂರಲ್ಲಿ ಇಟ್ಟಿದ್ದ ಹೊಟೇಲಿನಲ್ಲಿ ಇಪ್ಪತ್ತು ರೂಪಾಯಿ ವೇತನಕ್ಕೆ, ದಿನಕ್ಕೆ ಹದಿನಾರು ಹದಿನೆಂಟು ಗಂಟೆ ದುಡಿತಕ್ಕೆ, ಅವನು ಒಪ್ಪಿ ಹೋದನು, ಗತ್ಯಂತರ ಕಾಣಿಸದೆ. ಇನ್ನು ಆ ಚಾಕರಿಯ ಬವಣೆ ಅವನಿಗೆ. ಇತ್ತ ತನ್ನ ಕಷ್ಟದ ಬುತ್ತಿ ನಾಗವೇಣಿಗೆ. ರಾಮನು ಬೆಂಗಳೂರಲ್ಲಿ ನವೆಯುತ್ತ ತನ್ನ ತಾಯ ಬದುಕಿಗಾಗಿ ಬಂದ ಹಣದಲ್ಲಿ ಕೊಂಚವನ್ನು ಕಳಿಸುತ್ತ ಕಾಲಕಳೆದನು. ಒಂದುಸಲ ದಸರ ಕಾಲಕ್ಕೆ ಅವನು ಮೈಸೂರಿಗೆ ಬಂದನು. ಶಿವರಾಮ ಪೇಟೆಯ ಗಲ್ಲಿಯೊಂದರಲ್ಲಿ ಅವನ ತಂದೆ ಲಚ್ಚನ ದಿವ್ಯಭೇಟಿ ಅವನಿಗೆ ಆಯಿತು. ಅದರಿಂದ ಇಂಥವನ ಮಗನು ನಾನೆ, ಎಂಬ ನಾಚಿಕೆ ಮಾತ್ರ ಅವನಿಗೆ ಬಂದ ಲಾಭ. ಹೊಟೇಲಿನ ಬಾಳು ಇನ್ನು ಸಾಕೆಂದು ಕೆಲಸದ ಬೇಟೆಗೆ ಬೊಂಬಾಯಿಗೆ ಅವನು ತೆರಳಿದನು. ಅಲ್ಲಾದರೂ ಇವನಿಗಾಗಿ ನೌಕರಿ

ಕಾದಿಟ್ಟಿರುವವರು ಯಾರಿದ್ದಾರೆ? ತನ್ನ ಹಾಗೆಯೇ ನೂರಾರು ಜನರು ಆ ಪಟ್ಟಣಕ್ಕೆ ಬಂದು ಹಲವು ವರ್ಷಗಳು ಅಲ್ಲೇ ನಿಂತು ಪ್ರಯತ್ನಿಸಿದರೂ ಏನೂ ಸಿಕ್ಕದೆ ಹತಾಶರಾದವರು ಅಲ್ಲಿ ಎಷ್ಟು ಮಂದಿ ಇಲ್ಲ! ಅವರಲ್ಲಿ ರಾಮನೂ ಒಬ್ಬನಾದನು. ಕೈಯಲ್ಲಿ ಕೊಂಡುಹೋಗಿದ್ದ ಹಣ ಸವೆಯುತ್ತ ಬರಲು ಅಲ್ಲೇ ಸಂಗೀತ ಕಲಿಸುವ ಮನೆಮಾಸ್ತರನಾಗಿ ಜೀವದೇಹಗಳನ್ನು ಒಟ್ಟಿಗೆ ಇರಿಸುವುದಕ್ಕೆ ಎಷ್ಟುಬೇಕೋ ಅಷ್ಟು ಹಣವನ್ನು ಅವನು ಗಳಿಸಿದನು. ಸಂಗೀತ ಕಲಿಯುವ ಹುಡುಗಿಯರು ಮದುವೆಯಾಗಿ ಹೊರಟುಹೋದ ಮೇಲೆ ಅವನ ಹೊಟ್ಟೆಗೆ ಕಲ್ಲೇ ಆಹಾರವಾಯಿತು. ಅದೇ ಕಾಲದಲ್ಲಿ ಅವನು ನೋವಾ ಎಂಬ ಯೆಹೂದ್ಯ ಚಿತ್ರಗಾತಿಯಲ್ಲಿ ಚಿತ್ರಕಲೆಯ ಅಭ್ಯಾಸವನ್ನು ಮಾಡಿದನು. ಅದರಿಂದ ಹೊಟ್ಟೆಯೇನೂ ತುಂಬಲಿಲ್ಲ.

ಊರಲ್ಲಿ ನಾಗವೇಣಿ ಮಗನನ್ನು ಎದುರುನೋಡುತ್ತ ಸಾಕಷ್ಟು ಸಂಪಾದನೆ ದೊರಕಿದ ಮೇಲೆ ಅವನು ತನ್ನನ್ನು ಕರೆದುಕೊಂಡು ಹೋದಾನು ಎಂದು ದಾರಿಕಾಯುತ್ತಿದ್ದಳು. ಒಂದು ಸಲ ಮಳೆ ಸುರಿದು ಮನೆಯ ಗೋಡೆ ಬಿದ್ದು ಅದರಲ್ಲಿ ತನ್ನ ಮಾವ ಮಡಗಿದ್ದ ಸ್ವಲ್ಪ ಹಣ ಅವಳಿಗೆ ದೊರೆತದ್ದು ಅವಳಿಗೆ ದೇವರು ಕಳಿಸಿದ ಸಹಾಯವಾಯಿತು. ಈ ಸುದ್ದಿಯನ್ನು ಅವಳು ಮಗನಿಗೆ ತಿಳಿಸಿದಳು. ಬೇರೆ ದಿಕ್ಕುತೋರದಿದ್ದ ಅವನಿಗೂ ಇದರಿಂದ ಸಂತೋಷವಾಗಿ ಅವನು ಊರಿಗೆ ಹಿಂತಿರುಗಿದನು. ಅಲ್ಲಿಗೆ ಬಂದು ಇದ್ದ ನೆಲವನ್ನು ಅಗೆದು ಕೃಷಿಮಾಡಿ ತಾಯಿ ಮಗನಿಬ್ಬರೂ ಸೇರಿ ದುಡಿಯ ತೊಡಗಿದರು. ತಾಯಿಮಣ್ಣಿನ ಆಶ್ರಯವೇ ಅವರಿಗೆ ಮರಳಿ ದೊರೆಯಿತು. ರಾಮನು ತನ್ನ ಹಳ್ಳಿಯಲ್ಲಿಯೇ ಶಾಲೆಯ ಮಾಸ್ತರನಾಗಿ ತಿಂಗಳಿಗೆ ಹತ್ತು ರೂಪಾಯಿನ ವರಮಾನಕ್ಕೆ ತೃಪ್ತಿಪಡಬೇಕಾಯಿತು. ತನ್ನ ದುಡಿಮೆಯಿಂದ ಮರಳಿ ಹಣಗಳಿಸಿ ತಾತನ ಆಸ್ತಿಯನ್ನು ಬಿಡಿಸಿಕೊಂಡು ಅವನು ಮನೆಯನ್ನು ಉದ್ಧರಿಸಿದನು. ನೊಂದ ತಾಯಿಗೆ ಅಂದು ತನ್ನಿಂದ ಸಂದ ಆನಂದ ಅವನಿಗೆ ಚೆಂದವಾಯಿತು.

ಇದು ಕಥೆಯ ಹಾದಿ. ನಮ್ಮದು ಅವಸರದ ಪಯಣ. ಅಲ್ಲಲ್ಲಿ ನಿಂತುನೋಡುತ್ತ ಕಣ್ಣು ತೆರೆದರೆ ಕಥೆಯ ಉದ್ದಕ್ಕೂ ಹರಡಿರುವ ರಮ್ಯತೆಯನ್ನು ಎದುರುಗೊಳ್ಳುತ್ತೇವೆ. ರಾಮು ಐತಾಳರ ಎಳಗೂಸಿನಂಥ 'ಹೃದಯವೂ ಕಪಟವರಿಯದ ಅವರ ಮಾತುನಡತೆಗಳೂ ಮನಸ್ಸಿನಲ್ಲಿ ತುಂಬುತ್ತವೆ. ಸರಸೋತಿಯ ಸಹನೆ, ಅಣ್ಣನಿಗಾಗಿ ತನ್ನ ಬಾಳನ್ನು ತೇದ ನಿಸ್ಸ್ವಾರ್ಥತೆ, ತನ್ನ ನಾದಿನಿಯಲ್ಲಿ ಅವಳಿಗಿದ್ದ ಪ್ರೀತಿಯ ದಿವ್ಯತೆ, ಅದು ಅಭಿವ್ಯಕ್ತವಾಗುತ್ತಿದ್ದ ನೂರಾರು ರೀತಿಗಳು—ಇವೆಲ್ಲ ಅಂಥ ಜೀವ ಇನ್ನೊಂದು ಉಂಟೆ ಎನಿಸುವಂತಿದೆ. ಪಾರೋತಿ ಮಕ್ಕಳಿಲ್ಲದೆ ಕೊರಗಿ ಗಂಡನಿಗೆ ಬೇರೊಂದು ಮದುವೆಗೆ ಮಾತಿಲ್ಲದೆ ಅನುಮತಿಕೊಟ್ಟದ್ದು, ಮದುವೆಸಮಯದಲ್ಲಿ ಒತ್ತಿ ಬರುವ ಕಣ್ಣೀರನ್ನು ಒತ್ತರಿಸಿ ಸವತಿಯನ್ನು ತಂಗಿಯಂತೆ ಮನೆತುಂಬಿಸಿಕೊಂಡದ್ದು, ಮುಂದೆ ಲಚ್ಚನ ಅವತಾರವಾದ ಮೇಲೆ ಅವನನ್ನು ತನ್ನ ಹೊಟ್ಟೆಯ ಮಗನೆಂದೇ ಭಾವಿಸಿ ಹೆತ್ತತಾಯ್ಗಿಗಿಂತಲೂ ಹತ್ತುಮಡಿ ಮಮತೆಯನ್ನು ತೋರಿಸಿದ್ದು, ಮನೆಗೆ ಬಂದ ಸವತಿಯನ್ನು ಕಷ್ಟದ ಕೆಲಸಕ್ಕೆ ಬಿಡದೆ ತಾನೆ ಅವಳ ಸೇವೆ

ಯನ್ನು ಮಾಡಿದ್ದು, ತನ್ನ ಗಂಡನು ತನ್ನ ಸವತಿಯಲ್ಲಿ ತೋರಿಸುತ್ತಿದ್ದ ಆದರ ತನಗೆ ತತ್ಕಾಲಕ್ಕೆ ಕಟುವಾಗಿ ಕಂಡರೂ ಅದನ್ನು ಹೊರಕ್ಕೆ ತೋರಿಸದೆ ತನ್ನ ಮನಸ್ಸನ್ನು ತಿದ್ದಿಕೊಂಡದ್ದು, ಲಚ್ಚನು ಕಾರಣವಾಗಿ ಸವತಿ ಆಡಿದ ಸುಡುನುಡಿಗೆ ತನ್ನ ಮನಸ್ಸು ಬೆಂದರೂ ಅದನ್ನು ತಿರುಗಿ ತಿರುಗಿ ಮಾಯಿಸಿಕೊಂಡು ಐತಾಳರ ಸುಖವೇ ತನ್ನ ವೆಂದು ಭಾವಿಸಿದ್ದು—ಹೀಗೆ ಹತ್ತಾರು ರೀತಿಗಳಿಂದ ತನ್ನ ಮನಸ್ಸಿನ ಕ್ಷುದ್ರಭಾವನೆಗಳನ್ನು ಅದುಮಿ ತನ್ನ ಹೃದಯದ ರಮಣೀಯತೆಯನ್ನು ಕಾಣಿಸುತ್ತಿರುವ ಸಂದರ್ಭಗಳು ಗ್ರಂಥದಲ್ಲಿ ಹರಡಿವೆ. ಸಂಸಾರದ ಸಂಗ್ರಾಮದಲ್ಲಿ, ಬಡತನದ ವಿಮಾನದಾಳಿಯಲ್ಲಿ, ತನ್ನ ಪೌರುಷವನ್ನು ನಾಗವೇಣಿ ಪ್ರದರ್ಶಿಸಿದ ಅವೆಷ್ಟೋ ಕಥಾನಕಗಳು ಎಂಥವರಿಗಾದರೂ ಕರುಳನ್ನು ಕೊರೆಯುವುವು. ಲಚ್ಚನ ಬಾಳು ಹದಗೆಟ್ಟು ಅದರಿಂದ ಇತರ ಜೀವಗಳು ಕಂಗಾಲಾದ ಚಿತ್ರಗಳ ಸುರುಳಿ ಬಿಚ್ಚಿದಂತೆಲ್ಲಾ ಚಿತ್ತವೇಧಕವಾಗಿ ಹೊಸ ಸಂದರ್ಭಗಳನ್ನು ಚಾಚುತ್ತದೆ. ನಾಗವೇಣಿಯ ಸಾಹಸದ ಫಲವೋ ಎಂಬಂತೆ ಹುಟ್ಟಿದ ಅವಳ ಮಗನು ಬೆಳೆದು ಕಲಿತು ಕಷ್ಟಪಟ್ಟು ಆತ್ಮಗೌರವವನ್ನು ಸಂಪಾದಿಸಿ ಸ್ವಾವಲಂಬನೆಯ ಸೂತ್ರವನ್ನು ಹಿಡಿದು ತನ್ನ ಬಾಳಿನ ಗಾಳಿಪಟವನ್ನು ಎಲ್ಲರಿಗೂ ಕಾಣುವಂತೆ ಗಗನದಲ್ಲಿ ಹಾರಾಡಿಸುತ್ತಿರುವ ದೃಶ್ಯಮಾಲೆಗಳು ಅವೆಷ್ಟು ಸೊಗಸಾಗಿವೆ! ಕೊನೆಗೆ ಶೀನಮಯ್ಯರ ಉಪಾಖ್ಯಾನಗಳು, ಸೂರನ ಸ್ವಾಮಿಭಕ್ತಿ, ಬಚ್ಚಿಯ ಒಕ್ಕಲಿತಿಪ್ರೇಮ, ಮೊಗೇರಬೆಸ್ತನ ಮುಗ್ಧವಿನೋದ, ಸಾಕಿದ ದನಕರುಗಳ ಪ್ರೀತಿ—ಇವೇ ಮುಂತಾದ ಸಂದರ್ಭಗಳೆಲ್ಲ ಕಾದಂಬರಿಯ ಹೊನಲನ್ನು ಕೆರಳಿಸುವ, ಅಳಿಸುವ, ನಗಿಸುವ, ಸುಳಿಸುವ ತೆರೆಗಳು. ಇವೆಲ್ಲ ಎತ್ತಿ ತೋರಬಹುದಾದ ಅಂಶಗಳು. ಸಂಗ್ರಹದ ಕೊಲೆಗಾರಿಕೆಯಲ್ಲಿ ಇವು ಜೀವಂತವಾಗಿ ಕಾಣುವುದಿಲ್ಲ.

ಈ ಕಥೆಯಲ್ಲಿ ಕಾಣುವ ಪಾತ್ರಗಳು ಮನುಷ್ಯಸ್ವಭಾವದ ಸಣ್ಣಪ್ರದರ್ಶನ ಶಾಲೆಯನ್ನೇ ನಿರ್ಮಿಸಿವೆ. ಇಲ್ಲಿ ಬರುವ ಹೆಂಗಸರು ಅದೆಷ್ಟು ಚೆಲುವಿಕೆಯ ಚೈತನ್ಯಗಳೆಂಬುದು ಅನುಭವಿಸಿ ಸವಿಯಬೇಕಾದ ಅಂಶ. ರಾಮು ಐತಾಳರ ಮನೆದೇವರಂತಿದ್ದ ಸರಸೋತಿ ಹಳೆಯ ಸಂಸ್ಕೃತಿಯ ಉಚ್ಚಪ್ರತೀಕದಂತೆ ಚಿತ್ರಿತಳಾಗಿದ್ದಾಳೆ. ಚಿಕ್ಕಂದಿನಲ್ಲೆ ಗಂಡನನ್ನು ಕಳೆದುಕೊಂಡು ತನ್ನ ಮನೆಯಲ್ಲಿ ಇರಲೊಲ್ಲದೆ ಅಣ್ಣನ ಹತ್ತಿರ ಬಂದು ಸೇರಿದವಳು ಅವಳು. ತನ್ನ ದುಃಖವನ್ನು ತನಗೆ ಸಹಜವಾದ ವಿರಕ್ತಿಯಿಂದ ಗೆದ್ದವಳು. ಅಣ್ಣನ ಮನೆಯಲ್ಲಿ ಅವಳದೇ ಯಜಮಾನಿಕೆ. ಅವಳು ಇಲ್ಲದಿದ್ದರೆ ಆ ಮನೆವಾರ್ತೆ ನಡೆಯುವುದು ಕಷ್ಟ. ಹೆಚ್ಚು ಮಾತನ್ನು ಆಡುವ ಸ್ವಭಾವವಿಲ್ಲ. ಆದರೆ ಆಡಿದವೆಲ್ಲವೂ ಪರಿಣಾಮಕಾರಕವಾದವು. ಮಳೆ, ಬಿರುಗಾಳಿ, ಬಿಸಿಲು, ಸೆಕೆ,

ಬೆವರು, ಕೆಸರು, ಗೊಬ್ಬರ, ಆಸರು,—ಯಾವುದನ್ನಾದರೂ ಎದುರಿಸಿ ದುಡಿಯುವ ಚೈತನ್ಯ ಅವಳದು. ಉಪ್ಪಿನಕಾಯಿಗಾಗಿ ಅವಳು ಪಟ್ಟ ಶ್ರಮದ ಕತೆ ಒಂದೇ ಸಾಕು ನಿದರ್ಶನಕ್ಕೆ. ನಿಷ್ಠೆ, ಆಚಾರ, ಭಕ್ತಿ ಮುಂತಾದ ಆಸ್ತಿಕ ಗುಣಗಳಿಗೆ ಅವಳು ತೌರುಮನೆ. ಮೊದಲೇ ಶುದ್ಧ ಹೃದಯದ ಅವಳಿಗೆ ಇವು ಅನಾವಶ್ಯಕವೆಂದು ನಮಗೆ ಅನ್ನಿಸಿದರೂ ಹಿಂದಿನ ನಡವಳಿಕೆ ಹೋಗಬಾರದೆಂದು ಅವಳ ಎಣಿಕೆಯಿರುವಂತೆ ಕಾಣುತ್ತದೆ. ಮುದಿಯಾದರೂ ಕಣ್ಣು ಮಂಜಾದರೂ ಕೂತಲ್ಲೆ ಕಾಲು ಕುಸಿಯುವಂತಿದ್ದರೂ ಅವಳ ಸ್ಥಿರಸಂಕಲ್ಪ ಅವಳನ್ನು ಕಾಶೀಯಾತ್ರೆ ಮಾಡಿಸಿ ಕರೆದು ತಂದಿತು. ಅವಳ ಕಣ್ಣೆದುರೇ ಪಾರೋತಿಯ ಪ್ರಾಣ ಹಾರಿಹೋಯಿತು. ಅಣ್ಣಾನು ಅಸ್ತಮಿಸಿದನು; ಅಣ್ಣಾನ ಮಗ ಲಚ್ಚ ವಂಚಿಸಿ ಕೈಬಿಟ್ಟ. ಎಲ್ಲ ದುಃಖಗಳನ್ನೂ ಅನುಭವಿಸಿ ದೈವಚಿತ್ತವೆಂದು ನಂಬಿದ್ದ ಮಹಾಜೀವ ಅವಳದು. ಅವಳ ಮೇಲ್ಪಂಕ್ತಿಯಲ್ಲಿ ಬಾಳನ್ನು ಸಾಗಿಸಿದ ವ್ಯಕ್ತಿ ಪಾರೋತಿ; ತನ್ನಿಂದ ಗಂಡನಿಗೆ ಆದ ಮೂಕದುಃಖಕ್ಕೆ ಮಿತಿಯಿಲ್ಲವೆಂದು ಭಾವಿಸುವವಳು. ಸರಸೋತಿಯ ಆತ್ಮಶಕ್ತಿಯಲ್ಲಿ ತನ್ನ ಆತ್ಮಕ್ಕೆ ದೀಪ ಹಚ್ಚಿಸಿಕೊಂಡಳು. ದೈಹಿಕ ಮಾನಸಿಕ ಸಂಕಷ್ಟಗಳನ್ನು ಗಾಣದ ಎತ್ತಿನಂತೆ ಸಹಿಸಿಕೊಂಡು ಸಂಸಾರಕ್ಕೆ ಸುಖದ ಸ್ನೇಹವನ್ನು ಚೆಲ್ಲಿದ ಮಹಾಲಲಿತೆ ಅವಳು. ಮತ್ತೆ ಯಾರಾದರೂ ಆಗಿದ್ದರೆ ಐತಾಳರ ಎರಡನೆಯ ಮದುವೆಯನಂತರ ಆ ಮನೆಯನ್ನೇ ನರಕವಾಗಿ ಮಾಡುತ್ತಿದ್ದರೇನೋ? ಬಡತನದ ನರಕವಿದ್ದರೂ ಮನಸ್ಸಿನ ರೌರವವನ್ನು ಅವಳು ಸೃಷ್ಟಿಸಲಿಲ್ಲ. ಅವಳು ಸರ್ವಂಸಹೆ. ಅವಳು ಸಾಯುವ ದೃಶ್ಯ ಅವಳ ಹೃದಯದ ಪರಿಪಕ್ವತೆಯನ್ನು ಕಾಣಿಸುತ್ತದೆ. ತನ್ನ ಪ್ರಾಣ ಹೋಗುವಾಗ ಗಂಡನ ತೊಡೆಯ ಮೇಲೆ ತನ್ನ ತಲೆ ಇರಬೇಕೆಂದು ಬೇಡಿದಳು; ಅದೊಂದೇ ಅವಳ ಹಂಬಲ. ಮತ್ತೇನೂ ಬೇಕಿಲ್ಲವೆಂಬ ವೈರಾಗ್ಯ ಅವಳ ಮನಸ್ಸಿನಲ್ಲಿ ಮಡಲಿರಿದಿದೆ. ಇಂಥ ಜೀವಗಳನ್ನು ಕುಸುಮಿಸಿದ ಹಿಂದಿನ ಸಂಸ್ಕೃತಿ ಎಷ್ಟು ಸಾರವತ್ತಾದುದು! ಅವರನ್ನು ನಿರ್ಮಿಸಿದ ಕಲೆಯ ಪ್ರತಿಭೆ ಎಷ್ಟು ಮನೋಜ್ಞ!

ನಾಗವೇಣಿಯ ಪಾತ್ರ ಇವರಿಬ್ಬರಿಗಿಂತಲೂ ಒಂದು ಬಣ್ಣ ಮೇಲೆನ್ನಬಹುದು. ಅವಳು ತಕ್ಕಮಟ್ಟಿಗೆ ಓದಿದವಳು; ಕಲೆಯಲ್ಲಿ ಅಭಿರುಚಿಯನ್ನೂ ಪರಿಶ್ರಮವನ್ನೂ ಹೊಂದಿದ್ದವಳು. ಕೈಹಿಡಿದ ಗಂಡನಿಂದ ತನಗೊಂದು ಸ್ವರ್ಗವೇ ದಕ್ಕೀತೆಂಬ ಆಸೆಯಿಂದ ತುಂಬಿದವಳು, ಮದುವೆಯಾಗುವ ಎಲ್ಲ ಹೆಣ್ಣುಮಕ್ಕಳಂತೆ. ಅವಳು ಬಯಸಿ ಬಂದದ್ದು ಒಂದು, ಸಿಕ್ಕಿದ್ದು ವಿಷದ ಹಣ್ಣು. ಗಂಡನ ಪ್ರಥಮ ಸಮಾಗಮದಲ್ಲೇ ಅವಳಿಗೆ ಆಡಬಾರದ, ಅನುಭವಿಸಲಾರದ ಖಾಯಿಲೆಯ ಯಾತನೆ ಸಂಪ್ರಾಪ್ತವಾಯ್ತು. ಕೈಹಿಡಿದ ಗಂಡನೇ ಕೈಕೊಟ್ಟನು; ಅವನ ವಂಚನೆಗೆ ಬಲಿಯಾಗಿ ಇದ್ದುದನ್ನೂ

ಕಳೆದುಕೊಂಡಳು. ತನಗೆ ಆದರ್ಶವೂ ಆಶ್ರಯವೂ ಆಗಿದ್ದ ಹಿರಿಯ ಜೀವಗಳು ಆರಿಹೋಗಿ ಆಕೆಗೆ ಕತ್ತಲು ಕವಿಯಿತು. ತಂದೆಯೂ ಹೋದನು. ಅವಳಿಗೆ ದೇವರೊಬ್ಬನೆ ಆಶ್ರಯ. ಹಾಗೆಂದು ಕೈಕಟ್ಟಿ ಕುಳ್ಳಿರುವ ಜೀವವಲ್ಲ ಅವಳದು. ಪಟ್ಟಣದ ಬದುಕನ್ನು ಬಹುಬೇಗ ಮರೆತು ಹಳ್ಳಿಯ ಕಷ್ಟವನ್ನು ಕಟ್ಟಿಕೊಂಡು ಉಳುವುದು, ಅಗೆ ನೆಡುವುದು, ಚಾಪೆ ಹೆಣೆಯುವುದು, ಕೆಸರು ತುಳಿಯುವುದು, ತೆನೆ ಕೊಯ್ಯುವುದು, ದನಗಳ ಶುಶ್ರೂಷೆಮಾಡುವುದು—ಮುಂತಾದ ಎಲ್ಲ ಕಾರ್ಯಗಳನ್ನೂ ಅವಳೇ ನಿರ್ವಹಿಸಿದಳು. ಮಾಡದಿದ್ದರೆ ಹೊಟ್ಟೆ ಕೇಳುವುದಿಲ್ಲ. ರೋಸಿಹೋದ ಅವಳ ಜೀವಕ್ಕೆ ಸಾಯೋಣವೆಂದರೆ ನೀರೂ ಆಚೆಗೆ ತಳ್ಳಿತು. ಇದಾದಮೇಲೆ ಅವಳು ಬದುಕಿನ ಮರ್ಮವನ್ನು ಕಂಡಂತೆ ಕಾಣುತ್ತದೆ. ಜೀವನವು ಒಂದು ಸಂಗ್ರಾಮ. ಒಂದುಕಡೆ ಪ್ರಕೃತಿಯ ಸ್ವೈಷ್ಟ್ರಾರ್ಯ ರೋಗರುಜನಗಳೊಡನೆ ಹೆಣಗಾಡಿ ಆದಷ್ಟು ಕಸಿದು ತಿನ್ನುವ ಕಷ್ಟ. ಜೊತೆಗೆ ಮನಸ್ಸಿನ ಹೋರಾಟಗಳು, ಮನುಷ್ಯರ ನಡತೆ ಕಾರಣವಾಗಿ. ಈ ಒಳಯುದ್ಧದಲ್ಲಿ ಅವಳು ಪಟ್ಟ ಯಾತನೆ ಹೊರಯುದ್ಧದಲ್ಲಿ ಕಂಡ ಕಷ್ಟಕ್ಕಿಂತ ಹಿರಿದು. ಪ್ರಕೃತಿಯಾದರೂ ಒಂದೊಂದು ಸಲ ಒಲಿದೀತು, ಮನುಷ್ಯಪ್ರಯತ್ನವನ್ನು ಕಂಡು, ಕರುಣೆಯಿಂದ. ತನ್ನ ಗಂಡನು ಎಂದೂ ಒಲಿಯಲಾರ, ಮಿದುಮಾತಾಡಲಾರ, ಸಂತೈಸಲಾರ, ಕಷ್ಟಕ್ಕೆ ನೆರವಾಗಲಾರ. ಅವನಿಗಿಂತಲೂ ತನ್ನ ದನಕರುಗಳೇ ಮೇಲೆಂದು ಅವಳಿಗೆ ಅನ್ನಿಸುತ್ತದೆ. ಈ ಕಷ್ಟಪಡುವುದೆಲ್ಲ ಯಾತಕ್ಕಾಗಿ? ಈ ಹೋರಾಟದಲ್ಲಿ ಫಲವಿಲ್ಲ ಎಂದು ಬಗೆದವಳಲ್ಲ ಅವಳು. ಅದರಲ್ಲಿಯೇ ಜೀವ ಮಾಗುತ್ತದೆ, ರಸ ತುಂಬುತ್ತದೆ ಎಂಬ ಅಶಾವಾದಿ ಆಕೆ. ಇಂಥ ಪಾತ್ರ ಬದುಕಿನಲ್ಲೂ ಸಾಹಿತ್ಯದಲ್ಲೂ ದೊರೆಯುವುದು ವಿರಳ. ವಾಸ್ತವಿಕ ಲೋಕದಲ್ಲಿ ಶ್ರೀ ಕಾರಂತರು ಕಂಡಿರಬಹುದಾದ ಒಂದು ವ್ಯಕ್ತಿ ನಾಗವೇಣಿಯ ಪಾತ್ರರಚನೆಯಲ್ಲಿ ಆದರ್ಶೀಕೃತವಾಗಿ ಹೃತ್ಸೌಂದರ್ಯದಿಂದ ಬೆಳ್ಳಿಯಂತೆ ಬೆಳಗುತ್ತಿದೆ.

ರಾಮ ಐತಾಳರಲ್ಲಿ ತೆರೆಮರೆಯಿಲ್ಲದ ಮನಸ್ಸೊಂದನ್ನು ಶ್ರೀ ಕಾರಂತರು ಚಿತ್ರಿಸಿದ್ದಾರೆ. ಆ ಪಾತ್ರದ ಮಾಟದಲ್ಲಿ, ಮಾತಿನಲ್ಲಿ ಒಂದೊಂದು ಸಲ ಅವರು ಹಾಸ್ಯದ ಲಹರಿಯನ್ನು ಚಿಮ್ಮಿಸುತ್ತಾರೆ. ಆ ಹಾಸ್ಯ ಕರುಣೆಯಿಂದ ಬಂದದ್ದು. ಮೈಗೆಲ್ಲ ಕೆಸರು ಮೆತ್ತಿಕೊಂಡ ಐತಾಳರ ವರ್ಣನೆ ಒಂದು ಉದಾಹರಣೆ. ಐತಾಳರು ಹಿಂದಿನ ಸಂಪ್ರದಾಯಕ್ಕೆ ಸೇರಿದವರು. ವ್ಯವಹಾರಕ್ಕೆ ಬೇಕಾದ ಓದುಬರಹ, ಉದರಭರಣಕ್ಕೆ ಬೇಕಾದ ಜೋಯಿಸಮಂತ್ರಗಳು—ಅವರ ಬುದ್ಧಿಯ ಸಂಪತ್ತು ಇಷ್ಟೇ. ಮನಸ್ಸಿನ ಸಂಪತ್ತು ಮಾತ್ರ ಅಧಿಕ. ಮನೆನಡವಳಿಕೆಯಲ್ಲಿ ಅವರದೇ ಒಂದು ಬಿಗಿಯಿತ್ತು. ತಮ್ಮ ಮನಕ್ಕೆ ಬಂದುದನ್ನು ಮಾಡುವವರೆಗೆ ಅಥವಾ ಅದಕ್ಕೆ ಒಂದು ರೂಪ

ಕೊಡುವವರೆಗೆ ಅದರ ಪೂರ್ವವನ್ನು ಮನೆಯವರಿಗೂ ತಿಳಿಯಗೊಡರು. ದತ್ತು ತೆಗೆದುಕೊಳ್ಳಬಾರದೆಂದು ನಿರ್ಧರಿಸಿ ಅವರು ಬೇರೊಂದು ಮದುವೆಗೆ ಏರ್ಪಾಡು ಮಾಡಿದ ವಿಷಯ ತಂಗಿಗಾಗಲಿ ಹೆಂಡತಿಗಾಗಲಿ ತಿಳಿಯದು. ಇದರಿಂದ ಅವರಿಗೆ ಮನಸ್ಸು ನೊಂದೀತೆಂದು ಅವರಿಗೆ ತೋರಲಿಲ್ಲ. ಮೂರು ದಿವಸ ಹೊರಗೆ ಹೋಗಿದ್ದವರು ಮನೆಗೆ ಬರುವವೇಳೆಗೆ ತಂಗಿ ಮನೆಯಿಂದ ಮಂದರ್ತಿಗೆ ಹೊರಟುಹೋದಳೆಂಬುದು ತಿಳಿದುಬಂದು ತಾವು ಮಾಡಿದ್ದು ತಪ್ಪೆಂದು ಗೊತ್ತಾದ ಕೂಡಲೇ ನೇರವಾಗಿ ತಂಗಿಯ ಮನೆಗೆ ಹೋಗಿ ಆಕೆಯನ್ನು ಒಪ್ಪಿಸಿ ಕರೆತರುತ್ತಾರೆ. ಇದು ಅವರು ಕೆಲಸಮಾಡುವ ರೀತಿ. ತಮ್ಮ ಯೋಚನೆಗಳನ್ನು ಇತರರಿಗೆ ಹೇಳಬಾರದೆಂಬ ಹಠ ಅವರಿಗಿಲ್ಲ. ಅವಶ್ಯವಿದ್ದರೆ ಹೇಳಲು ಹಿಂಜರಿಯುವುದಿಲ್ಲ. ಮನೆಯಲ್ಲಿ ಹೆಂಗಸರು ಕಸಕ್ಕಿಂತ ಕಡೆ ಅವರ ದೃಷ್ಟಿಯಲ್ಲಿ ಎಂದು ತೋರಲೂಬಹುದು, ಅವರ ಚರಿತದಿಂದ. ಅದು ಅವರು ಬೆಳೆದುಬಂದ ಸಂಪ್ರದಾಯದ್ದು. ಅವರಲ್ಲಿ ಹುರುಡಿನ ಸ್ವಭಾವವುಂಟು. ತಮ್ಮಿಂದ ಸಾಲ ಬೇಡಿದ ಶೀನಮಯ್ಯನು ತನ್ನ ಮನೆಗೆ ಹೆಂಚನ್ನು ಹೊದಿಸಿದ್ದನ್ನು ಕಂಡು 'ನಾನು ಏನು ಕಡಮೆ, ನನ್ನ ಮನೆಯನ್ನು ತಾಜಮಹಲ್ ಆಗಿಸನೆ' ಎಂಬ ಸ್ಪರ್ಧೆ ಅವರದು. ಶೀನಮಯ್ಯನಲ್ಲಿ ಅವರಿಗೆ ತಿರಸ್ಕಾರ, ಅನ್ನಮಾರಿ ಅವನ ಮಕ್ಕಳು ಹಣ ಗಂಟುಹಾಕುತ್ತಾರೆಂದು. ಬರಬರುತ್ತ ತಮಗೂ ಅವನಿಗೂ ಮಾತುನಿಂತು ಹಗೆತನ ಇಬ್ಬರನ್ನೂ ಪ್ರತ್ಯೇಕಿಸುತ್ತದೆ. ಆದರೆ ತಾವು ಸಾಯುವ ಗಳಿಗೆಯಲ್ಲಿ ನೋಡಲು ಬಂದ ಶೀನಮಯ್ಯನಿಗೆ ಅವರಾಡುವ ಮಾತುಗಳು ಅವರ ಮನಸ್ಸಿನ ನಿಷ್ಕಳಂಕತೆಗೆ ಸಾಕ್ಷಿಯಾಗಿವೆ. ಅವರು ಜಿಪುಣರಲ್ಲ, ಮಿತವ್ಯಯಿಗಳು. ಆದರಿಂದ ಇದ್ದುದರಲ್ಲಿ ತೃಪ್ತಿಹೊಂದಿ ಮಕ್ಕಳಿಗೂ ಮುಂದೆ ಅನುಕೂಲಪಡಿಸುವಂತಾಯಿತು. ಹಿಂದಿನ ಸಂತತಿಗೆ ಸೇರಿದ ಹಲವು ಜೀವಗಳು ಇವರಂತೆ ಬದುಕುತ್ತಿದ್ದುವು. ರಾಮಐತಾಳರು ಈ ತಲೆಮಾರಿಗೆ ಮಾದರಿ.

ಲಚ್ಚನಂಥ ಪ್ರಾಣಿಗಳು ಲೋಕದಲ್ಲಿ ಅತಿಸಂಭವವಾದರೂ ಅವನು ಒಂದು ಮನಶ್ಶಾಸ್ತ್ರದ ಸಮಸ್ಯೆಯಾಗಿದ್ದಾನೆ. ಅವನು ಕೆಟ್ಟದ್ದಕ್ಕೆ ಕಾದಂಬರಿಯಲ್ಲಿ ಸಾಕಷ್ಟು ಕಾರಣಗಳನ್ನು ನವುರಾಗಿ ಬಿಡಿಸಿ ತೋರಿಸಿದ್ದರೂ ಅದರ ಸತ್ಯತೆಯ ಬಗ್ಗೆ ಪೂರ್ಣ ನಂಬಿಕೆ ಬರುವಂತಿದ್ದರೂ ಅವನು ಯಾಕೆ ಹಾಗಾದನು ಎಂದು ಪ್ರಶ್ನಿಸಿ ಉತ್ತರಕ್ಕೆ ಚಿಂತಿಸಬೇಕಾಗುತ್ತದೆ. ಹಿರಿಯರ ಮೇಲೆ ಅವನಿಗೆ ಅಷ್ಟು ದ್ವೇಷ ಬರುವುದಕ್ಕೆ ಎಳವಯಸ್ಸಿನಲ್ಲಿಯೇ ಮೊದಲಾಯಿತು. ಕೂಸುತನದಲ್ಲಿ ದೊಡ್ಡಮ್ಮನ ಅತಿ ಆದರ ತಾಯಿವಿಷಯದಲ್ಲಿ ಅನಾದರಕ್ಕೆ ಕಾರಣವಾಯಿತು. ಅಜ್ಜನ ಮನೆಯಲ್ಲಿ ಅವನು ಓದಲಿಕ್ಕೆ ಹೋಗಿ ನಿಂತಾಗ ನಂಬಿಸಿ ಕರೆತಂದಿದ್ದ ತಂದೆತಾಯಿಗಳು ಅವನನ್ನು

ಅಲ್ಲಿಯೇ ಬಿಟ್ಟು ಹೊರಟುಹೋದದ್ದು ಅವನಲ್ಲಿ ಅವರು ವಂಚಕರೆಂಬ ಭಾವನೆಯನ್ನು ಮೊಳೆಯಿಸಿತು. ಅವನ ಅಜ್ಜಅಜ್ಜಿಯರ ಮಿತಿಯಿಲ್ಲದ ಲಾಲನೆ ತಂದೆಯ ವಿಷಯದಲ್ಲಿ ತಿರಸ್ಕಾರವನ್ನು ಹುಟ್ಟಿಸಿತು. ಹರೆಯಕ್ಕೆ ಕಾಲಿಟ್ಟ ಮೇಲೆ ಅವನ ತಂದೆಯ ಕಡುವೈರಿಯಾದ ಶೀನಯ್ಯನ ಉಪದೇಶ ಅವನ ಬುದ್ಧಿಯನ್ನು ಸಂಜಿನ ಚೀಲವಾಗಿಸಿತು. ಉಪಾಧ್ಯಾಯರ ಹೊಗಳಿಕೆಯಿಂದ ಅವನಿಗೆ ತಾನು ಮಹಾ ಬುದ್ಧಿವಂತನೆಂಬ ಗರ್ವ ಬಂದು ತಂದೆ ಏನೂ ತಿಳಿಯದವನೆಂಬ ಔದಾಸೀನ್ಯವೂ ಉಂಟಾಗಿರಬಹುದು. ವಂಚನೆಯಿಂದ ಕಾರ್ಯಸಾಧನೆ ಆಗುತ್ತದೆಂದು ಅವನು ಪಾಠ ಕಲಿತುದು ಚಿಕ್ಕವಯಸ್ಸಿನಲ್ಲೇ ನಡೆಯಿತು. ಓದುವಾಗ ಅಪ್ಪನಿಂದಲೂ ಅಜ್ಜನಿಂದಲೂ ಅವರವರಿಗೆ ತಿಳಿಸದಂತೆ ಹಣ ತರಿಸಿಕೊಂಡನು. ಈ ವಂಚನೆ ಅವನ ಮುಂದಿನ ಬದುಕಿನಲ್ಲಿ ಇತರರ ಕೊರಳು ಕೊಯ್ಯುವುದಕ್ಕೆ ಸಾಧನವಾಗುತ್ತದೆ. ತಂದೆ ಜಿಪುಣನೆಂದೂ ತಂಗಿಯ ವಿಷಯವಾಗಿ ಅಧಿಕ ಪಕ್ಷಪಾತ ತೋರಿಸುತ್ತಿದ್ದನೆಂದೂ ಅವನ ಬುದ್ಧಿಗೆ ತೋರುತ್ತದೆ. ಇಂಥ ಅನೇಕ ಸಂಗತಿಗಳನ್ನು ಇವನ ಸ್ವಭಾವದ ಬೆಳವಣಿಗೆಯಲ್ಲಿ ತಂದು ಶ್ರೀ ಕಾರಂತರು ನಂಬಿಕೆ ಬರುವಂತೆ ರಚಿಸಿದ್ದಾರೆ. ಅವರ ಮನೋವಿಶ್ಲೇಷಣಶಕ್ತಿ ಆಶ್ಚರ್ಯಕರವಾಗಿದೆ. ಮುಂದಕ್ಕೆ ಅವರು ಲಚ್ಚನಿಗೆ ದುಷ್ಟಸಹವಾಸವನ್ನು ಒದಗಿಸುತ್ತಾರೆ. ಇದರಿಂದ ಲಚ್ಚನು ಯೌವನದ ಬಾಯಾರಿಕೆಗೆ ಬಲಿಯಾಗಿ ತನ್ನ ಬಾಳಿಗೆ ಬೇನೆಯನ್ನು ತಂದುಕೊಂಡನು. ಅದು ಕೆಂಡದಂತೆ ಸೋಕಿದವರನ್ನೂ ಸುಟ್ಟಿತು. ಕಾಮಸಂತೃಪ್ತಿಗೆ ಬೇಕಾದ ಹಣಕ್ಕಾಗಿ ಅವನು ಏನುಮಾಡಲೂ ಹೇಸಲಿಲ್ಲ; ತಂದೆಯ ಮಡಗಿದ್ದ ಹಣವನ್ನೂ ಕದ್ದನು. ಒಂದೆರಡು ಕಡೆ ನೌಕರಿಯಲ್ಲಿದ್ದಾಗ ಲಂಚಕ್ಕೂ ಕೈಯೊಡ್ಡಿದನು. ನೌಕರಿ ಹೋಯಿತು, ಕಾಮಲಾಲಸೆ ಇಂಗಲಿಲ್ಲ. ಅವನು ಸಂಪಾದಿಸಿದ ಕಾಯಿಲೆ ಕಾಮವನ್ನು ಶಾಂತಿಯಲ್ಲಿಡುವಂಥದೂ ಆಗಿರಲಿಲ್ಲ. ಹಣಕ್ಕಾಗಿ ಹೆಂಡತಿಯಲ್ಲಿ ತೋರಿಕೆಯ ಪ್ರೇಮ. ಅದು ದೊರೆತ ಗಳಿಗೆ ಅವಳನ್ನೂ ನೂಕಿ ಓಡುವನು. ಮೇಲಾಗಿ ಮರುದಿನ ಬೆಳಗ್ಗೆಯೇ ಸಾವಿರಗಟ್ಟಲೆ ಹಣವನ್ನು ಸಂಪಾದಿಸಿಯೇನೆಂಬ ಬಣನಂಬಿಕೆ ಅವನಿಗೆ. ಇದಕ್ಕಾಗಿ ಕುದುರೆಯ ಜೂಜು, ಇಸ್ಪೀಟು ಆಟ, ಹೊಟೇಲಿನ ಸ್ಥಾಪನೆ. ಬಂದ ಹಣ ಕಾಮದ ಕುತ್ತಿಗೆ ವಿನಿಯೋಗ. ಇವನ ದುಷ್ಟತನ ಚಿಂತಿಸಿದಷ್ಟೂ ಸಾಂದ್ರವಾಗಿ ಕಾಣುತ್ತದೆ. ಶ್ರೀ ಕಾರಂತರು ಈ ಪಾತ್ರದ ಸ್ವಭಾವವನ್ನು ಅತಿ ಸೂಕ್ಷ್ಮವಾಗಿ ವಿಭಜಿಸಿದ್ದಾರೆ. ಒಟ್ಟುಗೂಡಿಸಿದರೆ ಒಂದು ದುಷ್ಟಮನಸ್ಸಿನ ಪೂರ್ಣಚಿತ್ರ ಲಭಿಸುತ್ತದೆ. ಆದರೂ ಅದು ಒಂದು ಸಮಸ್ಯೆಯಾಗಿಯೂ ಉಳಿದಿದೆಯೆಂದು ಅನ್ನಿಸುತ್ತದೆ. ಅವನ ಸ್ವಭಾವದಲ್ಲಿ ಅಷ್ಟು ಸ್ಥೈರ್ಯ ತನಗೆ ಸೇರಿದವರ ಸಂಬಂಧದಲ್ಲಿ ಇದ್ದಿತಾದರೂ ಅವನಿಗೂ

ಬೇಕಾದವರು ಕೆಲವರಾದರೂ ಇದ್ದರಲ್ಲ. ತನ್ನ ಸಧರ್ಮನಾದ ಒರಟನಲ್ಲಿ ಅವನಿಗೇನಾದರೂ ಸ್ನೇಹಭಾವಗಳು ಇದ್ದಿರಬೇಕಲ್ಲವೆ? ಅದೂ ಕೂಡ ನಟನೆಯ ದೋಸ್ತಿಯೊ? ತನ್ನ ಪಾಪದ ಒಡನಾಡಿಗಳಲ್ಲಿ ಅವನಿಗೆ ಮಧುರಭಾವಗಳಿದ್ದ ಪಕ್ಷದಲ್ಲಿ ಒಮ್ಮೆಯಾದರೂ ತನ್ನ ಹೆಂಡತಿಗೆ ತಾನು ಮಾಡಿದ ಅನ್ಯಾಯವನ್ನು ಕುರಿತು ಆ ಮಧುರ ಭಾವಗಳು ಅವನನ್ನು ಮರುಗಿಸಲಿಲ್ಲವೆ? ಮಿತ್ರರಲ್ಲಿದ್ದ ಪ್ರೀತಿ ತನ್ನ ಸ್ವರೂಪವನ್ನು ಅವನ ಹೃದಯಕ್ಕೆ ಕೊಂಚವಾದರೂ ತೋರಿಸದಿರುವುದು ಅಸಂಭವ. ಪ್ರೀತಿ ಕಪ್ಪೋ ಬಿಳುಪೊ ಎಂಬಷ್ಟನ್ನಾದರೂ ಅವನು ಬಲ್ಲವನಿರಬೇಕು. ಹಾಗಿದ್ದರೆ ಅವನಲ್ಲಿ ನಿರಂತರವಾದ ನಿರ್ದಯೆ ಇರಲು ಸಾಧ್ಯವೆ? ತನ್ನನ್ನೇ ಅರಸಿಕೊಂಡು ಬಂದ ಮಗನನ್ನು ನೋಡಿದ ಮೇಲೂ ಅವನನ್ನು ಸ್ವಲ್ಪವಾದರೂ ಪಶ್ಚಾತ್ತಾಪ ನೋಕಲಿಲ್ಲವೆ? ಇದೇ ಮುಂತಾದ ಪ್ರಶ್ನೆಗಳು ಈ ಪಾತ್ರದ ವಿಷಯದಲ್ಲಿ ಬರುತ್ತವೆ.

ತಂದೆಗೆ ತೀರ ವಿರುದ್ಧವಾದ ಸ್ವಭಾವದ ಮಗನು ರಾಮರಾವ್ ಐತಾಳ. ಇದಕ್ಕೆ ಮುಖ್ಯಕಾರಣ ಅವನ ತಾಯಿ ನಾಗವೇಣಿ ಎನ್ನಬಹುದು. ಅವಳ ದಿಟ್ಟತನ ಸ್ವಾವಲಂಬನೆ, ಸ್ವಾತಂತ್ರ್ಯ ಪ್ರಾಮಾಣಿಕತೆಗಳೆಲ್ಲ ಮಗನಿಗೂ ಬಂದುವು. ಹುಟ್ಟಿದುದಿನಿಂದ ತಂದೆಯ ಮುಖವನ್ನು ಅವನು ಕಾಣದಿದ್ದುದು ಅವನಿಗೆ ಒಳ್ಳೆಯದೇ ಆಯಿತು. ತನ್ನ ತಾಯಿಯ ಗುಣ ತನಗೆ ಆದರ್ಶವಾಗಿತ್ತು. ಹಿರಿಯರಾದ ಸರಸೋತಿ ಸತ್ಯಭಾಮೆಯರನ್ನು ತನ್ನ ತಾಯಿ ಭಕ್ತಿಯಿಂದ, ಪ್ರೀತಿಯಿಂದ ಸೇವೆಮಾಡುತ್ತಿದ್ದುದನ್ನು ಕಂಡು ಎಳವಯಸ್ಸಿನ ರಾಮನಿಗೂ ಅದು ಮನಸ್ಸಿನಲ್ಲಿ ನಾಟಿರಬೇಕು. ಅವನು ತಾಯ ಕಷ್ಟವನ್ನು ಕಣ್ಣಾರ ಕಂಡವನು; ಕಷ್ಟದಲ್ಲಿ ಬೆಳೆದವನು. ತಂದೆಯ ಹಾಗೆ ಮೋಜಿನಿಂದ ಇಕ್ಕಡೆಗಳಿಂದಲೂ ಹಣ ಕಿತ್ತು ತಿಂದು ಬಾಳುವ ಸುಖಜೀವಿಯಲ್ಲ ಅವನು. ನಂಬಿದವರಿಗೆ ವಂಚನೆಯನ್ನು ಉಣಿಸದೆ ವಿದ್ಯಾಭ್ಯಾಸಮಾಡಿ ಕೃತಜ್ಞತೆಯ ಮೂರ್ತಿಯಾಗಿ ತಾನು ಮನುಷ್ಯನಾಗುತ್ತಾನೆ. ತನ್ನ ತಾಯಂತೆಯೇ ಅವನು ಭಾವಜೀವಿ. ಅವನು ತಾಯ ಕೈಮೇಲೆ ಬೆಳೆದ ಮಗ. ತಾನು ಪರೋಕ್ಷದಲ್ಲಿದ್ದರೂ ತಾಯ ಮಾನಸಿಕ ಪೂಜೆಯಲ್ಲಿ ನಿರತನಾಗಿದ್ದ ಏಕಲವ್ಯ; ವೀರಕುವರ.

ಅಮುಖ್ಯ ಪಾತ್ರಗಳಲ್ಲಿ ಹಲವು ತಮ್ಮ ಸ್ವಭಾವ ಸರಳತೆಯಿಂದ ಮನಸ್ಸಿನಲ್ಲಿ ಸದಾ ನಿಲ್ಲುವ ಯೋಗ್ಯತೆಯುಳ್ಳುವಾಗಿವೆ. ಅವುಗಳಲ್ಲಿ ಮೊದಲನೆಯ ಸ್ಥಾನ ಆ ಬಡ ಬಚ್ಚಿಯ ಪ್ರೀತಿಯ ಐಶ್ವರ್ಯಕ್ಕೆ ಸಲ್ಲುತ್ತದೆ. ನಾಗವೇಣಿಯ ತಂಗಿ ಕೃಷ್ಣಿ ತನ್ನ ಅಕ್ಕನ ಸ್ವಭಾವದ ಒಂದು ಪಾಲನ್ನು ಹಂಚಿಕೊಂಡೇ ಹುಟ್ಟಿದವಳು. ಅವಳ ಔದಾರ್ಯ ಆದರಣೆಗಳು ರಾಮನಿಗೆ ಮದರಾಸಿನಲ್ಲಿ ಕಲ್ಪವೃಕ್ಷ. ಸುಬ್ರಾಯ ಉಪಾಧ್ಯರ ಮುದಿತಾಯನ್ನು, ಹಿಂದಿನ ತಲೆಮಾರಿಗೆ ಸಹಜವಾದ ಅಕ್ಕರೆಯ

ಗಣಿಯನ್ನು, ಮರೆಯಲು ಸಾಧ್ಯವಿಲ್ಲ. ಒಂದೊಂದು ಕಾದಂಬರಿಯನ್ನು ವಿಶಾಸಲಿಟ್ಟು ವಿಸ್ತರಿಸಬಹುದಾದ ಸತ್ವಾತಿಶಯ ಈ ಪಾತ್ರಗಳಲ್ಲುಂಟು.

ಉಳಿದ ಗಂಡು ಪಾತ್ರಗಳಲ್ಲಿ ಶೀನಮಯ್ಯನು ಕೊಂಚ ಕಾದಂಬರಿಯಲ್ಲಿ ಸ್ಥಳ ಆಕ್ರಮಿಸಿದ್ದಾನೆ. ಅವನು ಹಳ್ಳಿಯ ತಂಟೆ ತಕರಾರುಗಳಿಗೆ ತತ್ತಿಯ ಕೋಳಿ. ಅವನು ಹಾಕಿದ ಮೊಟ್ಟೆಗಳು ಮರಿಗಳಾಗಿ ಬಲಿತು ಊರನ್ನು ತಿಪ್ಪೆಯಾಗಿ ಕೆದರ ಬಲ್ಲವು. ಅವನಿಗೆ ಆಡಂಬರ ಹೆಚ್ಚು. ಕಾರ್ಯನಿರ್ವಹಣದಲ್ಲಿ ಸಮರ್ಥನಾದರೂ ಅವನ ಯಜಮಾನಿಕೆ ಚೇಳಿನ ಪಾರುಪತ್ಯ. ಊರಲ್ಲಿದ್ದ ತುಂಡು ಜಮೀನುಗಳನ್ನೆಲ್ಲ ಕೊಂಡು ತನ್ನ ಘನತೆಯನ್ನು ಹೆಚ್ಚಿಸಿಕೊಂಡೆನೆಂದು ನಂಬಿದವನು. ಶ್ರೀಮಂತರ ಹುಚ್ಚಾಟಗಳು ಅವನಿಗೆ ಅಪರಿಚಿತವಲ್ಲ. ಹೊಗಳಿಕೆಯಿಂದ ಕೆಲಸ ಸಾಧಿಸಬಹು ದೆಂದು ತಿಳಿದಿದ್ದವನು ಅವನು. ಹಳ್ಳಿಯ ಬದುಕನ್ನು ಇಂಥ ಕೆಲವರು ವ್ಯಕ್ತಿಗಳು ಹಸಗೆಡಿಸುತ್ತಿರುವ ರೀತಿಗೆ ಇವನು ನಿದರ್ಶನ. ಕಷ್ಟಕ್ಕೆ ಒದಗುವ ಮನುಷ್ಯ ನಾರಾಯಣಯ್ಯ. ಅವನ ಸ್ವಭಾವ ಮಧುರ. ಅವನಿಲ್ಲದಿದ್ದರೆ ನಾಗವೇಣಿಯನ್ನು ವಿಚಾರಿಸುವವರಾರು? ಜ್ವರ ಬೀಸಿ ಬಂದು ಸತ್ಯಭಾಮೆಯನ್ನು ಸಾಯಿಸಿ ನಾಗವೇಣಿ ಮಗರಾಮರನ್ನು ತಬ್ಬಿಕೊಂಡಾಗ ಅವರ ಸೇವೆಗೆ ಕರೆಯದೆ ಬಂದು ನಿಂತ ವ್ಯಕ್ತಿ ಅವನು. ವಾಸುದೇವಯ್ಯನವರು ಸಂಭಾವಿತರು; ಪ್ರಪಂಚವನ್ನು ಕೊಂಚ ಬಲ್ಲವರು. ತನ್ನಳಿಯ ತಾನು ಕೆಟ್ಟು ಮಗಳನ್ನೂ ಕೆಸರಿಗೆ ತಳ್ಳಿದಾಗ ಅವರು ಬಲುನೊಂದರು; ಸಹಾಯವನ್ನೂ ನೀಡಿದರು. ನಾಗವೇಣಿಯ ಸಂಗೀತದ ಗುರುಗಳನ್ನು, ಪಿಟೀಲಿನ ಮುದಿ ಸುಬ್ಬರಾಯರನ್ನು, ತಂಪುಹೊತ್ತಿನಲ್ಲಿ ನೆನೆದುಕೊಳ್ಳಬೇಕು. ಮೊಗೇರಬೆಸ್ತನು ಕಥೆಯಲ್ಲಿ ಯಾವ ಕಾರ್ಯವನ್ನು ಮಾಡದಿದ್ದರೂ ತನ್ನ ಮುಗ್ಧತೆಯಿಂದ ನಗುವಿನ ಒರತೆಯಾಗಿದ್ದಾನೆ.

ಗ್ರಂಥಕರ್ತರ ಶೈಲಿ ಚಿತ್ತರಂಜಕವಾಗಿದೆ. ಬಂದ ಹಾಗೆ ಬರೆಯುವ ಪ್ರಯತ್ನ ರಹಿತತೆಯೂ ಬಳಕೆಯ ಮಾತಿನಲ್ಲೇ ಭಾವದ ಮುಗಿಲಿಗೆ ಬಣ್ಣಕಟ್ಟುವ ಕೌಶಲ್ಯವೂ ಮನಸ್ಸಿನ ಅಳಲು ಹಿಗ್ಗು ತರ್ಕಚಿಂತೆ ಬೇಸರಗಳನ್ನು ಮಸೆದು ಸೆರೆಹಿಡಿದು ನಿಲ್ಲಿಸುವ ನಯವೂ ಅದರ ಮುಖ್ಯ ಲಕ್ಷಣಗಳು. ಸಂಗೀತ ವಿದ್ವಾಂಸನಿಗೆ ನುಡಿಸುವ ವಾದ್ಯ ವಶವಾಗಿ ಅವನ ಇಷ್ಟದಹಾಗೆ ಮಿಡಿಯುವಂತೆ ಕಾರಂತರ ಮಾತುಗಾರಿಕೆ ಇದೆ. ಅದು ಅವರಿಗೆ ವಶ, ಇತರರಿಗೆ ವಶ್ಯ. ವರ್ಣಿಸುವ ವಸ್ತು ಯಾವುದಿರಲಿ ಅದನ್ನು ತೈಲಚಿತ್ರದಂತೆ ತುಂಬಿಸಬಲ್ಲ ಶಕ್ತಿ ಅದಕ್ಕುಂಟು. ಇದು ಹೊರಗೆ ಕಾಣುವ ಪ್ರಕೃತಿ ಚಿತ್ರಗಳಲ್ಲೇ ಅಲ್ಲ, ಅಂತರಂಗದ ಆವೇಶಗಳನ್ನು ಬಣ್ಣಿಸುವುದರಲ್ಲಿಯೂ ಪರಿಣತವಾಗಿದೆ. ಪಡುಕರಾವಳಿಯ ಆ ಕಡಲು, ಆ ನೊರೆ ಅಲೆ ಕುದಿತ ಮೊರೆತಗಳು,

ಆ ಶಾಂತಿ ಸುಪ್ತಿಗಳು, ಅದರಂಚಿನಲ್ಲಿ ಮೆಲ್ಲನೆ ಮುಳುಗುವ ಆ ನೇಸರು, ಮೂಡುವ ಆ ಮರಿದಿಂಗಳು, ಆ ಬಿರುಗಾಳಿ ಮೋಡ ಸಿಡಿಲು ಮಿಂಚುಗಳು, ಆ ಮಳೆ, ಹೆಡೆಯಲುಗಿ ತೂಗಾಡುವ ಆ ಹಸೆಮರಗಳು, ಆ ಹಾಯಿ ಮಂಜಿಗಳು, ಆ ಮೀನಿನ ಹೊಲಸು ನಾತಗಳು, ಆ ಕಡಲ ಕಿನಾರೆ, ಆ ಅಳುವೆ, ಆ ನಂದನವನದಂತಿರುವ ತೆಂಗಿನ ಸಂತೆ—ಎಲ್ಲವೂ ನೂರು ವಿಧದಲ್ಲಿ ಈ ಕಾದಂಬರಿಗೆ ಭಿತ್ತಿಯಾಗಿದೆ. ಅವುಗಳ ವರ್ಣನೆಯನ್ನು ಏನೆಂದು ಹೇಳೋಣ! ಪಾರೋತಿಯ ಸಾವಿನ ಹಾಸಿಗೆಯ ಸುತ್ತ ಕುಳಿತಿರುವ ಆ ಜೀವಗಳ ಒಳಕುದಿ ಬಲು ಚೆನ್ನಾಗಿ ರೂಪುಗೊಂಡಿದೆ. ಇದು ಭಾವ ಗೀತೆಯಷ್ಟು ಸುಂದರವಾಗಿದೆ; ಕಣ್ಣೀರು ತಾನಾಗಿ ಒಡೆದು ಚಿಮ್ಮುತ್ತದೆ. ಅನಾಥೆ ನಾಗವೇಣಿ ಕಡಲ ಅಳುವೆಗೆ ಬೀಳುವಾಗ ಅವಳ ಮನಸ್ಸಿನ ಉದ್ವೇಗ ಭಾರವನ್ನು ಕನ್ನಡಿಸಿರುವ ರೀತಿ ಭಾವಿಸಿ ಭಾವಿಸಿ ಮೆಚ್ಚಬೇಕಾದದ್ದು. ಇವು ಒಂದೆರಡು ನಿದರ್ಶನಗಳು ಮಾತ್ರ. ಕಾರಂತರ ಶೈಲಿ ಸೂಚೀಯಾನ ಕಲೆಯಲ್ಲಿ ಪರಿಣತವಾಗಿ ಈ ಕಾದಂಬರಿಯ ವಿತಾನದಲ್ಲಿ ಚಿತ್ರಗಳ ಚೆಲುವನ್ನು ಸೃಷ್ಟಿಸಿದೆ.

ಕಾದಂಬರಿಯಲ್ಲಿ ಅಡಕವಾಗಿರುವ ಜೀವನತತ್ತ್ವ ಏನಿರಬಹುದೆಂಬ ಕುತೂಹಲ ಸಾಧಾರಣವಾಗಿ ಏಳುತ್ತದೆ. ಬಡತನವೆ ಇದಕ್ಕೆ ಒಡೆಯನಾಗಿದ್ದರೂ ಅವನ ಒಡೆತನವನ್ನು ಮುರಿದು ಸ್ವರಾಜ್ಯ ಸಂಪಾದಿಸಲು ಮನುಷ್ಯಪ್ರಯತ್ನ ಕಾಳಗವನ್ನು ಇಲ್ಲಿ ಹೂಡಿದೆ. ಅದರಲ್ಲಿ ಮೊದಲು ಸೋಲುಂಟಾದರೂ ಅಂತ್ಯದಲ್ಲಿ ಜಯ ಲಭಿಸಿದೆ. ಬಡತನಕ್ಕೆ ಸಂಜೂಡಿಸುವ ಶಕ್ತಿ ನಾಗವೇಣಿಯಲ್ಲಿದೆ. ಇವಳಂತೆ ಜನ ಯತ್ನ ಸಹಿತ ವಾಗಿ ಸಿದ್ಧಿಯನ್ನು ಪಡೆಯಬೇಕೆಂಬ ತತ್ತ್ವ ಕಾಣುತ್ತದೆ. ಇದೊಂದೇ ಅಲ್ಲ; ಇಂಗ್ಲಿಷು ವಿದ್ಯೆ ನಮ್ಮವರಿಗೆ ತಿಳಿಯುವುದಕ್ಕೆ ಮುಂಚೆ ಬಾಳು ಹೇಗಿತ್ತು, ತಿಳಿದ ಹೊಸದರಲ್ಲಿ ಹೇಗಾಯ್ತು ಈಗ ಏನಾಗಿದೆ ಎಂಬೊಂದು ಜಿಜ್ಞಾಸೆಗೆ ಸ್ಪಷ್ಟ ನಿದರ್ಶನ ಈ ಕಾದಂಬರಿ. ಇಂಗ್ಲಿಷು ಕಲಿತ ಹೊಸದರಲ್ಲಿ ಹೆಚ್ಚು ಸಂಬಳ ತರುವ ಸರ್ಕಾರಿ ಉದ್ಯೋಗಗಳ ಪ್ರಲೋಭನೆಗೆ ನಮ್ಮವರು ಒಳಗಾದರು. ಹಿಂದಿನವರ ವೈದಿಕ ವೃತ್ತಿಗಿಂತ ಈ ಲೌಕಿಕವೃತ್ತಿ ಹೆಚ್ಚು ಆದಾಯಕರವೆಂದು ಕಂಡಿತು. ಇದು ಸ್ವಲ್ಪಕಾಲ ನಡೆಯಿತು. ಕಲಿತವರು ಹಳ್ಳಿಯನ್ನು ಬಿಟ್ಟು ಪಟ್ಟಣ ಸೇರುವಂತಾಗಿ ಹಳ್ಳಿಯ ಬದುಕು ಹೀನವಾಯಿತು. ಈಗ ಸರ್ಕಾರಿ ಕೆಲಸದ ಸುಖದ ಹಕ್ಕೆ ಎಲ್ಲರಿಗೂ ಸಿಕ್ಕುವುದಿಲ್ಲೆಂಬ ನಿರಾಸೆ ಒದಗಿದೆ. ಕಲಿತ ವಿದ್ಯೆ ನೌಕರಿಗೆ ಹೊರತಾಗಿ ಬೇರಾವ ವೃತ್ತಿಗೂ ಬೇಕಾದ ಯೋಗ್ಯತೆಯನ್ನು ಕೊಟ್ಟಿಲ್ಲ. ಅದರಿಂದ ನಮ್ಮ ಜನರ ಸ್ವಾವಲಂಬನೆ ಕುಸಿದಿದೆ. ಇತ್ತ ಹಿಂದಿನ ಸಂಸ್ಕೃತಿ ಕೈಬಿಟ್ಟುಹೋಯ್ತು, ಅತ್ತ ಇಂಗ್ಲಿಷು ಸಂಸ್ಕೃತಿಯ ತಿರುಳು ಹಸ್ತಗತವಾಗಿಲ್ಲ. ಈ ನಡುವೆ ನಮ್ಮ ಕಲಿತ ಜನ ಅನಿಶ್ಚಿತತೆಯಲ್ಲಿ ಕಂಗೆಟ್ಟಿದೆ.

ಬಾಳು ಕಲೆಯಿಂದ ದೂರವಾಗಿ ಶುಷ್ಕವಾಗಿದೆ. ಇದಕ್ಕೆ ಪ್ರತೀಕಾರವೇನು? ಉತ್ತರ 'ಮರಳಿಮಣ್ಣಿಗೆ' ಎಂಬ ಮಾತಿನಲ್ಲಿ ಅಡಗಿದೆ. ರಾಮನ ಜೀವನ ಇದನ್ನು ಆಡಿ ತೋರಿಸುತ್ತಿದೆ. 'ಮರಳಿ ಹಳ್ಳಿಗೆ' ಎಂದು ನಮ್ಮ ದೇಶದ ತಲೆನಾಯಕರು ಆಗಾಗ ಕೂಗಿ ಸಾರುತ್ತಿರುವ ಡಂಗುರದ ಅರ್ಥ ಈ ಕಾದಂಬರಿಯಲ್ಲಿ ಮೂರ್ತೀಭವಿಸಿದೆ. ರಾಜಕೀಯದ ವಿಷಯವಾಗಿಯೂ ಒಂದೆರಡು ಅಂಶಗಳು ಗೋಚರವಾಗುತ್ತವೆ. ದೇಶಾಭಿಮಾನದ ಆವೇಶವು ವಿದ್ಯಾರ್ಥಿ ಜೀವನದಲ್ಲಿ ಕಾರ್ಯೋನ್ಮುಖವಾಗಲು ತೊಡಗಿದರೆ ಅದು ಬರಿಯ ನೊರೆಯಾಗಿ ಆರಿಹೋಗುವುದೇ ಅಲ್ಲದೆ ಅವರ ಮುಂದಿನ ಬಾಳ್ವೆಗೂ ಹಾನಿಯನ್ನು ತರಬಹುದು. ಹೊಟ್ಟೆತುಂಬಿದ ಬಳಿಕ, ಆಶ್ರಿತರಿಗೆ ನೆಮ್ಮದಿಯ ಬಟ್ಟೆಯನ್ನು ಕಾಣಿಸಿದನಂತರ ರಾಜಕೀಯಕ್ಕೆ ದುಮುಕಬಹುದು, ಸತ್ಯಾಗ್ರಹ ನಡಸಬಹುದು. ಹೊಟ್ಟೆಗಿಲ್ಲದೆ ಇವು ನಡೆಯುವಂತಿಲ್ಲ. ಕೊಡುವ ದಾತಾರರು ಈ ಬಡ ದೇಶದಲ್ಲಿ ಎಷ್ಟುಮಂದಿ ದೊರೆತಾರು? ಇಂಥ ಆವೇಶಗಳು ಬಂದಾಗ ಬಡವರು ವಿವೇಕವನ್ನು ಕಲಿಯಬಾರದೆ? ಈ ಸಮಸ್ಯೆಗಳೆಲ್ಲ ಗ್ರಂಥಕರ್ತರ ಬಾಳಿನವೋ ಎಂಬಂತೆ ಆತ್ಮೀಯತೆಯಿಂದ ಇಲ್ಲಿ ಕಾಣುತ್ತಿವೆ. ಇವುಗಳಲ್ಲಿ ಆಲೋಚನೆಗೆ ಬೇಕಾದಷ್ಟು ತಾತ್ವಿಕಸಾಮಗ್ರಿ ನಿಕ್ಷಿಪ್ತವಾಗಿದೆ.

ಇಷ್ಟು ಚೆನ್ನಾದ ಮಹಾಕಾದಂಬರಿಯನ್ನು ಕನ್ನಡಕ್ಕೆ ಕೊಟ್ಟಿರುವ ಕಾರಂತರನ್ನು ಹೃತ್ಪೂರ್ವಕವಾಗಿ ನಾಡಿಗೆನಾಡೇ ಅಭಿನಂದಿಸುತ್ತದೆ. ಅವರ ಕಲೆ ಇಲ್ಲಿ ರಸಾಯನವಾಗಿದೆ. ಅವರ ಕಾದಂಬರಿಯ ನಭೋನಿರೀಕ್ಷಣ ಆನಂದದಾಯಕವಾಗಿದೆ. ಸ್ಥಿರತೇಜಸ್ಸಿನ ಸ್ನಿಗ್ಧಕಾಂತಿಯ ಹಲವು ತಾರೆಗಳು ಅಲ್ಲಿ ಸ್ಥಗಿತವಾಗಿವೆ; ವಿನಾಶಕಾರಕ ರೂಕ್ಷನಕ್ಷತ್ರಗಳೂ ಇವೆ. ಈ ಲೋಕದ ಪರಿಚಯವನ್ನೂ ಅದರ ರಮ್ಯತೆಯನ್ನೂ ಕಾರಂತರ ಪ್ರತಿಭೆ ನಮಗೆ ಕಾಣಿಸಿದೆ. ಅವರಿಗೆ ನಮ್ಮ ವಿನಯಮುಖಿಯಾದ ಧನ್ಯವಾದಗಳು.

ಕೆಲವು ಕೊರತೆಗಳನ್ನು ಅವರಿಗೆ ನಿವೇದಿಸಬೇಕಾಗಿದೆ. ಕಾದಂಬರಿಯ ಮೊದಲ ಅರ್ಧ ಅಲಸಗಮನೆಯಾಗಿದ್ದು ಮುಂದಿನ ಅರ್ಧ ಉಸಿರುಕಟ್ಟಿ ಓಡುತ್ತಿದೆ. ಇದರಿಂದ ಮುಂದಿನ ಭಾಗದಲ್ಲಿ ಬರುವ ಕೆಲವು ಸಂದರ್ಭಗಳ ಅಪೇಕ್ಷಣೀಯವಾದ ವಿವರಣೆಗಳು ಮಾಯವಾಗಿ ಆತುರದಿಂದ ಮುಕ್ತಾಯವಾಗಿರುವಂತೆ ಅನ್ನಿಸುತ್ತದೆ. ಕಥೆಯನ್ನು ಓದುವಾಗ ಕೆಲವು ಬೇಸರದ ನಿಮಿಷಗಳನ್ನು ಕಳೆಯಬೇಕಾಗುತ್ತದೆ. ಒಂದೇ ವಿಷಯವನ್ನು ಕುರಿತ ವರ್ಣನೆ ಕೆಲವುಸಲ ಬಂದಿದೆ. ಪಾರ್ವತಿ, ಸತ್ಯಭಾಮೆ, ಲಚ್ಚ ಮುಂತಾದವರ ಮದುವೆಗಳ ವರ್ಣನೆ ಒಂದು ಮಾದರಿಗೆ. ಈ ಮೂರು ಮದುವೆಗಳಲ್ಲೂ ಅದೇ ಮಳೆ, ಅದೇ ದಿಬ್ಬಣ, ಅದೇ ಗರ್ನಾಲುಗಳ ಹಾರಾಟ, ಅದೇ ಕೋಲಾಹಲ.

ಇವುಗಳಲ್ಲಿ ಪ್ರಮುಖವಾದ ಒಂದಕ್ಕೆ ಎಲ್ಲ ವರ್ಣನೆಯನ್ನೂ ತೆಗೆದಿಟ್ಟು ಮಿಕ್ಕುವನ್ನು ಅದರಂತೆ ಎಂದು ತೇಲಿಸಿದ್ದರೆ ಮೊದಲ ಅರ್ಧದ ಪ್ರಮಾಣವು ಕಡಮೆಯಾಗಿ ಬೇಸರವೂ ತಿಳಿಯಾಗುತ್ತಿತ್ತು. ಗುರಿಕಾರರ ಮದುವೆಗೆ ಶೀನನು ಹೊರಟು ರಾಜೀವಿ ಜಂದಿಯರೊಡನೆ ಸಲಿಗೆ ಬೆಳಸಿದ ಸಂಗತಿಯನ್ನು ಸುಮಾರು ಒಂದು ಪ್ರಕರಣದಲ್ಲಿ ಹೇಳಿದೆ. ಕಥೆ ಸ್ವಾರಸ್ಯವಾಗಿದ್ದರೂ ಅದೆಲ್ಲ ಕಾದಂಬರಿಗೆ ಬೇಕೇ ಎನ್ನಿಸುತ್ತದೆ. ಶೀನನ ಸ್ವಭಾವನಿರೂಪಣೆಗೆ ಇದು ಅವಶ್ಯಕವಾದರೂ ಇಷ್ಟು ವಿಸ್ತಾರ ಅತಿ ಎನ್ನ ಬೇಕಾಗಿದೆ. ಪಡುಕರಾವಳಿಯ ಹಳ್ಳಿಯ ಜನರ ಬದುಕಿನ ವೃತ್ತಿಗಳ ನಾನಾ ಅಂಶದ ವಿವರಣೆಗಳು ಇಲ್ಲಿ ಕೊಟ್ಟಿರುವಷ್ಟೆಲ್ಲ ಕಾದಂಬರಿಗೆ ಬೇಕೆ? ಮೇಲಿಂದ ಮೇಲೆ ಉಳುವ ನೆಡುವ ನೀರುಹಾಯಿಸುವ ಕೆತ್ತುವ ಹೆಣೆಯುವ ನಾನಾ ಕಸಬಿನ ವಿವರಗಳು ಬರುವುದರಿಂದ ಇದೇನು ಸಮಾಜವಿಜ್ಞಾನವೋ ಎಂಬ ಸಂದೇಹ ಬರುವಂತಿದೆ. ಮುಂದೆ ಬರುವ ಕಥೆಯನ್ನು ಸವಿಯಲು ಉತ್ಸುಕವಾಗಿರುವ ಮನಸ್ಸಿಗೆ ಇವೆಲ್ಲ ಬೇಸರ ಗೊಳಿಸುತ್ತವೆ. ಇವು ಅಲ್ಪದ ವಿಷಯಗಳು. ಕಾದಂಬರಿಯ ಒಟ್ಟಂದದಲ್ಲಿ ಇವು ಮರೆತು ಹೋಗುತ್ತವೆ. ಬೇರೆ ಕಡೆಯವರಿಗೆ ಅರ್ಥವಾಗದ, ಅಲ್ಲಿ ಮಾತ್ರ ಬಳಕೆಯಲ್ಲಿರುವ, ಕೆಲವು ಶಬ್ದಗಳಿಗೆ ಅರ್ಥವನ್ನು ಕೊಟ್ಟಿರುವ ಹಾಗೆ ಕಥೆಗೆ ರಂಗಭೂಮಿಯಾಗಿರುವ ಪ್ರದೇಶದ ನಕ್ಷೆಯೊಂದನ್ನು—ಹಾರ್ಡಿಯವರ ಕೆಲವು ಕಾದಂಬರಿಗಳಲ್ಲಿ ಕಾಣಿಸಿರುವ ರೀತಿಯಲ್ಲಿ—ಇಲ್ಲಿ ಕೊಟ್ಟಿದ್ದರೆ ಎಲ್ಲರಿಗೂ ತುಂಬ ಉಪಕಾರವಾಗುತ್ತಿತ್ತು.

ಟಿ. ಎಲ್. ಎನ್.

---

**A Handbook of Virasaivism** (ವೀರಶೈವ ಧರ್ಮದ ಕೈಪಿಡಿ)—By DR. S. C. NANDIMATH, M.A., PHD. (Lond.), Principal and Professor of Sanskrit, Lingaraj College, Belgaum, 1941; Crown octavo xvi + 268. Price, Rs. 3.

ಈ ಗ್ರಂಥದಲ್ಲಿ ಹನ್ನೆರಡು ಅಧ್ಯಾಯಗಳೂ ನಾಲ್ಕು ಅನುಬಂಧಗಳೂ, ಕೊನೆ ಯಲ್ಲಿ ಟಿಪ್ಪಣಿಗಳೂ ಇವೆ. ಪ್ರತಿ ಅಧ್ಯಾಯದ ಮೊದಲಲ್ಲಿಯೂ ಅದರೊಳಗೆ ಬರುವ ವಿಷಯದ ಸಾರಾಂಶವನ್ನು ಕೊಟ್ಟಿದೆ. ಟಿಪ್ಪಣಿಗಳಲ್ಲಿ ಮುಖ್ಯವಾಗಿ ಪ್ರಮಾಣ ಗ್ರಂಥಗಳೂ ವಾಕ್ಯಗಳೂ ವಚನಗಳೂ ಇವೆ.

ವೀರಶೈವದ ಉತ್ಪತ್ತಿ, ವೀರಶೈವ ಲೇಖಕರು, ಅಷ್ಟಾವರಣಗಳು, ಶಿವಾಚಾರ, ದಾರ್ಶನಿಕ ಹಿನ್ನೆಲೆ, ದೇವರು, ಲಿಂಗ, ಶಕ್ತಿ ಅಥವಾ ಮಾಯೆ, ಸತ್ತು ಅಸತ್ತು, ಜಗತ್ತು ಜೀವ, ಷಟ್‌ಸ್ಥಲಗಳು, ವೀರಶೈವಧರ್ಮದ ಸಾರಸರ್ವಸ್ವ—ಇವು ಈ ಹನ್ನೆ ರಡು ಅಧ್ಯಾಯಗಳಲ್ಲಿ ಪ್ರತಿಪಾದಿತವಾಗಿರುವ ವಿಷಯಗಳು.

ಗ್ರಂಥಕರ್ತರು ಮೊದಲ ಅಧ್ಯಾಯದಲ್ಲಿ ವೀರಶೈವದ ಉತ್ಪತ್ತಿಯನ್ನು ಕುರಿತು ವಿಚಾರಮಾಡುತ್ತ—ರೇವಣಾದಿ ಪಂಚಾಚಾರ್ಯರು ವೀರಶೈವವನ್ನು ಸ್ಥಾಪಿಸಿದ ರೆಂದು ಸಾಂಪ್ರದಾಯಿಕವಾಗಿ ಹೇಳುವುದಕ್ಕೆ ಇದುವರೆಗೆ ಚಾರಿತ್ರಿಕ ಆಧಾರಗಳು ದೊರೆತಿಲ್ಲ; ಶಿವಪೂಜೆಯು ಹಿಂದೂದೇಶದಲ್ಲೆಲ್ಲಾ ಪುರಾತನಕಾಲದಿಂದ ಇತ್ತು. ಕನ್ನಡ ನಾಡಿನಲ್ಲಿ ಇದ್ದುದನ್ನು ಬಸವಣ್ಣನವರೇ ಮೊದಲಾದವರು ಜೀರ್ಣೋದ್ಧಾರ ಮಾಡಿ ಅದಕ್ಕೆ ಹೊಸ ಜೀವ ತುಂಬಿದರು ಎಂದು ಅಭಿಪ್ರಾಯಪಡುತ್ತಾರೆ. ಈ ಸಂದರ್ಭದಲ್ಲಿ ದೇಸಿಂಗರಾಜನೇ ಜಯಸಿಂಹರಾಜನೆಂದು ನಿರ್ಧರಿಸಿ ವೀರಶೈವದ ಚರಿತ್ರೆಯು ನಮಗೆ ೧೧ನೆಯ ಶತಮಾನದಿಂದ ದೊರೆಯುತ್ತದೆ ಎಂದು ಹೇಳುವುದು ಅಷ್ಟು ತೃಪ್ತಿಕರವಾಗಿಲ್ಲ; ಹನ್ನೆರಡನೆಯ ಶತಮಾನಕ್ಕಿಂತ ಹಿಂದಿನ ವೀರಶೈವದ ಚರಿತ್ರೆ ಗೊತ್ತಿಲ್ಲವೆಂದು ಒಪ್ಪಿಕೊಳ್ಳುವುದೇ ಮೇಲು.

ಎರಡನೆಯ ಅಧ್ಯಾಯದಲ್ಲಿ ಜೇಡರ ದಾಸಿಮಯ್ಯನಿಂದ ಹಿಡಿದು ಷಡಕ್ಷರ ದೇವನ ವರೆಗೆ ಇಪ್ಪತ್ತಾರು ಮುಖ್ಯ ವೀರಶೈವ ಕನ್ನಡ ಕವಿಗಳ ವಿಚಾರವನ್ನು ಸಂಗ್ರಹವಾಗಿ ಹೇಳಿ,[1] ಬಸವಣ್ಣನವರ ಕಾಲ ಚಾರಿತ್ರಕತೆಗಳ ಸಂಬಂಧವಾಗಿ ಇರುವ ಸಮಸ್ಯೆಗಳನ್ನು ಚರ್ಚಿಸಿದ್ದಾರೆ.

ಮುಂದಿನ ಅಧ್ಯಾಯಗಳಲ್ಲಿ ಬರುವ ಮುಖ್ಯ ಅಂಶಗಳನ್ನು ಹೀಗೆ ಸಂಗ್ರಹಿಸ ಬಹುದು :—ಅಷ್ಟಾವರಣಗಳೂ, ಷಟ್‌ಸ್ಥಲಗಳೂ[2] ವೀರಶೈವದ ಮುಖ್ಯಲಕ್ಷಣಗಳು. ವೀರಶೈವರಲ್ಲಿ ಹವನಹೋಮಗಳೂ, ಯಜ್ಞಯಾಗಾದಿಗಳೂ, ಅಗ್ನಿಸಾಕ್ಷಿಕವಾದ ವೈದಿಕಸಂಸ್ಕಾರಗಳೂ ಇಲ್ಲ; ಶವದಹನವಿಲ್ಲ; ಕೀಳು ಮೇಲು ಜಾತಿಗಳಾಗಲಿ, ಪಂಚಸೂತಕಗಳಾಗಲಿ, ಹೆಣ್ಣು ಗಂಡುಗಳ ತಾರತಮ್ಯವಾಗಲಿ ಇಲ್ಲ. ಶಿವದೀಕ್ಷೆ ಲಿಂಗಧಾರಣೆಗಳುಂಟು; ಪಂಚಾಚಾರ, ವಿಧವಾವಿವಾಹ, ಪ್ರೌಢಾವಿವಾಹಗಳುಂಟು. ಅವರು ಏಕದೇವೋಪಾಸಕರು. ಪರಶಿವನೊಬ್ಬನೇ ದೇವರು. ಬ್ರಹ್ಮ, ವಿಷ್ಣು, ರುದ್ರರು ಜೀವರುಗಳು. 'ಲಿಂಗ'ವೇ ಪರಬ್ರಹ್ಮ, ಪರಶಿವ. ಜಗತ್ತು ಮಿಥ್ಯವಲ್ಲ ಸತ್ಯ. ಭಕ್ತಿಸ್ಥಲದಲ್ಲಿ ಭೇದವಿದ್ದರೂ ಶರಣನು ಕ್ರಮವಾಗಿ ಐಕ್ಯಸ್ಥಲಕ್ಕೆ ಏರಿ ಅಲ್ಲಿ ಅಭೇದ ವನ್ನು ಪಡೆಯುತ್ತಾನೆ. ಇದು ತ್ರಿಕ, ಶೈವಸಿದ್ಧಾಂತ, ಅದ್ವೈತ ಇವುಗಳಿಂದ ಕೆಲವು ಅಂಶಗಳಲ್ಲಿ ಬೇರೆ.

---

[1] ಮೊದಲನೆಯ ಅನುಬಂಧದಲ್ಲಿ ಇನ್ನೂ ಅರವತ್ತೇಳು ಜನರ ಸೂಕ್ಷ್ಮ ಪರಿಚಯವಿದೆ.

[2] ಎರಡನೆಯ ಅನುಬಂಧದಲ್ಲಿ ಆರು ಸ್ಥಲಗಳು ಹೇಗೆ ಮುವ್ವತ್ತಾರು, ಇನ್ನೂರ ಹದಿನಾರು, ನೂರೊಂದು ಪ್ರಭೇದಗಳಾಗುತ್ತವೆಯೆಂದೂ ಯೋಗಕ್ಕೂ ವೀರಶೈವಕ್ಕೂ ಹೇಗೆ ಸಂಬಂಧವಿದೆ ಯೆಂದೂ ವಿವರಿಸಿದೆ.

ಡಾಕ್ಟರ್ ನಂದಿಮಠರವರು ಕನ್ನಡ ಸಂಸ್ಕೃತಗಳನ್ನು ಚೆನ್ನಾಗಿ ವ್ಯಾಸಂಗ ಮಾಡಿದ ವಿದ್ವಾಂಸರು. ಸೀಮೆಗೆ ಹೋಗಿ ಡಾ|| ಥಾಮಸ್, ಬಾರ್ನೆಟ್ ಮುಂತಾದ ಪ್ರಾಚ್ಯ ಪಂಡಿತರೊಡನೆ ಕೆಲಸಮಾಡಿ ಶಿಕ್ಷಣಪಡೆದವರು. ಆದ್ದರಿಂದ ಅವರ ಬರೆವಣಿಗೆಯಲ್ಲಿ ವಿದ್ವತ್ತು ಇದೆ, ವಿಚಾರವಿದೆ. ಅಭಿಮಾನದಿಂದಲೇ ಅವರು ಯಾವುದಕ್ಕೂ ಅತಿ ಪ್ರಾಚೀನತೆಯನ್ನಾಗಲಿ ಪ್ರಾಶಸ್ತ್ಯವನ್ನಾಗಲಿ ಕೊಡಲು ಹೋಗುವುದಿಲ್ಲ. ಹೇಳುವುದನ್ನು ಖಚಿತವಾಗಿ ಸ್ಪಷ್ಟವಾಗಿ ಸರಳವಾಗಿ ಹೇಳುತ್ತಾರೆ. 'ಕೈಪಿಡಿ'ಯಾದ್ದರಿಂದ ಇದರಲ್ಲಿ ವಾದವಿವಾದಗಳಿಗೂ ವಿವರಗಳಿಗೂ ಕೈ ಹಾಕಿಲ್ಲ; ಹೀಗೆಂದು ಮುಖ್ಯವಾದ ದೊಡ್ಡ ದೊಡ್ಡ ಸಮಸ್ಯೆಗಳನ್ನು ಎತ್ತಿ ತಮ್ಮ ಅಭಿಪ್ರಾಯವನ್ನು ಹೇಳದೆ ಬಿಟ್ಟಿಲ್ಲ. ಯಾವಾಗಲೂ ತೆರೆದ ಮನಸ್ಸಿನಿಂದ ಎಲ್ಲ ಸಂಗತಿಗಳನ್ನೂ ಗ್ರಹಿಸಿ, ಪರಿಶೀಲಿಸಿ, ವಿಮರ್ಶೆಮಾಡುತ್ತಾರೆ. ವೀರಶೈವದ ಮೇಲೆ ಅದ್ವೈತವೇದಾಂತದ ಮತ್ತು ವಿಜ್ಞಾನವಾದದ ಪ್ರಭಾವವೂ ಬಿದ್ದಿರಬಹುದು (ಪುಟ ೧೧೧, ೧೧೪), ಜೈನರ ಗುಣಸ್ಥಾನಗಳೂ ಷಟ್‌ಸ್ಥಲಗಳಂತೆಯೇ ಇವೆ (ಪುಟ ೧೬೫)—ಎಂದು ಅವರು ಸೂಚಿಸಿರುವುದು ಇದಕ್ಕೆ ಉದಾಹರಣೆ. ಪ್ರಮಾಣವಿಲ್ಲದ್ದನ್ನು ಅವರು ಸಾಧಿಸಲು ಹೊರಡುವುದಿಲ್ಲ (ಪುಟ ೧೮, ೫೩). ಮೊಹೆಂಜೊದಾರೊ ಹರಪ್ಪಗಳಲ್ಲಿ ದೊರೆತ ಕೆಲವು ಮೂರ್ತಿಗಳನ್ನು ನೋಡಿ ಸರ್ ಜಾರ್ಜ ಮಾರ್ಷಲ್ ಅವರೇ ಇವು ಪಾಶುಪತಧರ್ಮಕ್ಕೂ ಯೋಗಕ್ಕೂ ಸಂಬಂಧಪಟ್ಟಿರಬಹುದೆಂದು ಸೂಚಿಸಿದ್ದರೂ, ಡಾಕ್ಟರ್ ನಂದಿಮಠರು ಮಹೆಂಜೊದಾರೋವಿನ ಪ್ರಸ್ತಾಪವನ್ನೇ ಎತ್ತಿಲ್ಲ. ಇದು ಉಚಿತವೆಂದು ನಮಗೆ ತೋರುತ್ತದೆ. ಏಕೆಂದರೆ ಅದರ ಮೇಲೆ ಲೇಖನಗಳು ಬೇಕಾದಷ್ಟು ಬಂದಿರುವುವಾದರೂ ಅದರ ಸಂಸ್ಕೃತಿಯ ವಿಚಾರವಾಗಿ ಈಗ ಯಾವುದನ್ನೂ ನಿರ್ವಿವಾದವಾಗಿ ಹೇಳುವಂತಿಲ್ಲ. ಅದು ದ್ರಾವಿಡ ಅಥವಾ ಪೂರ್ವದ್ರಾವಿಡವಾಗಿರಬೇಕೆಂದು ಕೆಲವರು ಹೇಳುತ್ತಿದ್ದಾರೆ. ಇವರ ಹೇಳಿಕೆ ಎಲ್ಲರೂ ಒಪ್ಪುವಂತಿಲ್ಲ. ಐದನೆಯ ಅಧ್ಯಾಯದಲ್ಲಿ ಡಾಕ್ಟರವರು 'ಲಿಂಗ'ವೆಂದರೇನು? ಎಂದು ವಿಚಾರಮಾಡುತ್ತ, 'ಲಿಂಗ'ವೆಂದರೆ ಪರಬ್ರಹ್ಮ ಅಥವಾ ಪರಶಿವ ಎಂಬ ವಚನಕಾರರ ಅಭಿಪ್ರಾಯವನ್ನು ಸಪ್ರಮಾಣವಾಗಿ ನಿರೂಪಿಸಿದ್ದಾರೆ. ಅಥರ್ವವೇದದ 'ಸ್ಕಂಭ'ಕ್ಕೂ ಇದಕ್ಕೂ ಸಂಬಂಧವಿರಬಹುದೆಂದು ಸೂಚಿಸಿದ್ದಾರೆ. 'ಅಂಗ'ವೆಂದರೆ ಜೀವ, 'ಲಿಂಗ'ವೆಂದರೆ ಪರಬ್ರಹ್ಮ ಎಂಬುದು ಪ್ರಸಿದ್ಧವಾಗಿದೆ. ಆದರೆ ಈ ಶಬ್ದಕ್ಕೆ ವ್ಯುತ್ಪತ್ತಿ ಹೇಗೆ? ಇದಕ್ಕೆ ಸಾಂಪ್ರದಾಯಿಕರು ಹೇಳುವ 'ಗಮ್ + ಲಿ = ಲಿಂಗ' ಇತ್ಯಾದಿ ನಿರುಕ್ತಿಯು ತೃಪ್ತಿಕರವಾಗಿಲ್ಲವೆಂದು ಗ್ರಂಥಕರ್ತರೇ ಒಪ್ಪಿಕೊಂಡಿದ್ದಾರೆ. ಈ ಸಂದರ್ಭದಲ್ಲಿ 'ಲಿಂಗ'ಶಬ್ದವು ಪ್ರಾಯಶಃ ಸಂಸ್ಕೃತ

ಶಬ್ದವಲ್ಲವೆಂದೂ ಆಸ್ಟ್ರೋ-ಏಷಿಯಾಟಿಕ್ ಶಬ್ದವಿರಬಹುದೆಂದೂ ಹೇಳುವ ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯವನ್ನು ಸೂಚಿಸಬಹುದಾಗಿತ್ತು.[1] ಲಿಂಗಪೂಜೆಯ ಉತ್ಪತ್ತಿಯ ವಿಚಾರವೂ ಹೀಗೆಯೇ. ಲಿಂಗವು ಪುರುಷಚಿಹ್ನೆ ಎಂದ ಮಾತ್ರಕ್ಕೆ ಅನೇಕರು ಅಲ್ಲವೇ ಅಲ್ಲವೆಂದು ಪ್ರತಿಭಟಿಸುವರು. ಆಗಿದ್ದರೆ ತಾನೇ ತಪ್ಪೇನು? ಅದರ ರಹಸ್ಯವನ್ನು ಇಂದಾದರೂ ವೈಜ್ಞಾನಿಕರು ಕಂಡುಕೊಂಡಿದ್ದಾರೆಯೆ? ದೇವರ ಮಹಿಮೆಯನ್ನು ಯೋಚಿಸಬಲ್ಲ ಮುಮುಕ್ಷುವಿಗೆ ಜೀವೋತ್ಪತ್ತಿ ಸಮಸ್ಯೆಗಿಂತ ಘನವಾದ ವಿಚಾರವೇನು ಬೇಕು? ಶ್ರೀ ರಾಮಕೃಷ್ಣ ಪರಮಹಂಸರು 'ಯೋನಿ' ಎಂಬ ಮಾತನ್ನು ಕೇಳಿದಕ್ಷಣವೇ ಜಗತ್ತಿಗೆಲ್ಲಾ ಮೂಲ ಕಾರಣನಾದ ಪರಮಾತ್ಮನ ನೆನಪು ಬಂದು ಸಮಾಧಿ ಹೊಂದುತ್ತಿದ್ದರಂತೆ. ಮುಖ್ಯವಾದ ಪ್ರಶ್ನೆಯೇನೆಂದರೆ ಲಿಂಗವು ಮೊಟ್ಟಮೊದಲು ಪೂಜಾ ವಸ್ತುವಾದಾಗ ಅದು ಯಾವುದರ ಪ್ರತೀಕವಾಗಿತ್ತು ಎಂಬುದು. ಅದನ್ನು ಈಗ ಹೀಗೇ ಎಂದು ನಿರ್ಣಯಿಸಲಾಗುವುದಿಲ್ಲ.

ವೀರಶೈವಮತಕ್ಕೂ ವೈದಿಕಮತಕ್ಕೂ ಇರತಕ್ಕ ಸಂಬಂಧವೇನು ಎಂಬುದನ್ನು ವಿದ್ವಾಂಸರು ಇನ್ನೂ ಖಚಿತವಾಗಿ ವಿಚಾರಮಾಡಬೇಕು. ಶೈವವು ವೈದಿಕ. ಜೈನ, ಬೌದ್ಧಗಳಂತೆ ವೇದಬಾಹಿರವೆಂದು ಎಣಿಸಲ್ಪಟ್ಟಿರಲಿಲ್ಲ; ಕಾಲಕ್ರಮದಲ್ಲಿ ಶೈವವು ವೈದಿಕಮತಕ್ಕೆ ಒಳಗಿನಿಂದ ವಿರೋಧಪಡೆದು ಪ್ರತಿಭಟಿಸಿರಬಹುದು[2] ಎಂದು ಗ್ರಂಥಕರ್ತರು ಅಭಿಪ್ರಾಯಪಡುತ್ತಾರೆ. ಈ ಆಂತರ ವಿರೋಧಕ್ಕೆ ಕಾರಣವೇನು? ಜೈನ, ಬೌದ್ಧ, ಯೋಗ, ಶೈವ, ವೈಷ್ಣವ ಮತಗಳಿಗೆಲ್ಲಾ ಮೂಲಾಧಾರಗಳು, ಅಹಿಂಸೆ, ದಯೆ. ಹಿಂಸೆ ಇಲ್ಲದೆ ಯಾಜ್ಞಿಕಮತವು ಸಿಲ್ಲದು. ಯಜ್ಞಕ್ಕೆ ಪ್ರಾಧಾನ್ಯ ಹೋಗಿ 'ಪೂಜೆಗೆ' ಪ್ರಾಬಲ್ಯ ಯಾವಾಗ ಬಂತು, ಕರ್ಮ ಖಿಲವಾಗಿ ಭಕ್ತಿ ಯಾವಾಗ ಬಲವಾಯಿತು ಎಂಬುದೊಂದು ದೊಡ್ಡ ಪ್ರಶ್ನೆ. ಇದನ್ನು ಈಗ ಹೇಳಲಾಗುವುದಿಲ್ಲವೆಂದರೂ (ಪು. ೫೨) ಶಿವನು ದ್ರಾವಿಡದೇವನೆಂಬಂತೆ, ಅಹಿಂಸೆ, ದಯೆ, ಭಕ್ತಿ ಇವು ದ್ರಾವಿಡ ಜನದ ಲಕ್ಷಣಗಳಲ್ಲವೇ ಎಂದು ವಿಚಾರಮಾಡಬೇಕು. ವೀರಶೈವದ ಐಕ್ಯತತ್ವವು ಉಪನಿಷತ್ತಿನ ಅದ್ವೈತ ತತ್ವವೆ; ಅಷ್ಟು ಮಟ್ಟಿಗೆ ಅದು ವೈದಿಕವೇಯೆ. ಆದರೆ ಸಂಹಿತೆ ಬ್ರಾಹ್ಮಣಗಳ ಯಾಜ್ಞಿಕ ಧರ್ಮವು 'ಶಾಂತಂ ಶಿವಮದ್ವೈತಂ' ಕಡೆಗೆ ತಿರುಗಿತೇಕೆ? ಆರ್ಯಜನರಲ್ಲಿ ಆಗ ಏನು ಬದಲಾವಣೆಯಾಯಿತು? ಅದು ಆಂತರವೇ ಬಾಹ್ಯವೇ? ಬಾಹ್ಯವಾದರೆ ಯಾವ ಹೊಸ ಘರ್ಷಣೆಯುಂಟಾಯಿತು? ದ್ರಾವಿಡ ಜನರ ಸಂಪರ್ಕವೇ? ಇದು ಇನ್ನೂ ಗೂಢವಾದ ವಿಚಾರ.

---

[1] Pre-Aryan and Pre-Dravidian in India, page 8-15.

[2] It is more probable that Saivism was a revolt from within. (P. 53).

ಶ್ರೀಮಾನ್ ನಂದಿಮಠರವರು ತಮ್ಮ ಗ್ರಂಥವನ್ನು ಶುದ್ಧವಾದ ತಿಳಿಯಾದ ಇಂಗ್ಲಿಷಿನಲ್ಲಿ ಬರೆದಿದ್ದಾರೆ. ಕೆಲವು ಮಾತುಗಳು ನಮಗೆ ಸುಪರಿಚಿತವಾಗಿರುತ್ತವೆ; ಆದರೆ ಅವುಗಳ ಅರ್ಥ ಮನಸ್ಸಿಗೆ ಸ್ಪಷ್ಟವಾಗಿರುವುದಿಲ್ಲ; ಇವುಗಳನ್ನು ಭಾಷಾಂತರ ಮಾಡಿದರೆ, ಅಥವಾ ಭಾಷಾಂತರದಲ್ಲಿ ಓದಿದರೆ, ಹೊಸ ಬೆಳಕು ತೋರುತ್ತದೆ; ರಾತ್ರಿಯಲ್ಲಿ ಕಂಡದ್ದನ್ನು ಮತ್ತೆ ಹಗಲಲ್ಲಿ ನೋಡಿದಂತಾಗುತ್ತದೆ. ಆದ್ದರಿಂದ ಇಂಗ್ಲಿಷನ್ನು ಬಲ್ಲ ವೀರಶೈವಾಭಿಮಾನಿಗಳು ಈ ಗ್ರಂಥವನ್ನು ಓದುವುದರಿಂದ ತುಂಬ ಪ್ರಯೋಜನವುಂಟೆಂದು ನಾವು ಅಭಿಪ್ರಾಯಪಡುತ್ತೇವೆ. ರಾವ್ ಬಹದ್ದೂರ್ ಹಳಕಟ್ಟಿಯವರೇ ಮುಂತಾದವರ ಪ್ರಯತ್ನದಿಂದ ಈಗ ಹಲವು ವೀರಶೈವ ಗ್ರಂಥಗಳು ಪ್ರಕಟವಾಗಿದ್ದರೂ ಕನ್ನಡದಲ್ಲಿ ಇಷ್ಟು ಸಂಗ್ರಹವಾಗಿ ಸಪ್ರಮಾಣವಾಗಿ ಈ ವಿಷಯವನ್ನು ನಿರೂಪಿಸುವ ಗ್ರಂಥ ಇನ್ನೂ ಆಗಿಲ್ಲವೆಂದು ಹೇಳಬೇಕಾಗಿದೆ. ಈ ದೃಷ್ಟಿಯಿಂದ ಡಾ|| ನಂದಿಮಠರವರೇ ಆಗಲಿ ಇತರರೇ ಆಗಲಿ ಈ ಗ್ರಂಥದ ಕನ್ನಡದ ಆವೃತ್ತಿಯನ್ನು ಆದಷ್ಟು ಬೇಗನೆ ಹೊರಡಿಸುವುದು ಅತ್ಯಾವಶ್ಯಕವೆಂದು ಬೇರೆ ಹೇಳಬೇಕಾಗಿಲ್ಲ. ಇಂಗ್ಲಿಷನ್ನು ತಿಳಿಯದ ಕನ್ನಡಿಗರಿಗೆ ಆದರಿಂದ ದೊಡ್ಡ ಉಪಕಾರವಾಗುತ್ತದೆ. ಕನ್ನಡವನ್ನು ತಿಳಿಯದ ವೀರಶೈವ ತತ್ವಧರ್ಮ ಜಿಜ್ಞಾಸುಗಳಿಗಂತೂ ಪ್ರಕೃತ ಇಂಗ್ಲಿಷ್ ಗ್ರಂಥದ ಉಪಯೋಗವು ಅಪಾರವಾಗಿದೆ. ಬೇರೆ ಪ್ರಾಂತಗಳ ಮತ್ತು ದೇಶಗಳ ಜನದೊಡನೆ ವ್ಯವಹಾರಕ್ಕೆ ಇಂದು, ಪ್ರಾಯಶಃ ಮುಂದೆ, ಇಂಗ್ಲಿಷು ಒಂದೇ ಇರುವ ಸಾಧನ.

ಇಂಥ ಇಂಗ್ಲಿಷ್ ಗ್ರಂಥಗಳಿಗೆ ಒಂದು ಅಕಾರಾದಿ ಇರುವುದು ರೂಢಿ. ಅದನ್ನು ಮಾಡಿ ಸೇರಿಸಿದ್ದರೆ ಗ್ರಂಥವು ಇನ್ನೂ ಹೆಚ್ಚು ಉಪಯುಕ್ತವಾಗುತ್ತಿತ್ತು.

ಎ. ಆರ್. ಕೃ.

---

# ಸಾದರ ಸ್ವೀಕಾರ

೧. **ಬಿಸ್ಲಾಡಿ ಚೆಲ್ವಿ ಮತ್ತು ಕುರುಬನ ಮೋಕ್ಷ**—ಬರೆದವರು: ಶ್ರೀಮಾನ್ ಅಜ್ಜಂಪುರ ಶೇಷಗಿರಿರಾಯರು; ಮಿತ್ರಸಂಘದ ಸಾಹಿತ್ಯಮಾಲೆ ೧; ಸಂಪಾದಕರು: ಶ್ರೀಮಾನ್ ಕೆ. ಎನ್. ದೊರೆಸ್ವಾಮಿ; ಪ್ರಕಾಶಕರು: ಮಿತ್ರಸಂಘ, ಬೆಂಗಳೂರು; ಕ್ರೌನ್ ೧. ೫೬; ಬೆಲೆ, ೬ ಆಣೆ.

೨. **ಆಧುನಿಕ ರಷ್ಯಾ (ಯು.ಎಸ್.ಎಸ್.ಆರ್.)**—ಗ್ರಂಥಕರ್ತರು: ಶ್ರೀಮಾನ್ ಪಿ. ಆರ್. ರಾಮಯ್ಯ, ಬಿ.ಎಸ್‌ಸಿ.; ಪ್ರಕಾಶಕರು: ತಾಯಿನಾಡು ಪ್ರಕಟನಾಲಯ, ಬೆಂಗಳೂರು ನಗರ; ಕ್ರೌನ್ ೧. ೩೫೬+viii; ಬೆಲೆ, ರೂ. ೧—೮—೦.

೩. **Third Annual Report and Audited Statement of Accounts of The National Kannada Education Society, Bombay.**

೪. **ಗೀತಾ ಪ್ರವಚನಗಳು** (ಅಧ್ಯಾಯ ೧-೨)—ಮೂಲ ಲೇಖಕರು: ಶ್ರೀಮಾನ್ ಆಚಾರ್ಯ ವಿನೋಬಾ ಭಾವೆ; ಪ್ರಕಾಶಕರು: ಅವಧೂತ ಗ್ರಂಥಾಲಯ, ಹುಬ್ಬಳ್ಳಿ; ಕ್ರೌನ್ ೧. ೩೬; ಬೆಲೆ; ೪ ಆಣೆ.

೫. **ಆತ್ಮಾರ್ಪಣ** (ಸರಸಸಂಗೀತ ಸಮಸ್ಯಾತ್ಮಕ ನಾಟಕ)—ಕುಸುರಿಸಿದವರು: ಶ್ರೀಮಾನ್ "ಕಾವ್ಯಾನಂದ" (ಸಿದ್ಧಯ್ಯ ಪುರಾಣಿಕ); ಪ್ರಕಾಶಕರು: ವೀರಶೈವ ತರುಣಸಂಘ, ಹೈದರಾಬಾದು; ಡೆಮಿ ೧. ೨೦+೧೧೨; ಬೆಲೆ, ?

೬. **ಶ್ರೀಮದ್ದಯಾನಂದರ್ಷಿ ಜೀವನಚರಿತಂ**—ಲೇಖಕರು: ಶ್ರೀಮಾನ್ ಸುಧಾಕರ; ಕ್ರೌನ್ ೧. ೫೦೦; ಬೆಲೆ, ರೂ. ೧—೮—೦.

೭. **ನೋಡಗಳು** (ಏಳು ಸಣ್ಣ ಕತೆಗಳ ಸಂಗ್ರಹ)—ಬರೆದವರು: "ಶ್ರೀ ಸ್ವಾಮಿ"; ಮನೋಹರ ಗ್ರಂಥಮಾಲೆಯ ೫೭ನೆಯ ಕುಸುಮ; ಕ್ರೌನ್ ೧. ..೦+೧೫೭; ಬೆಲೆ, ರೂ. ೧.

೮. **ತೆನಾಲಿ ರಾಮಕೃಷ್ಣ**—ನಾಟಕಕಾರರು: ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ.; ಮನೋಹರ ಗ್ರಂಥಮಾಲೆಯ ೫೮ನೆಯ ಕುಸುಮ; ಕ್ರೌನ್ ೧. ೪+೯೫; ಬೆಲೆ, ರೂ. ೧.

೯. **ತಂತ್ರಗಾರ ಕರಟಕರಾಯ ನರಿಯಣ್ಣನ ಕತೆ**—ಬರೆದವರು: ಶ್ರೀಮಾನ್ "ನಾ"; ತಂದವರು: ಶ್ರೀಮಾನ್ ಜೋಶಿ ಶಂಕರರಾಯರು; ಪ್ರಕಾಶಕರು: ಕನ್ನಡ ಸರಸ್ವತೀ ಭಾಂಡಾಗಾರ, ಧಾರವಾಡ; ಕ್ರೌನ್ ೧. ೭೮+೭; ಬೆಲೆ, ೧೨ ಆಣೆ.

೧೦. ದಾರಿಯ ಬುತ್ತಿ—ಕನ್ನಡಿಸಿದವರು: ಶ್ರೀಮಾನ್ ಕೆ. ಗೋವಿಂದರಾಯರು; ತಂದವರು: ಶ್ರೀಮಾನ್ ಜೋಶಿ ಶಂಕರರಾಯರು; ಪ್ರಕಾಶಕರು: ಕನ್ನಡ ಸರಸ್ವತೀ ಭಾಂಡಾಗಾರ, ಧಾರವಾಡ; ಡೆಮಿ ಷೋ. ೧೦ + ೪೪; ಬೆಲೆ, ೪ ಆಣೆ.

೧೧. ಮಲ್ಲಯುದ್ಧ—ಬರೆದವರು: ಶ್ರೀಮಾನ್ ಭೀಮರಾಯಪ್ಪ ಬಾಳಪ್ಪ, ಮಮದಾಪೂರ, ಬೆಳಗಾವಿ; ಸಚಿತ್ರ, ಕ್ರೌನ್ ಅ. ೮ + ೯೬; ಬೆಲೆ, ರೂ. ೧.

೧೨. ವ್ಯವಸಾಯದ ಮಣ್ಣುಗಳು—ಲೇಖಕರು: ಶ್ರೀಮಾನ್ ಕೂರಪಾಡು ಗುಂಡಪ್ಪ, ಬಿ.ಎ.; ಮೈಸೂರು ವಿಶ್ವವಿದ್ಯಾನಿಲಯದ ಸರ್ ಕೆ. ಪಿ. ಪುಟ್ಟಣ್ಣಚೆಟ್ಟರ ಪುದುವಟ್ಟಿನ ಪ್ರಕಟನ ಮಾಲೆ ೪; ಫೂ. ಅ. ೧೦ + ೮೦; ಬೆಲೆ, ೨ ಆಣೆ.

೧೩. ಆಕಾಶಯಾನ—ಲೇಖಕರು: ಶ್ರೀಮಾನ್ ಬಿ. ಕೆ. ಎನ್. ರಾವ್; ಮೈಸೂರು ವಿಶ್ವವಿದ್ಯಾನಿಲಯದ ಸರ್ ಕೆ. ಪಿ. ಪುಟ್ಟಣ್ಣಚೆಟ್ಟರ ಪುದುವಟ್ಟಿನ ಪ್ರಕಟನಮಾಲೆ ೫; ಫೂ. ಅ. ii + ೧೩೪; ಬೆಲೆ, ೨ ಆಣೆ.

೧೪. ದೈವಬಲ ಮತ್ತು ಲೀಲಾಮಣಿ—ಲೇಖಕರು ಮತ್ತು ಪ್ರಕಾಶಕರು: ಶ್ರೀಮಾನ್ ಕೆ. ಎಲ್. ಐಯ್ಯರ್; ಕ್ರೌನ್ ಅ. ೩೦; ಬಾಲಮಧುರಾವಳಿ ಕುಸುಮ ೧; ಬೆಲೆ, ೩ ಆಣೆ.

೧೫. ಮೈಸೂರಿನ ಮಹನೀಯರು—ಸಂಪಾದಕರು: ಶ್ರೀಮಾನ್ ಜಿ. ಎಸ್. ಕೃಷ್ಣರಾವ್; ಕ್ರೌನ್ ಅ. ೬ + ೫೧; ಕಥಾಚಂದ್ರಿಕಾ ಗ್ರಂಥಮಾಲೆ ೧; ಬೆಲೆ, ೬ ಆಣೆ.

೧೬. ವೀರಶೈವ ಸಮಾಜ ಸೇವಾಸಂಘದ (ಬೆಂಗಳೂರು) ನಾಲ್ಕನೆಯ ಐದನೆಯ ಮತ್ತು ಆರನೆಯ ವರ್ಷಗಳ ವರದಿ.

---

# ವಸ್ತುಕೋಶ

ಕಳೆದ ತಿಂಗಳಿನ ಹನ್ನೊಂದನೆಯ ತಾರೀಖು ಕನ್ನಡದ ಅಭಿಮಾನಿಗಳಿಗೆ ಬಹು ಸಂತೋಷವನ್ನು ನೀಡಿದ ಒಂದು ದಿನ. ಅಂದು ಕರ್ಣಾಟಕ ಸಂಘಗಳ ಚರಿತ್ರೆಯಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡಬೇಕಾದ ಒಂದು ಅಪೂರ್ವ ಶುಭಸಂಗತಿಯು ನೆರವೇರಿತು. ಕರ್ಣಾಟಕ ರತ್ನ ಸಿಂಹಾಸನಾಧೀಶ್ವರರೂ ಮೈಸೂರು ವಿಶ್ವವಿದ್ಯಾನಿಲಯದ ಛಾನ್ಸೆಲರವರೂ ಆದ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಮಹಾಸ್ವಾಮಿಯವರು ಆ ದಿವಸ ಶಿವಮೊಗ್ಗ ನಗರದಲ್ಲಿ ಶ್ರೀಮಾನ್ ಹಸೂಡಿ ವೆಂಕಟಶಾಸ್ತ್ರಿಗಳು ಮುವ್ವತ್ತುಸಾವಿರ ರೂಪಾಯಿ ಮುಟ್ಟಿಸಿ ಕರ್ಣಾಟಕ ಸಂಘಕ್ಕೆ ಕಟ್ಟಿಸಿಕೊಟ್ಟ ಭವ್ಯವಾದ ನೂತನ ಭವನದ ಪ್ರಾರಂಭೋತ್ಸವವನ್ನು ನೆರವೇರಿಸಿಕೊಟ್ಟರು. ಶ್ರೀಮಾನ್ ಶಾಸ್ತ್ರಿಗಳವರೂ ಶಿವಮೊಗ್ಗ ಕರ್ಣಾಟಕ ಸಂಘದ ಸದಸ್ಯರೂ ಮಹಾಸ್ವಾಮಿಯವರಿಗೆ ಮುಂದಿನ ಬಿನ್ನವತ್ತಳೆಯನ್ನು ಅರ್ಪಿಸಿದರು :

ಕನ್ನಡಕ್ಕೆ ಒಂದು ಗುಡಿ

ಮಹಾಸ್ವಾಮಿ,

ಮಹಾಸ್ವಾಮಿಯವರ ಮಲೆನಾಡಿನ ಪ್ರವಾಸ ಸುಖವಾಗಿಯೂ ಆನಂದ ದಾಯಕವಾಗಿಯೂ ನಡೆಯಲೆಂದೂ, ಮಲೆನಾಡಿನ ಸೊಗಸಾದ ನೋಟಗಳು ಮಹಾ ಸ್ವಾಮಿಯವರಿಗೆ ಹೃದಯಂಗಮವಾಗಲೆಂದೂ ವಿನಯಪೂರ್ವಕವಾಗಿ ಹಾರೈಸಿ, ಮಹಾಪ್ರಭುಗಳವರಿಗೆ ಸುಖಾಗಮನವನ್ನು ಬಯಸಲು ಅಪ್ಪಣೆ ಬೇಡುತ್ತೇವೆ, ಮಹಾಸ್ವಾಮಿ.

ಮಹಾಸ್ವಾಮಿಯವರು ರಾಜ್ಯಸೂತ್ರವನ್ನು ವಹಿಸಿದ ಮೇಲೆ ಎರಡು ಬಾರಿ ಮಲೆನಾಡಿನಲ್ಲಿ ಪ್ರವಾಸಮಾಡಿರುವ ಅನುಗ್ರಹವನ್ನೂ, ಪ್ರಜಾವರ್ಗದ ಆಶೋತ್ತರ ಗಳು ಮತ್ತು ಕುಂದುಕೊರತೆಗಳನ್ನು ಸ್ವತಃ ದಿವ್ಯಚಿತ್ತಕ್ಕೆ ತಂದುಕೊಳ್ಳುತ್ತಿರುವ ಪ್ರಜಾ ವಾತ್ಸಲ್ಯವನ್ನೂ ಎಡೆಬಿಡದೆ ನೆನೆಯುತ್ತ ಪ್ರಭುಗಳವರ ದರ್ಶನದಿಂದ ಆನಂದಿಸಿ ಮಹಾ ಪ್ರಭುಗಳ ಅಭ್ಯುದಯವನ್ನು ಸದಾ ಹಾರೈಸುವವರಾಗಿರುತ್ತೇವೆ, ಮಹಾಸ್ವಾಮಿ.

ಮಹಾಸ್ವಾಮಿಯವರ ಪ್ರಜೆಗಳಲ್ಲಿ ಕನ್ನಡದ ಮೂಲಕ ಜ್ಞಾನಪ್ರಸಾರ ಮಾಡ ಬೇಕೆಂಬ ಉದಾತ್ತಧ್ಯೇಯದಿಂದ ಹನ್ನೆರಡು ವರ್ಷಗಳ ಹಿಂದೆ ಈ ನಮ್ಮ ಕರ್ಣಾ

ಟಕ ಸಂಘ ಆರಂಭವಾಯಿತು. ಆ ಪವಿತ್ರ ಕಾರ್ಯದಲ್ಲಿ ಅದು ಜಿಲ್ಲೆಯ ಮುಖ್ಯ ನಗರವಾದ ಶಿವಮೊಗ್ಗದಲ್ಲಿಯೂ ಜಿಲ್ಲೆಯ ಇತರ ಪ್ರಾಂತಗಳಲ್ಲಿಯೂ, ವಿಶೇಷವಾಗಿ ಹಳ್ಳಿಗಳಲ್ಲಿಯೂ ಉಪನ್ಯಾಸಗಳನ್ನೇರ್ಪಡಿಸಿ, ವಿದ್ವಾಂಸರನ್ನು ಆಹ್ವಾನಿಸಿ, ಸಮ್ಮೇಳನಗಳನ್ನು ಕೂಡಿಸಿ, ಹಬ್ಬಗಳನ್ನು ಬೆಳಸಿ, ಪುಸ್ತಕಗಳನ್ನು ಪ್ರಕಟಿಸಿ, ಜನಾಂಗದ ಆತ್ಮವನ್ನು ಅರಳಿಸುವ ದಿವ್ಯ ಸಾಹಿತ್ಯದ ಹೊಸ ಬೆಳಕನ್ನು ಹರಡಿ, ತನ್ನ ಕೈಯಲ್ಲಾದಷ್ಟು ದುಡಿದಿದೆ. ಈ ಸಂಘದ ಕಾರ್ಯನಿರ್ವಾಹಕರ ಉಜ್ಜ್ವಲವಾದ ಕನ್ನಡ ನುಡಿಯ ಮೇಲಣ ಅಭಿಮಾನ, ಕನ್ನಡ ಜನತೆಯ ಮೇಲಿರುವ ಪ್ರೇಮ, ಕನ್ನಡ ನಾಡಿನ ಮುನ್ನಡೆಯನ್ನು ಕುರಿತ ಉತ್ಸಾಹ—ಇವುಗಳನ್ನು ಕಂಡು, ಪ್ರಜಾಸೇವೆಯೇ ರಾಜಸೇವೆಯೆಂದು ಅರಿತು, ನನ್ನ ಅಲ್ಪಸಹಾಯವನ್ನೂ ಕೂಡಿಸಬೇಕೆಂದು ಭಗವತ್ಪ್ರೇರಣೆಯಾಗಿ, ಸಂಘಕ್ಕೆ ನೆಲೆಯಾಗಿ ಈ ಮಂದಿರವನ್ನೂ ಮೂಲನಿಧಿಯಾಗಿ ಒಂದು ಸಾವಿರ ರೂಪಾಯಿಗಳನ್ನೂ ನನ್ನ ಕಾಣಿಕೆಯಾಗಿ ಅರ್ಪಿಸಿರುತ್ತೇನೆಂದು ದಿವ್ಯಸನ್ನಿಧಿಯಲ್ಲಿ ಅರಿಕೆಮಾಡಿಕೊಳ್ಳಲು ಅವಕಾಶ ಬೇಡುತ್ತೇನೆ, ಮಹಾಸ್ವಾಮಿ.

ಕರ್ಣಾಟಕ ರತ್ನಸಿಂಹಾಸನಾಧೀಶ್ವರರಾಗಿ, ಕರ್ಣಾಟಕ ಸಂಸ್ಕೃತಿ ವೈಭವಗಳಿಗೆ ಕೇಂದ್ರಸ್ಥಾನವಾಗಿ, ಕನ್ನಡಿಗರೆಲ್ಲರ ಭಕ್ತಿಗೌರವ ವಿಶ್ವಾಸಗಳಿಗೆ ಪಾತ್ರರಾಗಿ, ತಾವೂ ತಮ್ಮ ಹಿರಿಯರೂ ಮೊದಲಿಂದಲೂ ಕನ್ನಡಿಗರನ್ನೂ ಕನ್ನಡವನ್ನೂ ಕಾಪಾಡಿ ಬೆಳಸಿಕೊಂಡು ಬರುತ್ತಿರುವುದು ದೇಶದ ಭಾಗ್ಯೋದಯವೆಂದು ಭಾವಿಸುತ್ತೇವೆ. ಸಾವಿರದ ಒಂಭೈನೂರ ನಲವತ್ತರಲ್ಲಿ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬದ ಉತ್ಸವದಲ್ಲಿ ತಮ್ಮ ಪೂಜ್ಯ ದೊಡ್ಡಪ್ಪನವರೊಡನೆ ತಾವೂ ಬಿಜಯಮಾಡಿಸಿ ಅಪ್ಪಣೆಕೊಟ್ಟ ಆಶೀರ್ವಾದ ವಾಕ್ಯಗಳು ಯಾವಾಗಲೂ ನಮ್ಮ ಕಿವಿಗಳಲ್ಲಿ ಮೊಳಗುತ್ತ ಮಾರ್ಗದರ್ಶಕವಾಗಿವೆ. ಮಹಾಸ್ವಾಮಿಯವರು ಪರಿಷತ್ತಿನ ಅಧ್ಯಕ್ಷರಾಗಿದ್ದು, ಈಗ ಮಹಾಪೋಷಕರಾಗಿ ದಯಪಾಲಿಸುತ್ತಿರುವ ಪ್ರೋತ್ಸಾಹ ಕನ್ನಡ ನುಡಿಗೆ ಮತ್ತು ಸಂಸ್ಕೃತಿಗೆ ಪ್ರಾಶಸ್ತ್ಯವನ್ನೂ ಬಲವನ್ನೂ ನೀಡುತ್ತಿದೆ. ಕರ್ಣಾಟಕ ಸಂಸ್ಕೃತಿಯ ಮತ್ತು ಸಾಹಿತ್ಯದ ಪ್ರಚಾರ ಕಾರ್ಯದಲ್ಲಿ ಒಂದು ಗಣ್ಯಸಂಸ್ಥೆಯಾಗಿ ಸೇವೆ ಸಲ್ಲಿಸಲು ಕಂಕಣಬದ್ಧವಾಗಿರುವ ಶಿವಮೊಗ್ಗದ ಕರ್ಣಾಟಕ ಸಂಘದ ಈ ನೂತನ ಭವನದ ಪ್ರಾರಂಭೋತ್ಸವವನ್ನು ಮಹಾಸ್ವಾಮಿಯವರು ನಡಸಿಕೊಡಬೇಕೆಂಬ ನಮ್ಮ ಹಂಬಲನ್ನು ಉದಾತ್ತಚಿತ್ತದಿಂದ ನೆರವೇರಿಸಿಕೊಟ್ಟು ಮಹಾಸ್ವಾಮಿಯವರು ಅನುಗ್ರಹಿಸಿರುವುದಕ್ಕಾಗಿ ನಾವು ಎಷ್ಟು ಕೃತಜ್ಞರಾಗಿದ್ದೇವೆಂಬುದನ್ನು ಅರುಹಲು ಶಕ್ತರಲ್ಲ, ಮಹಾಸ್ವಾಮಿ.

ಶ್ರೀ ಶಾರದಾಂಬೆಯ ಆರಾಧನೆಗಾಗಿ ನಿರ್ಮಿಸಿರುವ ಈ ಭವನವನ್ನು ಮಹಾಸ್ವಾಮಿಯವರು ತಮ್ಮ ಅಮೃತಹಸ್ತದಿಂದ ತೆರೆದು ನಮ್ಮ ಸಂಘದಿಂದ ಜ್ಞಾನದಾನ ಸಮಾರಂಭ ನಿರಂತರವಾಗಿ ನಡೆಯುತ್ತಿರಲೆಂದು ಆಶೀರ್ವದಿಸಬೇಕಾಗಿ ವಿನಯದಿಂದ ಪ್ರಾರ್ಥಿಸಿಕೊಳ್ಳುತ್ತೇವೆ, ಮಹಾಸ್ವಾಮಿ.

ಶ್ರೀ ಚಾಮುಂಡೇಶ್ವರೀ ಮಹಾತಾಯಿ ಮಹಾಸ್ವಾಮಿಯವರಿಗೂ ರಾಜಮನೆತನದವರಿಗೂ ದೀರ್ಘಾಯುರಾರೋಗ್ಯಭಾಗ್ಯಾದಿಗಳನ್ನು ಕರುಣಿಸಲೆಂದು ಅನನ್ಯ ಶ್ರದ್ಧೆಯಿಂದ ಪ್ರಾರ್ಥಿಸುತ್ತಿರುತ್ತೇವೆ, ಮಹಾಸ್ವಾಮಿ.

ಶಿವಮೊಗ್ಗ,
೧೧ನೆಯ ಫೆಬ್ರವರಿ, ೧೯೪೩.

ಇಂತು, ಮಹಾಸ್ವಾಮಿಯವರ
ರಾಜಭಕ್ತ ಪ್ರಜೆಗಳು,
ಹಸೂಡಿ ವೆಂಕಟಶಾಸ್ತ್ರಿ
ಮತ್ತು ಶಿವಮೊಗ್ಗ ಕರ್ಣಾಟಕ
ಸಂಘದ ಸದಸ್ಯರು.

ಮಹಾಸ್ವಾಮಿಯವರು ಮುಂದಿನ ಉತ್ತರವನ್ನು ದಯಪಾಲಿಸಿದರು :

"ಇಲ್ಲಿನ ಕರ್ಣಾಟಕ ಸಂಘದ ಕಟ್ಟಡದ ಪ್ರಾರಂಭೋತ್ಸವವನ್ನು ಈ ದಿನ ನೆರವೇರಿಸುವ ಅವಕಾಶ ಒದಗಿರುವುದು ನಮಗೆ ವಿಶೇಷ ಸಂತೋಷವನ್ನುಂಟುಮಾಡಿದೆ. ಕನ್ನಡ ಭಾಷೆಯ ಅಭಿವೃದ್ಧಿಗೂ, ಕನ್ನಡ ಸಂಸ್ಕೃತಿಯ ಪ್ರಸಾರಕ್ಕೂ ನಿಮ್ಮ ಸಂಘವು ಹಲವು ವಿಧಗಳಲ್ಲಿ ಮಾಡಿರುವ ಪ್ರಯತ್ನವನ್ನು ಬಿನ್ನವತ್ತಳೆಯಲ್ಲಿ ಸೂಚಿಸಿದ್ದೀರಿ. ಪುರಾತನಕಾಲದಿಂದಲೂ ಸಾಹಿತ್ಯ ಮತ್ತು ಕಲೆಗಳ ಬೆಳವಣಿಗೆಗೆ ಪ್ರಸಿದ್ಧವಾಗಿರುವ ಈ ಪ್ರಾಂತ್ಯದಲ್ಲಿ ಈ ರೀತಿಯ ಪ್ರಯತ್ನವು ನಡೆಯುವುದು ಸಹಜವೇ ಆಗಿದೆ. ಶ್ರೀ ಹಸೂಡಿ ವೆಂಕಟಶಾಸ್ತ್ರಿಗಳು ಉದಾರವಾಗಿ ಧನಸಹಾಯ ಮಾಡಿ ಕಟ್ಟಿಸಿರುವ ಕಟ್ಟಡವು ಸಂಘದ ಕಾರ್ಯಕಲಾಪಗಳಿಗೆ ಸಹಕಾರಿಯಾಗಿ ಇಲ್ಲಿ ನಡೆಯುತ್ತಿರುವ ಭಾಷಾಸೇವೆಯ ಮುಖ್ಯಕೇಂದ್ರವಾಗಿ ಪರಿಣಮಿಸಲೆಂದು ಹಾರೈಸುತ್ತೇವೆ. ಕನ್ನಡದಲ್ಲಿ ಅಭಿಮಾನವೂ ಆಸಕ್ತಿಯೂ ವಿಶೇಷವಾಗಿರುವ ಈ ಜಿಲ್ಲೆಯಲ್ಲಿ ಸಾಹಿತ್ಯ ಸಂಸ್ಕೃತಿಗಳ ಅಭಿವೃದ್ಧಿಗೆ ಇನ್ನೂ ಹೆಚ್ಚು ಹೆಚ್ಚಾಗಿ ಉತ್ತೇಜನ ದೊರೆಯುವುದೆಂದು ನಾವು ನಂಬಿದ್ದೇವೆ. ಭಕ್ತಿ ವಿಶ್ವಾಸಗಳನ್ನು ಸೂಚಿಸಿ ನಮಗೆ ಶುಭಾಶಯವನ್ನು ಕೋರಿರುವುದಕ್ಕಾಗಿ ನಿಮ್ಮನ್ನು ವಂದಿಸಿ, ಕರ್ಣಾಟಕ ಸಂಘದ ಕಟ್ಟಡದ ಪ್ರಾರಂಭೋತ್ಸವವನ್ನು ಸಂತೋಷದಿಂದ ನೆರವೇರಿಸುತ್ತೇವೆ."

ಅನಂತರ ಮಹಾಸ್ವಾಮಿಯವರು ಸಂಘದ ಕಟ್ಟಡವನ್ನು ತೆರೆದು ಒಳಕ್ಕೆ ಪ್ರವೇಶಮಾಡಿ, ಸಂಘದ ಯೋಗಕ್ಷೇಮವನ್ನು ವಿಚಾರಿಸಿ, ಕಟ್ಟಡ ಚೆಲುವಾಗಿದೆ

ಯೆಂದು ಸಂತೋಷಿಸಿ, ಶ್ರೀ ಹಸೂಡಿ ವೆಂಕಟಶಾಸ್ತ್ರಿಗಳು ಸಾಹಿತ್ಯಪರಿಷತ್ತಿಗೆ ತುಂಬಾ ಉಪಕಾರಮಾಡಿದ್ದಾರೆಂದು ಅಪ್ಪಣೆ ಕೊಡಿಸಿ, ಇವರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ನಾಡಿನ ಇತರ ಧನಿಕರೂ ಅನುಸರಿಸಲೆಂದು ಹಾರೈಸಿದರು.

ಶಿವಮೊಗ್ಗದ ಕರ್ಣಾಟಕ ಸಂಘವು ಈಗ ಹನ್ನೆರಡು ವರ್ಷಗಳಿಂದ ಕನ್ನಡಕ್ಕೆ ಮಹತ್ತಾದ ಸೇವೆ ಸಲ್ಲಿಸಿದೆ. ಶ್ರೀಮಾನರಾದ ಸುಬ್ರಹ್ಮಣ್ಯಶಾಸ್ತ್ರಿಗಳು, ಚಿದಂಬರಂ, ಕೃಷ್ಣಮೂರ್ತಿರಾವ್, ವಿಷ್ಣುಭಟ್ಟ, ಭೂಪಾಲಂ ಸೋದರರು ಮುಂತಾದ ಶಿವಮೊಗ್ಗ ನಿವಾಸಿ ಮಹಾಜನರ ಕನ್ನಡದ ಅಭಿಮಾನವು ಈಗ ಎಲ್ಲೆಲ್ಲಿಯೂ ವಿದಿತವಾಗಿದೆ. ಇವರ, ಮುಖ್ಯವಾಗಿ ಸಂಘದ ಕಾರ್ಯದರ್ಶಿಗಳ, ತ್ಯಾಗ ಶ್ರಮ ಚಟುವಟಿಕೆಗಳ ಫಲ ವಾಗಿ ಮಲೆನಾಡು ಪ್ರಾಂತದಲ್ಲಿ ಆಗಿರುವ ಪುನರುಜ್ಜೀವನಕಾರ್ಯ ಸ್ವಲ್ಪವಲ್ಲ; ಅದು ಮೈಸೂರು ಆದ್ಯಂತಕ್ಕೂ ಕರ್ಣಾಟಕಕ್ಕೂ ಹಬ್ಬುತ್ತಿದೆ. ಇದಕ್ಕಾಗಿ, ಈ ಸಂತೋಷ ಸಮಾರಂಭ ಸಂದರ್ಭದಲ್ಲಿ ನಾವು ಅವರನ್ನು ಮೈಸೂರು ಬೆಂಗಳೂರು ಕರ್ಣಾಟಕ ಸಂಘಗಳ ಪರವಾಗಿ ಅಭಿನಂದಿಸುತ್ತೇವೆ. ಅವರ ಸಂಘವು ಮಾಡಿರುವ ಕೆಲಸದ ಮಹತ್ವಕ್ಕೆ ಅನುರೂಪವಾಗಿ ಅವರಿಗೆ ಶ್ರೀಮಾನ್ ಹಸೂಡಿ ವೆಂಕಟಶಾಸ್ತ್ರಿಗಳಂಥವರ ಘನೌದಾರ್ಯವೂ ದೊರಕಿತು. ಜ್ಞಾನದಾನಕ್ಕಾಗಿ, ಕನ್ನಡಕ್ಕಾಗಿ, ಕೈತುಂಬ ಹೀಗೆ ದಾನಮಾಡಿದ ಶ್ರೀ ಶಾಸ್ತ್ರಿಗಳು ಮಾನ್ಯರು, ಧನ್ಯರು. ಅವರ ಔದಾರ್ಯಕ್ಕೆ, ಮಾನ್ಯತೆಗೆ, ಧನ್ಯತೆಗೆ ಅನುರೂಪವಾಗಿ ರಾಜಗೌರವವೂ ದೊರೆಯಿತು. ಕನ್ನಡ ನಾಡಿನ ಪ್ರಭುಗಳೇ ಸ್ವಂತವಾಗಿ ಮಂದಿರದ ಆರಂಭೋತ್ಸವವನ್ನು ನೆರವೇರಿಸಿದರು. ಕನ್ನಡದ ಮೇಲಿನ ಈ ಅಭಿಮಾನಕ್ಕಾಗಿ, ಗೌರವಕ್ಕಾಗಿ, ಮಮತೆಗಾಗಿ ನಾವು ಕನ್ನಡಿಗರ ಪರವಾಗಿ ಮಹಾಪ್ರಭುಗಳವರನ್ನು ವಂದಿಸುತ್ತೇವೆ.

ಕನ್ನಡ ಸಾಹಿತ್ಯಕ್ಕೆ ನೃಪತುಂಗನ ಕಾಲದಿಂದಲೂ ರಾಜಾಶ್ರಯವೇ ಹಿರಿಯ ಬೆಂಬಲ. ಇದು ಕಾಲಕ್ರಮದಲ್ಲಿ ವಿಜಯನಗರದ ರಾಜರ ಅನಂತರ ಮೈಸೂರ ಒಡೆಯರನ್ನು ಆಶ್ರಯಿಸಿದೆ. ಗೋದಾವರೀ ತೀರದಿಂದ ಹರಿದುಬಂದು ಅದು ಕಾವೇರೀ ತೀರದಲ್ಲಿ ಹಿರಿಯ ಕೆರೆಯಾಗಿದೆ. ಕಾವೇರಿಯಿಂದ ಶಕ್ತಿ, ಭುಕ್ತಿ, ಬೆಳಕು ಎಲ್ಲಾ ಬರುತ್ತಿದೆ. ಇದು ನೀರಿಗೂ ಸರಿ ಮಾತಿಗೂ ಸರಿ. ಅವುಗಳ ಯೋಗಕ್ಷೇಮದಲ್ಲಿ ನಮ್ಮ ಶ್ರೀಮನ್ಮಹಾರಾಜರವರು ಅನವರತ ನಿರತರಾಗಿರುವುದಕ್ಕೆ ನಿದರ್ಶನವಾಗಿ ಇಂಥ ಒಂದು ಸಂಗತಿಯೇ ಸಾಕು.

ಕನ್ನಡ ದೇವಿಯ ಆರಾಧನೆಗಾಗಿ ಇದುವರೆಗೆ ಇದ್ದ ಮಂದಿರಗಳೆಂದರೆ, ಧಾರ ವಾಡದ "ಚಾಮರಾಜ ಮಂದಿರ" ಬೆಂಗಳೂರಿನ "ಕೃಷ್ಣರಾಜ ಪರಿಷನ್ಮಂದಿರ." ಇವುಗಳು ಆಳಿದ ಮೈಸೂರು ಮಹಾರಾಜರವರ ಹೆಸರುಗಳನ್ನು ಕನ್ನಡದ ಚರಿತ್ರೆ

ಯಲ್ಲಿ ಶಾಶ್ವತಗೊಳಿಸಿವೆ. ದಿವಂಗತರಾದ ನಾಲ್ವಡಿ ಕೃಷ್ಣರಾಜ ಒಡೆಯರವರು, ಯುವರಾಜ ಕಂಠೀರವ ನರಸರಾಜ ಒಡೆಯರವರು, ಸರದಾರ್ ಎಂ. ಕಾಂತರಾಜ ಅರಸರವರು ಮುಂತಾದವರ ಮೇಲ್ಪಂಕ್ತಿಯನ್ನು ಅನುಸರಿಸಿ ಸರ್ ಕೆ. ಪಿ. ಪುಟ್ಟಣ್ಣ ಚೆಟ್ಟರು ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು ಮುಂತಾದ ಅವರ ಗಣ್ಯ ಪ್ರಜೆಗಳೂ ಭಾಷಾವತ್ಸಲರೂ ಕನ್ನಡಕ್ಕೆ ಮುಕ್ತ ಹಸ್ತದಿಂದ ದಾನಮಾಡಿದ್ದಾರೆ. ಶ್ರೀಮಾನ್ ಹಸೂಡಿ ವೆಂಕಟಶಾಸ್ತ್ರಿಗಳ ದಾನವು ಈ ಉನ್ನತ ಶ್ರೇಣಿಗೆ ಸೇರಿ ಸಕಲ ಸನ್ಮಾನ್ಯವಾಗಿದೆ. ಗೋದಾನ ಮಾಡಿದವರು ಹಸುವನ್ನು ಸಾಕಲೆಂದು ಮೇಲೆ ದಕ್ಷಿಣೆಯನ್ನೂ ಕೊಟ್ಟಂತೆ, ಅವರು ಮಂದಿರದ ಮೇಲೆ ಅದರ ಮೂಲಧನದ ಬೀಜವಾಗಿ ಒಂದು ಸಾವಿರ ರೂಪಾಯಿಗಳ ಕಾಣಿಕೆಯನ್ನೂ ಕೊಟ್ಟಿದ್ದಾರೆ. ಇದು ಗಿಡವಾಗಿ, ಮರವಾಗಿ, ಫಲಬಿಡಲಿ. ಶಿವಮೊಗ್ಗದ ಕರ್ಣಾಟಕ ಸಂಘವು ಇದಕ್ಕಿಂತ ಹೆಚ್ಚಿನ ಕೆಲಸಮಾಡಿ ಇನ್ನೂ ಗಣ್ಯತೆ ಪಡೆಯಲಿ, ಪ್ರೋತ್ಸಾಹ ಪಡೆಯಲಿ; ಮಿಕ್ಕ ಕರ್ಣಾಟಕ ಸಂಘಗಳೂ ಹೀಗೇ ಕೆಲಸ ಮಾಡಲಿ, ಯೋಗ್ಯತೆ ಮಾನ್ಯತೆಗಳನ್ನು ಪಡೆಯಲಿ; ಕನ್ನಡ ಬೆಳೆಯಲಿ, ಕನ್ನಡಜನ ಮುಂದೆ ಬರಲಿ; ಎಂದು ನಾವು ಪ್ರಾರ್ಥಿಸುತ್ತೇವೆ.

* * *

**ನಮ್ಮ ನಾಡಿನ ವಿದ್ಯಾಭ್ಯಾಸ**

ಮೊನ್ನಿನ ಡಿಸೆಂಬರ್ ತಿಂಗಳು ಎಂಟನೆಯ ತಾರೀಖಿನ ದಿವಸ ಶ್ರೀಮಾನ್ ಕೆ. ಬಸವರಾಜ ಅರಸ್, ಎಂ.ಎ., ಎಲ್‌ಎಲ್.ಬಿ., ಅವರು ಮೈಸೂರು ನೂತನ ವಿದ್ಯಾಸಮಿತಿಯ ಆರಂಭಭಾಷಣ ಮಾಡಿದರು. ಅವರು ಯೂರೋಪು ಅಮೆರಿಕಾ ಖಂಡಗಳಲ್ಲಿ ಸಂಚರಿಸಿ ಅಲ್ಲಿನ ವಿದ್ಯಾಸಂಸ್ಥೆಗಳ ಕಾರ್ಯಕಲಾಪಗಳನ್ನು ಕಣ್ಣಾರ ನೋಡಿ ತಿಳಿದುಕೊಂಡು ಬಂದವರು. ವಿಶ್ವವಿದ್ಯಾನಿಲಯದ ದೊಡ್ಡ ಪ್ರಶಸ್ತಿಗಳನ್ನು ಸಂಪಾದಿಸಿ, ಇಲ್ಲಿನ ವಿದ್ಯಾಭ್ಯಾಸ ಸ್ಥಿತಿಯನ್ನು ಉತ್ಸಾಹದಿಂದಲೂ ಅಭಿಮಾನದಿಂದಲೂ ವಿಮರ್ಶೆ ಮಾಡಿರತಕ್ಕವರು. ಇಂಥವರ ಅಭಿಪ್ರಾಯಗಳು ಎಲ್ಲರಿಗೂ ಮನನ ಮಾಡಲು ಯೋಗ್ಯವಾದವು. ಆದ್ದರಿಂದ ಮೇಲೆ ಕಂಡ ಅವರ ಆ ಭಾಷಣದಿಂದ ಮುಖ್ಯವಾದ ಭಾಗವನ್ನು ಇಲ್ಲಿ ಎತ್ತಿಕೊಟ್ಟಿದ್ದೇವೆ.—

"ನಮ್ಮ ನಾಡಿನ ಎಲ್ಲಾ ಭಾಗಗಳಲ್ಲಿಯೂ, ಪ್ರತಿ ವರ್ಷವೂ ಪ್ರಾಥಮಿಕ ಶಾಲೆಗಳು ಹೊಸದಾಗಿ ತೆರೆಯಲ್ಪಡುತ್ತಿದ್ದರೂ ಇನ್ನೂ ಶಾಲೆಗಳ ಸಂಖ್ಯೆಯು ತೀರ ಕಡಿಮೆಯಾಗಿಯೇ ಇರುತ್ತದೆ. ಅಜ್ಞಾನ, ಬಡತನ, ರೋಗರುಜಿನಗಳ ಫಲವಾಗಿ ಈ ಶಾಲೆಗಳು ಯಶಸ್ವಿಯಾಗಿ ಕೆಲಸಮಾಡಲು ಅನೇಕ ತೊಂದರೆಗಳಿರುತ್ತವೆ.

ಒಂದು ದೇಶದ ವಿದ್ಯಾಭ್ಯಾಸದ ಏಳಿಗೆಗೆ ಅಲ್ಲಿನ ಸರ್ಕಾರದ ನಾನಾ ಇಲಾಖೆಗಳ ಸಹಾಯ ಸಹಕಾರಗಳೂ ಜನರ ಬೆಂಬಲವೂ ಅವಶ್ಯಕ. ಉಪಾಧ್ಯಾಯರ ಯೋಗ ಕ್ಷೇಮವೂ ಪಾಠಶಾಲೆಗಳ ಯೋಗಕ್ಷೇಮವೂ ತಮ್ಮದೆಂದು ಭಾವಿಸಿರುವುದರಿಂದಲೇ ರಷ್ಯಾ, ಜಪಾನ್, ಅಮೆರಿಕಾ ದೇಶಗಳಲ್ಲಿ ವಿದ್ಯಾಭ್ಯಾಸವು ಹೆಚ್ಚು ಮುಂದುವರಿಯಲು ಅವಕಾಶವಾಗಿರುತ್ತದೆ. ನಮ್ಮ ದೇಶದಲ್ಲಿ ಈ ಪರಿಸ್ಥಿತಿ ಇಲ್ಲದಿರುವುದು ಶೋಚನೀಯ ವಾಗಿದೆ. ಉತ್ಸಾಹ ದಕ್ಷತೆಗಳಿಂದ ಕೂಡಿದ ದೇಶಾಭಿಮಾನಿಗಳಾದ ಉಪಾಧ್ಯಾಯ ರಿಂದಲೂ, ಇವರಿಗೆ ತಕ್ಕ ಪ್ರೋತ್ಸಾಹ ಮತ್ತು ಮನ್ನಣೆಯನ್ನು ಕೊಡುವ ಸರ್ಕಾರ ಮತ್ತು ಜನತೆಯಿಂದಲೂ ಪರಿಸ್ಥಿತಿಯು ಉತ್ತಮಗೊಳ್ಳುವುದು. ಪ್ರಾಥಮಿಕ ಶಾಲೆ ಗಳಲ್ಲಿ ಉಪಾಧ್ಯಾಯಿನಿಯರ ಸಂಖ್ಯೆ ಅಧಿಕವಾಗಬೇಕು. ಕಾಲೇಜು ತರಗತಿಗಳಲ್ಲಿ ವ್ಯಾಸಂಗಮಾಡಲು ಅರ್ಹರಾದವರು ಹೊರತು ಉಳಿದ ವಿದ್ಯಾರ್ಥಿಗಳಿಗೆ ತಮ್ಮ ತಮ್ಮ ಅಭಿರುಚಿಗಳಿಗೆ ತಕ್ಕಂತೆ ವೃತ್ತಿಶಿಕ್ಷಣವನ್ನು ಪಡೆಯಲು ಅವಕಾಶವನ್ನು ಕಲ್ಪಿಸಬೇಕು. ಇವೆರಡೂ ಅಗತ್ಯವಾದ ಕಾರ್ಯಗಳಾಗಿವೆ. ಯುದ್ಧ ಮುಗಿದ ನಂತರ ಈ ತೆರನಾದ ಪ್ರಯತ್ನಗಳು ಜರುಗಲಿವೆ.

ಪಾಶ್ಚಾತ್ಯ ದೇಶಗಳಲ್ಲಿ ವಿದ್ಯಾರ್ಥಿಗಳ ಸೌಕರ್ಯಕ್ಕಾಗಿ ಅಗಾಧವಾದ ಏರ್ಪಾಡುಗಳನ್ನು ಮಾಡಿರುವರು. ಕ್ಯಾಲಿಫೋರ್ನಿಯದ ವಿಶ್ವವಿದ್ಯಾಲಯದಲ್ಲಿ ವಿದ್ಯಾರ್ಥಿಗಳ ಭೋಜನ, ವಸತಿ, ವ್ಯಾಸಂಗಗಳಿಗೆ ಮಾಡಿರುವ ಏರ್ಪಾಡುಗಳು ಗಮನಾರ್ಹವಾಗಿರುತ್ತವೆ. ನಮ್ಮಲ್ಲಿಯೂ ಈ ರೀತಿಯಾದ ಏರ್ಪಾಡುಗಳನ್ನು ಹೊಂದಿರುವ ವಿದ್ಯಾಸಂಸ್ಥೆಗಳು ಅತಿ ವಿರಳವೆಂದೇ ಹೇಳಬೇಕು. ಹಿಂದಿನಕಾಲದ ನಲಂದ ವಿದ್ಯಾನಿಲಯವೂ ಈಗಿನ ವಿಶ್ವಭಾರತಿಯ ಶಾಂತಿನಿಕೇತನವೂ ಮಾದರಿ ಸಂಸ್ಥೆಗಳೆನ್ನಬಹುದು. ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆದಿರುವ ವಿದ್ಯಾನಿಲಯ ಗಳೇ ದೇಶದ ಭಾವೀ ಪ್ರಜೆಗಳಾದ ಇಂದಿನ ವಿದ್ಯಾರ್ಥಿಗಳ ಸರ್ವತೋಮುಖವಾದ ಏಳಿಗೆಗೆ ಅವಕಾಶವನ್ನು ಕಲ್ಪಿಸಬಲ್ಲವು.”—ವಿದ್ಯಾದಾಯಿನಿ.

---

## ಪ್ರಾಚ್ಯ ಲೇಖನಾವಳಿ

**Journal of the Andhra Historical Research Society**—Vol. XIII, Parts 3 and 4. December, 1940 and April, 1941.

1. 'The Soras'—By G. V. SITAPATI.
2. 'Prakrit Inscriptions of the Kings of Andhradesa'—By MUHAMMAD SHAHIDULLAH.

   [Salankayanas ruled from about A.D. 300 to A.D. 50 with their Capital at Vengipura, Modern Pedda-Vegior Vegi seven miles North of Ellore in the West Godavari District. The inscription of Vijayadevavarma is in old Prakrit (A.D. 350) Epi. Indica, Vol. IX, p. 56 ff. In this inscription occur the words ಮಾಹೇಶ್ವರ and ಮುಳುಡ, the latter a Dravidian word, possibly old Telugu, apparently meaning chief of village—a tadbhava of ಮಂಡಲ ?]

3. 'The Pasupatha and other Saiva Schools of Philosophy'—By V. APPA RAO.
4. 'Jainism in Andhradesa'—By B. V. KRISHNA RRO.

**Journal of the Literary Committee of the L.E. Association, Dharwar**—January, 1943.

1. 'Quintessence of Lingayat Religion'—By KUMARA SWAMIJI.

   [The Origin of Linga . . . is to be sought in a symbol of sphere which seems an emblem of an eternity and infinity with all nations. Three things emerge from the labour of Prof. Sakhare: Lingayatism is the faith professed and followed by the Karnataka Veerashaivas: Basava is the founder of this faith and Vachanshasthra are the scriptures that embody the principles of Lingayatism.]

2. 'Veerashaivism'—By V. C. YAGATI.

**The New Review**—March, 1943.

'The Andhras'—By S. R. BALASUBRAHMANYAM.

**ಶಿವಾನುಭವ**—ಜುಲೈ ೧೯೪೨—ಫೆಬ್ರುವರಿ, ೧೯೪೩.

೧. ಗುರುಲಿಂಗ ಜಂಗಮ—ಬ. ಶಿ. ಪಟ್ಟೇದ (ಸಂಪುಟ ೧೬—ಸಂಚಿಕೆ ೧೧ ಮತ್ತು ಸಂಪುಟ ೧೭. ಸಂಚಿಕೆ ೧, ೩, ೪, ೫.)

೨. ಬಸವೇಶ್ವರನ ಚರಿತ್ರೆ—(ಲೇಖಾಂಕಗಳು ೧೧—೧೭)—ಪಿ. ಜಿ. ಹಳಕಟ್ಟಿ.
೩. ವೀರಶೈವರಾಜ ಮನೆತನಗಳ ಚರಿತ್ರೆಗಳು—(ಪು. ೧—೪೦)—ಪಿ. ಜಿ. ಹಳಕಟ್ಟಿ.
೪. ಶಿವಾನುಭವ ಶಬ್ದಕೋಶ—(ಪು. ೧೪೧—೧೭೭).
೫. ಜೀವನದ ಗುರಿ—ಶ್ರೀ ಮಹಾದೇವಸ್ವಾಮಿಗಳು.
೬. ಸಟೀಕ ಏಕೋತ್ತರ ಶತಸ್ಥಲ—(ಪು. ೪೧—೪೮).
೭. ಶಿವಶರಣರ ದೀಕ್ಷಾಕಾಲ—(ಲೇಖಾಂಕಗಳು ೧—೫)—ಶ್ರೀ ಗುರುಮೂರ್ತಿದೇವರು.
೮. ಲಿಂಗಧಾರಣ ಅರ್ಥಾತ್ ಶಿವದೀಕ್ಷೆ—(ಲೇಖಾಂಕಗಳು ೩—೪) ಜೀರಗೆ ಕ. ಬಸಪ್ಪ.
೯. ಲಿಂಗಧಾರಣೆ ಅರ್ಥಾತ್ ಶಿವದೀಕ್ಷೆ—ಕಾನಕಾನಹಳ್ಳಿ ಬಸಪ್ಪ.
೧೦. ದೀಕ್ಷಾವಾದ—ಮಾ. ಸಂ. ಸಂಜಪ್ಪ.
೧೧. ದೀಕ್ಷಾವಾದ ವಿಮರ್ಶೆ—ಶ್ರೀ ಸಿದ್ಧವೀರದೇವರು.
೧೨. ಧಾರಣ ದೀಕ್ಷೆ—ಜಿ. ಟಿ. ಅಕ್ಕಲಯ್ಯನವರು.
೧೩. ವೀರಶೈವಧರ್ಮದ ವೀರಸಂದೇಶವು—ಎಲ್. ಜಿ. ಹಿರೇಮಠ.
೧೪. ವೀರಶೈವ ಧರ್ಮದ ವೈಶಿಷ್ಟ್ಯ—ಎಂ. ಎಸ್. ಮಿಣಜಿಗಿ.
೧೫. ವೀರಶೈವ ಸಮಾಜದ ಆರ್ಥಿಕ ಸುಧಾರಣೆ—ಪಿ. ಜಿ. ಹಳಕಟ್ಟಿ.

**ಜೀವನ**—ಜನವರಿ, ೧೯೪೩.

೧. ಶಬ್ದಮಣಿದರ್ಪಣ (ಗ್ರಂಥಪರೀಕ್ಷಣ)—ರಾ. ಶ್ರೀ ಮುಗಳಿ.
೨. ಕೋಳಿವಾಡಗೌಡರ ಕುಲವೃತ್ತಾಂತ—ಶ್ರೀ ಕುಮಾರವ್ಯಾಸ ಕವಿಯನ್ನು ಕುರಿತು ನಾಲ್ಕು ಕಾಗದ ಪತ್ರಗಳು—ಸಂಗ್ರಾಹಕರು : ಶ್ರೀ ಜೋಶಿ ಶಂಕರಭಟ್ಟ.

**ಭಾರತಿ** (ತೆಲುಗು)—ಫೆಬ್ರವರಿ, ೧೯೪೩.

೧. ಆಂಧ್ರಭಾಷ—ಧಾತುವುಲು—ಕೋರಾಡ ರಾಮಕೃಷ್ಣಯ್ಯ (ಮಾರ್ಚಿಯ ಸಂಚಿಕೆಯಲ್ಲಿಯೂ ಇದೆ).
೨. ಶ್ರೀನಾಥುನಿ ಅಸಾಧಾರಣ ಪ್ರಯೋಗಮುಲು—ಬುಲುಸು ವೆಂಕಟ ರಮಣಯ್ಯ.

(ದೊಡ್ಡು, ಹೆಚ್ಚು, ಮುಂತಾದ ಪ್ರಯೋಗಗಳಿವೆ).

# ಪ್ರಬುದ್ಧ ಕರ್ಣಾಟಕ

---

ಸಂಪುಟ ೨೪

(ಚಿತ್ರಭಾನು ಸಂವತ್ಸರ)




ಮೈಸೂರು:

ಮೈಸೂರು ವಿಶ್ವವಿದ್ಯಾನಿಲಯ

೧೯೪೩

# ವಿಷಯ ಸೂಚಿಕೆ

## ೧. ಕವನಗಳು—

## ೨. ಸಾಹಿತ್ಯವಿಚಾರ—



## ೩. ಶಾಸ್ತ್ರವಿಚಾರ—

ಮೈಸೂರು ಮಹಾರಾಜರವರ ಕಾಲೇಜಿನ

# ಕರ್ಣಾಟಕ ಸಂಘದ ಪ್ರಕಟನೆಗಳು

---

## ಕುಮಾರವ್ಯಾಸ ಪ್ರಶಸ್ತಿ

ಬೆಲೆ, ಕ್ಯಾಲಿಕೊ ಪ್ರತಿ ರೂ. ೨-೮-೦ ; ಸಾದಾ ಪ್ರತಿ ರೂ. ೨-೦-೦

ದೊರೆಯುವ ಸ್ಥಳ :

ಕರ್ಣಾಟಕ ಸಂಘ,
ಸೆಂಟ್ರಲ್ ಕಾಲೇಜು, ಬೆಂಗಳೂರು

ಕರ್ಣಾಟಕ ಸಂಘ,
ಶಿವಮೊಗ್ಗ

---

ಕಿರಿಯಕಾಣಿಕೆ (ಎರಡನೆಯ ಮುದ್ರಣ)—ಕ್ಯಾಲಿಕೊ ಪ್ರತಿ ರೂ. ೧-೮-೦

ತಳಿರು (ಪ್ರತಿಗಳು ಮುಗಿದಿವೆ)—

ಮಾರಾಟಗಾರರು :

ಪ್ರೋಗ್ರೆಸ್ ಬುಕ್ ಸ್ಟಾಲ್, ಮೈಸೂರು

---

ಆಷಾಢಭೂತಿ (ಶ್ರೀ. ಎ. ಎನ್. ಮೂರ್ತಿರಾವ್, ಎಂ.ಎ. ಅವರಿಂದ)—
ಕ್ಯಾಲಿಕೊ ಪ್ರತಿ ರೂ. ೧-೮-೦

ಸಾವಿನ ಸಮಸ್ಯೆ (ಶ್ರೀ. ವೆಂಬಾರ್ ವೆಂಕಟಾಚಾರ್ಯ, ಎಂ.ಎ., ಬಿ.ಕಾಮ್., ಎಲ್‌ಎಲ್.ಬಿ. ಅವರಿಂದ)— ಸಾದಾ ಪ್ರತಿ ರೂ. ೦-೧೨-೦

---

ಮಾರಾಟಗಾರರು :

ಕೃಷ್ಣ ಮತ್ತು ಕಂಪನಿ, ಮೈಸೂರು

---

## ಹೊಸ ಪ್ರಕಟನೆಗಳು

ಮೈಸೂರ ಮಲ್ಲಿಗೆ (ಸಚಿತ್ರ ಕವನ ಸಂಗ್ರಹ)—ಶ್ರೀ ಕೆ. ಎಸ್. ನರಸಿಂಹಸ್ವಾಮಿ ಅವರಿಂದ. ಬೆಲೆ, ಕ್ಯಾಲಿಕೊ ಪ್ರತಿ ರೂ. ೧-೪-೦ ; ಸಾದಾ ಪ್ರತಿ ರೂ. ೦-೧೨-೦

ಗಗ್ಗಯ್ಯನ ಗಡಿಬಿಡಿ (ಮೂರು ಪ್ರಹಸನಗಳು)—ಶ್ರೀ. ನಾ. ಕಸ್ತೂರಿ, ಎಂ.ಎ., ಬಿ.ಎಲ್. ಅವರಿಂದ. ಬೆಲೆ, ಕ್ಯಾಲಿಕೊ ಪ್ರತಿ ರೂ. ೧-೪-೦ ; ಸಾದಾ ಪ್ರತಿ ರೂ. ೦-೧೨-೦.

ಕಾರ್ಯದರ್ಶಿ, ಕರ್ಣಾಟಕ ಸಂಘ, ಮಹಾರಾಜರವರ ಕಾಲೇಜು,
ಮೈಸೂರು

# ಪ್ರಬುದ್ಧ ಕರ್ಣಾಟಕ

## ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪತ್ರಿಕೆ

---

'ಪ್ರಬುದ್ಧ ಕರ್ಣಾಟಕ'ವು ವಿನಾಯಕನ ಹಬ್ಬ, ದೀಪಾವಳಿಯ ಹಬ್ಬ, ಸಂಕ್ರಾಂತಿಯ ಹಬ್ಬ, ಕಾಮನ ಹಬ್ಬ—ಈ ಹಬ್ಬಗಳ ಹೊತ್ತಿಗೆ ವರ್ಷಕ್ಕೆ ನಾಲ್ಕು ಸಲ ಹೊರಡುತ್ತದೆ.

ವಾರ್ಷಿಕ ಚಂದಾ (ಅಂಚೆವೆಚ್ಚ ಸೇರಿ):

| | | | | |
|---|---|---|---|---|
| ಚಂದಾದಾರರಿಗೆ | ರೂ. | ೨ | ೦ | ೦ |
| ವಾಚನಾಲಯ ಮುಂತಾದ ಸಂಸ್ಥೆಗಳಿಗೆ | ರೂ. | ೩ | ೦ | ೦ |
| ವಿದ್ಯಾರ್ಥಿಗಳಿಗೆ ಮಾತ್ರ | ರೂ. | ೧ | ೮ | ೦ |

ಚಂದಾಹಣವನ್ನು ಕಾರ್ಯದರ್ಶಿ, ಪ್ರಚಾರ ಮತ್ತು ಪ್ರಕಾಶನ ಕಾರ್ಯ, ಯೂನಿವರ್ಸಿಟಿ ಆಫೀಸು, ಮೈಸೂರು, ಎಂಬ ವಿಳಾಸಕ್ಕೆ ಕಳುಹಿಸಬೇಕು. (ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರರವರಿಗಾಗಲಿ ಪ್ರಬುದ್ಧ ಕರ್ಣಾಟಕದ ಸಂಪಾದಕರಿಗಾಗಲಿ ಕಳುಹಿಸಬಾರದು.) ಮೈಸೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳು ಚಂದಾಹಣವನ್ನು ತಮ್ಮ ತಮ್ಮ ಕಾಲೇಜಿನ ಅಧ್ಯಕ್ಷರಿಗೆ ಮುಂಗಡವಾಗಿ ಸಲ್ಲಿಸಿ, ಪಡೆದ ರಸೀತಿಯನ್ನು ತಮ್ಮ ವಿಳಾಸದೊಂದಿಗೆ ಕಳುಹಿಸಿಕೊಡಬೇಕು. ಕಾಲೇಜುಗಳ ಅಧ್ಯಾಪಕ ವರ್ಗದವರೂ ಇದೇ ರೀತಿ ಮಾಡಬಹುದು.

ಪ್ರಬುದ್ಧ ಕರ್ಣಾಟಕಕ್ಕೆ ಚಂದಾದಾರರನ್ನು ಒದಗಿಸಿಕೊಡುವ ಪುಸ್ತಕ ವ್ಯಾಪಾರಿಗಳಿಗೂ ವೃತ್ತಪತ್ರಿಕೆಗಳ ಮಾರಾಟಗಾರರಿಗೂ ಶೇಕಡ ೧೨½ ಯಂತೆ ಕಮಿಷನ್ ಕೊಡಲಾಗುವುದು. ಪಾಠಶಾಲಾ ಸಂಸ್ಥೆಗಳಿಗೆ ಪ್ರಚಾರ ಶಾಖೆಯ ಕಾರ್ಯದರ್ಶಿಗಳೇ ನೇರವಾಗಿ ಗಮನಕೊಡುವುದರಿಂದ ಈ ವಿಚಾರದಲ್ಲಿ ಪುಸ್ತಕ ವ್ಯಾಪಾರಿಗಳು ಶ್ರಮ ವಹಿಸಬೇಕಾಗಿಲ್ಲ.

'ಪ್ರಬುದ್ಧ ಕರ್ಣಾಟಕ'ದಲ್ಲಿ ಪ್ರಕಟನೆಗಾಗಿ ಲೇಖನಗಳನ್ನೂ ವಿಮರ್ಶೆಗಾಗಿ ಗ್ರಂಥಗಳನ್ನೂ ವಿನಿಮಯಕ್ಕಾಗಿ ಪತ್ರಿಕೆಗಳನ್ನೂ ಈ ಕೆಳಗಿನ ವಿಳಾಸಕ್ಕೆ ಕಳುಹಿಸಬೇಕು.—

ಸಂಪಾದಕ,
'ಪ್ರಬುದ್ಧ ಕರ್ಣಾಟಕ',
ಮಹಾರಾಜರವರ ಕಾಲೇಜು, ಮೈಸೂರು.

ಮಯ್ಯಿಕ್ಕಿತಂ ಬಂದು ದೇವ ಸರ್ವಜ್ಞನೇ
ಕಯ್ಯೆತ್ತಿ ಪೊಡ[1]ವಟ್ಟು[1] ಸದ್ಭ[2]ಕ್ತ[2]ವೇದ್ಯನೇ |
ದೇವ ಪೊ[3]ಕ್ಕ[3]ಳಿಯೂರ ಶಿವನೆ ಅವಿನಾಶಿಯೇ
ದೇವ ಸ್ವತಂತ್ರ[4]ತರ[4]ಸಾಮರ್ಥ್ಯರಾಶಿಯೇ |
ಎಂದು ಪಡಿವೊಗ್ಗಳಂ ಕೊಂಡಲ್ಲಿ ಕುಳ್ಳಿರಲು
ಬಂದೊಂದು ಶೋಕರವವಲ್ಲಿಗೆ[5]ಯ್ದುತ್ತಿ[5]ರಲು |
ನಂಬಿ ನಂ[6]ಬೀ[6] ಕಂದ ಮೊಸಳೆ ನುಂಗಿ[7]ತೆ[7] ಮಗನೆ
ನಂಬಿಯಣ್ಣನ [8]+ ಪೆಸರು ಫಲಿಸ[9]ದಿಂತೆ[9]ಲೆ ಮಗನೆ |
ಎಂಬಕ್ಕೆಯುಂ ಕೇಳ್ದು ಕರೆ[10]ಯುಡಾ[10]ರೆಂದೆ[11]ನುತೆ[11]
ನಂಬಿಯೆಂಬವನಾವನೇನಾ[12]ದನೆಂದೆನುತೆ[12] |
ಕರೆ[13]ಯೆಸ[13]ಲು ಮಾತೆಪಿತರೆಯ್ತಂದು [14]ಶೀಘ್ರ[14]ದಿಂ
ಬರುತೆ ನಂಬಿಯ ಮುಂದೆ ಕೆಡೆದು ಕಡುಶೋಕದಿಂ |
ದೇವ ನಿಮ್ಮಡಿಗಳ್ಗೆ ಪೆಸರಾದುದೊಂದು ಶಿಶು
ದೇವ ಈ ಕೊಂಡದೊಳಗಾಡುತಿರ[15]ಲ[15]ಲ್ಲಿ ಶಿಶು |
ಮೊಸಳೆ ನುಂಗಿ[16]ತು ಮೂಱು ವರುಷವಾಯ್ತೆಲೆ ದೇವ[16]
ಪೆಸರೊಪ್ಪಿಸುವ ಭಾಗ್ಯವೆಮಗೆ ಇಲ್ಲಂ ದೇವ |
ಒಡನೆ ಜನಿ[17]ಯಿಸಿದ[17] ನೆ[18][ರೆ]ಮನೆಯವರ[18] ಪುತ್ರಂಗೆ
ಮೃಡಮೂರ್ತಿ ಉಪನಯನವೇನಂಬಿ[19]ಎಂ[19]ದಿಂಗೆ |

---

1 ವಂಟು (ಚ). 2 ಕ್ತಿ (ಕ). 3 ಕ್ಕ (ಕ), ಕು (ಜ). 4 ಪರ (ಕ), ರಸ (ಖ), ××× (ಚ). 5 ಯಿತ<ಯ್ತ>ರುತಿ (ಗಚ). 6 ಬಿದ (ಖ). 7 ಡು (ಖ), ತು (ಗ). 8 + ಮಗನ (ಗ). 9 ದೆಮಗೆ (ಗ). 10 ವರಾ (ಗ). 11 ನಲು (ಖಚ). 12 ದನೆನುತಿರಲು (ಖ), ದುದೆಂದೆನುತ (ಗ), ದನೆಂದೆನಲು (ಚ). 13 ಯಿಸ (ಖಚ), ಇಸ (ಗ). 14 ಶೋಕ (ಕಜ), ಸಿಗ್ರ (ಗ), ××× (ಚ). 15 ಲಿ (ಖಚಜ). 16 - - - ವಾದುದುದೆ (ಖ), ತು<ತ್ತು> ಮೂರು<ಱು>ಂ ವರುಷವೆಲೆ ದೇವ (ಗಜ), ತು ××× (ಚ). 17 ಸಿರ್ದ (ಖ). 18 ರ ಮನೆಯವರು (ಕಗ), ರ ಮನೆಯವರ (ಖಜ), ××× ನೆಯವರು (ಚ). 19 ನಿಂ (ಜ).

ಎ[1]ನೆ ಘುಳುಘುಳಿಸಿ ಭುಗಿ[ಲ್] ಭುಗಿಲೆನುತೆ[1] ಸೌಂದರಂ
ಕೊನೆಮೊಸೆ [2]ಕೆತ್ತೆ[2] ಸಿಡಿಲೇಳ್ಗೆ[3]ಯೆದ್ದಂ[3] ಕರಂ |
ನಡೆ ತೋಟು ತೋಟು ಕೊಂಡವನೆನುತ್ತಿರಲಂದು
ಕಡುಭೀತಿಯಿಂ ಕಾಲನುಂ ವರುಣನುಂ ಬಂದು |
ಕೊಂಡದೊಳ್ ಪುಗುತಪಲ್ಲಲ್ಲಿಯ ಶರೀರಮಂ
[4]ತಂಡ[4]ದೊಳ್ ಸಂದಿಕ್ಕಿ ತೀವುತ್ತೆ ಪ್ರಾಣಮಂ |
ಅಸುವಾಗಿ ಸಂಬಿಯಂ [5]ಹಾರು[5]ತ್ತಮಿರಲಂದು
ಮುನಿದು ಸೌಂದರನಲ್ಲಿ [6]ಭೋಂಕೆನಲ್[6] ನಡೆತಂದು |
[7]ಅವಿನಾಶಿ ನೀಂ ನಿನ್ನ ಮಕ್ಕಳ್ಗೆ ನಾಶವೇ[7]
ಭವನಾಶಿ ಮಕ್ಕಳಂ ಕೊಲುವುದಭ್ಯಾಸವೇ |
ಕೊಡು ಮಗನನೆಂಬ ನುಡಿಯಿಂ ಮುನ್ನವೆಯ್ತಂದು
ನಡುನೀ[8]ರ ನಡುವಿಂದೆ[8] ಗಳಗಳನೆ ನಡೆತಂದು |
ಮುಂದೆ [9]ನಿಂದಿ[9]ರೆ ಕಂಡು ಭಕ್ತಸಂಕುಳವೆಲ್ಲ
ಇಂದುಶೇಖರನ ಶರಣ[10]ರ್ಗೆ ಸರಿಯಿನ್ನಿ[10]ಲ್ಲ |
ಶರಣರ್ಗೆ ಸರಿ[11]ಯಪ್ಪ[11] ಹರಿ[12]ಬೊಮ್ಮರೇನುಂ[12]ಟೆ
ಶರಣರ್ಗೆ ಸರಿ[13]ಯಪ್ಪ[13] ಸುರಪತಿಗ[14]ಳೇನುಂ[14]ಟೆ |

---

1 - - - ಭುಗಿಲುಭುಗಿಲೆನುತ (ಕ), ನಲು ಘುಳು - - - ಭುಗುಭುಗುಲೆಂದು (ಖ), ನಲು ಘುಡುಘುಡಿಸಿ ಭುಗಿಲೆನುತ್ತ (ಗ), ಎನೆ ಘುಡು ××× (ಚ), - - - ಭುಗಿಭುಗಿ - - - (ಜ). 2 ಯತ್ತಿ (ಗ). 3 ಯಿಂದಂ (ಖ), ಯೆದ್ದ (ಗ), ××× (ಚ), ಯೆಂದಂ (ಜ). 4 ಕಂದ (ಖ). 5 ಪಾಡು (ಕ), ××× (ಚ). 6 ಗಳಗಳನೆ (ಖಗಚ). 7 ಅವಿನಾಸಿ ನೀ ನಿಂನ ಮಕ್ಕಳೆ - - - (ಕ), ಆವಿಶಾಶಿ ನಿಂನ ಮಕ್ಕಳದೇನು ನಾಶವೆ (ಖ), ಆವಿನಾಸೆಯೆ ನಿಂನ ಮಕ್ಕಳೆಂ ನಾಸವೆ (ಗ), ಅವನಾಶಿ ನಿ ನಿಂನ ಮಕ್ಕಳೆಂ - - - (ಚ). 8 ರೊಳಾಕ್ಷಣಂ (ಕ), ××× (ಚ). 9 ಮಗನಿ (ಖಗ), ××× (ಚ). 10 ರ್ಗಿನ್ನು ಸರಿಯಿ (ಕ). 11 ಬರ್ಪ (ಗ), ಬಪ್ಪ (ಚ). 12 ಬೊಂಮರಿಂನುಂ (ಕಚ), ಬ್ರಂಹ್ಮರಿನ್ನುಂ (ಖ), ಬ್ರಂಹ್ಮರೇನುಂ (ಗ). 13 ಬರ್ಪ (ಗ), ××× (ಚ). 14 ಳಿನ್ನುಂ (ಖ), ಳಿಂನುಂ (ಗ), ××× (ಚ).

ಮುನ್ನೊ[1]ರ್ವ[1] ಗಜನನಾಗಳೆ ಮೊಸಳೆ [2]ಪಿಡಿಯ[2]ಲ್ಕೆ
ತನ್ನ [3]ಕೈ[3]ಚಕ್ರಂ ಸುದರ್ಶನದೆ ನಡೆಯಲ್ಕೆ |
ಕಾಳೆಗಂಗೊಟ್ಟುದಾ ಮೊಸಳೆಯಾ ಪೊತ್ತಿಂಗೆ
ಕಾಳೆಗದೊಳುಬ್ಬಸದಿ ಬಿಡಿಸಬೇ[4]ಕಾ[4]ತಂಗೆ |
ಇಂತು ಶರ[5]ಣರ್ಗೆ ಸರಿ ಸುರನರರೊಳಿ[5]ಲ್ಲೆನಲು
ಎಂತುವುಂ ಹರನ [6]ಭಕ್ತಂಗೆ ಘನವಿಲ್ಲೆ[6]ನಲು |
ಸರಿಯೆಂಬ ಬಾಯೊಳಗೆ ಪುಳು ಸುರಿಯದಿ[7]ರ್ಪುದೇ[7]
ಸರಿಯೆಂಬ ಬಾ[8]ಯ್ಗೆ[8] ಬಗದಳವಾಗದಿ[9]ರ್ಪುದೇ[9] |
ಶಿವಶಿವ ಮಹಾದೇವ [10]ಬಾ[10]ಪುರೇ ಸೌಂದರಾ
ಶಿವಶಿವ[11]ನೆ[11] ಸಾಮರ್ಥ್ಯದಾವಾಸ ಸೌಂದರಾ |
ಎಂದಲ್ಲಿ ಭ[12]ಕ್ತ[12]ವೃಂದಂ ಪೊಗಳುತಿರಲಂದು
ಕಂದನಂ ತಾಯ್ತಂದೆಗಳ್ಗೆ ಕೊಡು[13]ತಂ ಬಂ[13]ದು |
ಅಂದಿನಿರುಳಂ ಸುಖದೊಳಾ ವೂರೊಳಂ ಕಳಿದು
ಮುಂದೆ ರವಿಯುದಯವಾಗಲ್ಕೆ ಸ[14]ಲಿವಂ[14] ತಳೆದು |
ಭ[15]ಕ್ತ[15]ವಾರಿಧಿವರ್ಧನೇಂದು[16]ಕರನೊ[16]ಪ್ಪಿದಂ
ಭ[15]ಕ್ತ[15]ವಾರಿಜವಿಕಸನಾದಿತ್ಯನೊಪ್ಪಿದಂ |
ಹರನ ಪೂಜಾರಸಸಮುದ್ಭೂತನೊಪ್ಪಿದಂ
ಹರನ ತ[17]ನಯಂ[17] ನಂಬಿಯಣ್ಣನಿಂತೊಪ್ಪಿದಂ ||

## ಸಪ್ತದಶ ಸ್ಥಲಂ

---

1 ಂದು (ಕಖಗ), ××× (ಚ). 2 ನುಂಗ (ಕ). 3 (ಕ) ದಲ್ಲಿಲ್ಲ; ಗದೆ (ಖಗಚ). 4 ಡಾ (ಜ). 5 ಣಂಗೆ ಹರಿಯೊಳಗಾಗಿಯಿ (ಖ). 6 ತ್ತ ನುಡಿಯಲಿಲ್ಲೆಂದೆ (ಖಚ), ಭಕ್ತರ್ಗೆ - - (ಗ), ಭಕ್ತಂಗೆಣೆಯದಿಲ್ಲೆ (ಜ). 7 ಪ್ಪವೇ (ಕ), ಪ್ಪುದೇ (ಖಚ), ರ್ದಪವೆ (ಗ), ರ್ದಪುದೆ (ಜ). 8 ಯಿ (ಖ), ××× (ಚ), ಯೆ (ಜ). 9 ಪ್ಪವೇ (ಕ), ಪ್ಪುದೇ (ಖ), ರ್ದಪವೆ (ಗ). 10 ಭಾ (ಖ). 11 ನ (ಖಗಜ), ××× (ಚ). 12 ಕ್ತಿ (ಕ). 13 ತಿರಲಂ (ಕಜ), ತಂ ××× (ಚ). 14 ಲವಂ (ಕ), ನಲವಿಂ (ಖ). 15 ಕ್ತಿ (ಕ). 16 ಕರಮೊ (ಕ), ತಾನೊ (ಖ). 17 ರುಣಂ (ಖಗ), ××× (ಚ); ನೆಯಂ (ಜ).

# ೧೮ನೆಯ ಸ್ಥಲ

ಧೀರನನಿಂದ್ಯನಪ್ರತಿಮನಾ[1]ನತ[1]ಸರ್ವಜಗಜ್ಜನಂ ಮಱೋ-
ದಾರನತರ್ಕ್ಯಭಕ್ತಿಯುತನೀಶ್ವರನಗ್ಗದ [2]ಪುತ್ರ[2]ನುತ್ತಮಾ- |
[3]ಕಾರನನೂನದಾನಗುಣಿ[3] ಪೊಕ್ಕುೞಿಯೂರೊಳಗಿರ್ದನಂತರಂ
ಚೇರಮಚಕ್ರವರ್ತಿಯ ಪುರಕ್ಕೊಲವಿಂ ಪೊಱಮ[4]ಟ್ಟ[4] ಸೌಂದರಂ ||

[5]ಅಂ[5]ತು ಪೊಕ್ಕು[6]ೞಿಯೂರೊ[6]ಳವಿನಾಶಿಯಂ ಬೀೞ್ಕೊಂಡು ಪುರಜನಂ ಪೊಗೞೆ[7] + ಭಕ್ತರ್ ಸಂತಸಂಬಡೆ ಶಿವಂ ಪರಸೆ ಪೆರುಮಳಲೆಯ ಕುಱುಂಬರ್ ಗುಡಿಯನೆತ್ತೆ ಪಲ್ಲವಸತ್ತಿಗೆಗಳ್ ಪಸರಿಸೆ ಪಶ್ಚಿಮಾಭಿಮುಖನಾಗಿ ಬರೆವರೆ [8]ಮುಂದೆ ಕು[8]ತ್ತಿದ ಕೋಲು ಸಲ್ಲ[9]ದು[9] ನೋಡುವ [10]ದೃಷ್ಟಿ[10] [11]ಉಚ್ಚಳಿಸದು[11] ನೆನೆವ ಮನಂ ಪೊಲಬುಗೆ[12]ಟ್ಟಪುದೆಂಬಂ[12]ತಿರ್ದ [13]+ ಮಹಾವಿಂಧ್ಯಮಂ [14]ಪೊಗುತ್ತೆ[14]

[15]ಪೆಱತೊಂ[15]ದೆಡೆಯೊಳೆಳವುಲ್ಲೆಗಳ ಪಾಱು[16]ಗೆಯ್ತ್ತಮಂ[16] ನೋಟದ ಬೆದಱುಮಂ ತವಕ[17]ದೋಟಮು[17]ಮಂ- ಅವಱ ಹಿಂ[18]ದೆ ಹಿಂದೆ ನೆಲನಂ[18] ಹತ್ತಿ ಹ[19]ಣು[19]ಗಿ ಜು[20]ಣುಗಿ ಜೂಜಾಡುವ ಕಿಱುವುಲಿ[20]ಗ[21]ಳುಮಂ- ಒಂ[21]ದೆಡೆ

---

[1] ತನ (ಖಗ), ಥನ (ಚ). [2] (ಕ) ದಲ್ಲಿಲ್ಲ. [3] - - - ನ ತೇಜಗುಣಿ (ಗ), ಸ ಸದ್ಗುಣಿಯು (ಚ). [4] ಟ್ಟು (ಖಚ). [5] ಯಿಂ (ಕಖ). [6] ೞಿಯೊ (ಖ), ವೂರೊ (ಗ). [7] ೧ತನ್ನ೧ ಪೆಸರಪ್ಪ ನಂಬಿಗೆ ೨ಬೆ[ೞ]ಳ್ಪನಿತು ಪೊಂಗಳಂ೨ ಧನಕನಕ೩ರತ್ನಾಭರಣಂಗಳಂ ಕೊಟ್ಟು೩ (ಖ:ಗ:ಚ). [ಮು. ಪಾ.: ೧ ತಾಂ (ಗ). ೨ ಬೆಳ್ಪನಿತು (ಗ); (ಚ) ದಲ್ಲಿಲ್ಲ. ೩ ರತ್ನ ಜಾಳಾಭ - - - (ಗ), ವಾ ××× (ಚ).] [8] ಮುತ್ತೆ ಸು (ಚ). [9] ದೆ (ಕಜ); ××× (ಚ). [10] ದಿಟ್ಟ (ಜ). [11] ಉತ್ಸಳಿಸದೆ (ಕ), ಉಛಳಿಸದು (ಖ), ವುತ್ಸಳಿಸವು (ಗ), ××× (ಚ), ವುಚ್ಚಳಿಸದೆ (ಜ). [12] ಟ್ಟಂ (ಖ); ಟ್ಟಂತಿರ್ದಪುದೆಂಬಂ (ಗ). [13]+ಮಳಿಯಾಳ ರಾಜ್ಯದ (ಖ). [14] ಪೊಕ್ಕು ಪೋಗುತ್ತೊಂ- (ಖ), ಪೊಂಗುತೊಂ- (ಗ), ಪೊಗುವಾಗಲು (ಚ). [15] (ಖಗ) ಗಳಲ್ಲಿಲ್ಲ; ಪೊಂ (ಚ). [16] ಗೆಯುಮಂ (ಖ), ವೆಯಂ ತಂದು (ಗ), ಗೆಯತಮಂ (ಚ). [17] ದೊರೆ (ಗ), ದಾಟೋಪ (ಚ). [18] ದಣೆಣಂ (ಖ). [19] ಣಿ (ಕ), ಣುಂ (ಖ), ಣ (ಜ). [20] ಣುಂಗಿ ಜಾಱುವ ಕಿಱುಉಲ್ಲಿ (ಖ). [21] ಳನೊಂ (ಖಜ), ಳಿಂ ಮತ್ತಪೊಂ (ಚ).

ಯೊಳ್ ಹಿಂಡಸಗಲ್ದು ಗಂಡುಗೆದಱಿ [1]ವಜ್ರವಿಡಿ[ವಿ][1]ಡಿದು [2]ಬಿಗಿಬಿಗಿದು ಬಳೆದ[2] ದೇಹಂಗೊಂಡಷ್ಟಾಂಗಪುಷ್ಟ[3]ನಾ[3]ಗಿ ತಾಸಿಕ್ಕುವ ಹಿಕ್ಕೆ ನೆಲಕ್ಕೆ ಬೀಳದ ಮುನ್ನ ತಿರುಗಿ [4]ತುಂ[4]ಡಿಸುತ್ತುಂ ತ್ರಾಣಂ ತೀವಿ ಪೊಳೆತಂತಿರ್ದ [5]ದಂಷ್ಟ್ರಾಯುಗ[5]ದಿಂ ದಾಡೆಗುಟ್ಟುತ್ತುಂ ಧರಣೀತಳಮನುರವಣಿಸಿ ಸೀಳ್ಗುತುಂ ಹೆಮ್ಮರಂಗ[6]ಳ[6]ನೊಮ್ಮೊಮ್ಮೆಯೆ ಕತ್ತರಿಸುತುಂ ಕೈಪಱಿದ ದಂತಿ ಕಾಡೊ[7]ಳ್ ಪೊಕ್ಕಂ[7]ತೆ ಹೆಱುಮೆಟ್ಟಿ ನಡೆನಡೆದು ಹೆಮ್ಮೆಳೆಯ[8]ನಂ[8]ಡುಗೊಂಡು ಗರ್ಜಿಸುತುಂ ಬಂದ ಜಾತಿಜಾಯಿಲಂಗಳನಿತ್ತುಂ[9]ಡು[9]ಮಾಡುತ್ತೆ ಸಾಗಿಸಿದ [10]ಸೇಹಕ್ಕಾಱದೆ[10] ಸಿಂದಳ[11]ಲಿಗಂ[11] ಮೂದಲಿಸಿ ಬರೆ [12]ಕೆರಳ್ದು ಕಿನಿಸಿ ಕಿಗ್ಗ[12]ಣ್ಣಿಕ್ಕಿ ಅಳವಿಯಱಿದು ಘುಳುಘುಳಿಸಿ ಪರಿ[13]ತಂ[13]ದು- ಉಂಗುಟದಿಂ [14]ಭಾಳಾಗ್ರಂಬರಂ ಪೋೞ್ದೆತ್ತಿ[14] ತನಗಿದಿರಂ ಕಾಣದೆ ಹೆಕ್ಕಳದಿಂ ಕೆಕ್ಕಳಿಸಿ ನೋಡು[15]ವೆಕ್ಕಲಂ[15]ಗಳು[16]ಮಂ- ಒಂದೆಡೆಯೊಳ್[16] ಸಿಂಹವೆತ್ತಂದು ಮತ್ತಗಜಂಗಳ ನೆತ್ತಿಯಂ ಪೊಯ್ದು [17]ಪೊಯ್ದಟ್ಟಾಸುರದಿಂ[17] ಸಟ್ಟುಗುರ್ಗಳಿಂ ಮಸ್ತಕಮನೊಡೆ[18]ದಿರ್ಬಗಿ[18]ಮಾಡೆ ನೆತ್ತರ್[19]ವೆ[19]ರಸಿ ಪರೆದ ಮುತ್ತುಗಳು ತನ್ನ ಬರವಿಂಗೆ ವನದೇ[20]ವತೆಯಿ[20]ಟ್ಟ ರತ್ನಾಂಜುಳಿಗಳಂತಿರೆ ಕಂಡು ಕಂಡು ಹಾರೈಸುತ್ತಂ- ಇಂತಲ್ಲಲ್ಲಿ ಪುಟ್ಟಿದ ವೀರಾದ್ಭುತರಸಂಗಳಿಂ ಪುಟ್ಟಿದ ಸು[21]ಖಂಗಳಂ[21] ಶಿ[22]ವಂಗ[22]ರ್ಪಿಸುತುಂ ನ[23]ಡೆತರುತ್ತೆ-[23]

---

1 - - - ಡಿದಿ (ಕಗಜ), ವಜ್ರವೆವಿ (ಖ), ವಿಡಿದಿಡಿದು (ಚ). 2 ಬಿಗಿಬಿಗಿದು ಬೆಳದ (ಕಜ), ಬಿಗಿಬಿಗಿವೆಳದು (ಖ), ಬಿಗಿಬಿಗಿದೆ ಬೆಳದು (ಗ), ಬಿಗಿದು ಬೆಳೆದು (ಚ). 3 ವಾ (ಖ). 4 ಕುಂ (ಖ). 5 ದವುಷ್ಟ್ರಯುಗ (ಕ), ದಂ<ದಾ>ಷ್ಟ್ರಯುಗಳ (ಖಚ). 6 ಳುಮ (ಕ). 7 ಳತ್ತ್ರಂ (ಗ). 8 ನುಂ (ಖ). 9 ಡಂ (ಕ), ಡ (ಚಜ). 10 ನೇಹದಿಂ ನಿಲಲಾರದೆ (ಕ), ಮೋಹಕ್ಕೆ ಹೋಗದೆ (ಖ), ಮೋಹಕ್ಕೆ ನಿಲಲಾರದೆ (ಗ), ××× (ಚ). 11 ಲಿಗನಂ (ಕ), ಲಿಂಗಂ (ಗ). 12 ಕೇಳ್ದು ಕಿಗ್ಗಿಸಿ ಕ (ಖ). 13 (ಖಗ) ಗಳಲ್ಲಿಲ್ಲ. 14 ಭಾಳಾಗ್ರ ಬರೆಪೊಳೆ (ಖ), ಬಾಳೀಗ್ರೇಸರಂ - - - (ಗ), ವ್ಯಾಳಾಗ್ರದಿಂದೆತ್ತಿ (ಚ). 15 ತ್ತಿಕ್ಕಳಂ (ಖ), ತೆಕ್ಕಳುಂ (ಗ), ವಯಿಕ್ಕ ××× (ಚ). 16 ಲಿದು ಪೊಂದೆಸೆಯೊಳು (ಖ). 17 (ಖಚ) ಗಳಲ್ಲಿಲ್ಲ; ಹೊಯ್ಯಿದು (ಗ). 18 ದಿರ್ಭ್ಬಗಿ (ಕಜ), ದಿಭಾಗಂ (ಖ), ದಿಬ್ಬಗಿ (ಗ), ದುಯಿಬ್ಬಗಿ (ಚ). 19 ಬೆ (ಕಜ). 20 ವತೆಗಳಿ (ಕ), ವಿಯರಿ (ಖ), ವ××× (ಚ). 21 ಖಮಂ (ಖಚ), ಖವಂ (ಗ). 22 ವಲಿಂಗಕ್ಕ (ಖ). 23 ಡದು ಬರುತ್ತಿರೆ (ಚ).

ಇಡಿದಿಡಿದು ಬೆಳೆದು ಕತ್ತ್ರಲಿಪ ಕಾಂತಾರದೊ[1]ಳ್[1] ತಿರು[2]ಮುರುಘಂ ಪೂಂಡಿಯೆಂಬ[2] ಶಿವಪುರ[3]ವಿರಲದ[3]ನಜುಯದೆ ಶಿವನಂ ಕಾಣದೆ [4]ಹೋಗುತ್ತಿರೆ[4] ಹರುಷದಿಂ[5]ದಾ ಹರಂ[5] ಮೂರ್ತಿಗೊಂಡು [6]ಮಹಾ[6]ಗಣಂಗಳಂ ನೆನೆದು ಕೋ[7]ಟಾ[7]ಕೋಟಿ [8]ಬೇಡವ[8]ಡೆಯಂ ಮಾಡಿ [9]ತಾ[9] ನಾಯಕನಾಗಿ ಎತ್ತ ನೋಳ್ಪಡಂ ಕರಿಯ ದೇಹಂಗಳಿಂ ಸುತ್ತಿದ ಬೇವಿನ ದಂಡೆಗಳಿಂ [10]ಪಿಡಿದ ಬಿಲ್ಲುಗಳಿಂ[10]ದುಟ್ಟ [11]ತೊವಲುಡೆ[11]ಗಳಿಂ [12]ಕಟ್ಟಿದ ಸುರಗಿಗಳಿಂ[12] ಪಿಡಿ[13]ದ[13] ವೇದಂಗಳ ನಾಯ್ಗಳಿಂ [14]ಕರ್ಬುರಿಸಿ[14] ಕಾಡೊಳ್ ಕೂ[15]ಡೆ[15] ಕರಿಯ ಬೆಳ[16]ಗು[16] ಕವಲ್ತು ಪರ್ವಿ ಪಲ್ಲವಿಸಿದ ಮಹಾಂಧಕಾರದೊಳ್ ಮಾಯಾಬಲಂ ಪೊಗುವಂತೆ ಬೇಡ[17]ವ[17]ಡೆ ಕೂಡೆ ಪೊಕ್ಕೊ[18]ಕ್ಕಿ[18]ಲಿಕ್ಕಿ ಮಹಾ[19]ವಿಂಧ್ಯಂ[19] ಮಾರ್ದನಿಗೊಡಲಾರ್ದು ಬೊಬ್ಬಿಱಿದಬ್ಬರಿಸಿ ಮೂದಲಿಸಿ [20]ಮುಂಗುಡಿ[20]ಗೆದಱಿ ಮೊಗ್ಗರಂ [21]ಬಾ[21]ಯ್ದು [22]ನೇಣಂ ಸರಿದ ಗೋಣಸಿ[22]ನಂತೆ ಸೌಂದರನ ಬಲವನೊರ್ಬುಳಿ ಮಾಡಿ ಗ[23]ರ್ಬಂ[23]ಗೆಡಿಸಿ ಕಂಗೆಡಿಸಿ [24]ಶಕುತಿಗೆಡಿಸಿ[24] ಹಿಡಿ[25]ಮೊ[25]ಲಂ ಗೊಂ[26]ಡೊಡೆಯುಚ್ಚಿಕೊಂಡು[26] ನಂಬಿಯುಂ ತುಂಬರ[27]ನುಮು[27]ಳಿಯೆ ಪೆರ್ಬಲ[28]ವೆಲ್ಲವಂ[28] ಮರ್ಬಿನೊಳಡಂಗಿ[29]ಸ[29]

---

[1] ಳೊಂದು (ಖ). [2] ಮುರಂಗಾತಿ ಎಂದೀ (ಖ), ಮುರುಪುಂಪೂತಿಯೆಂಬ (ಗ), ××× (ಚ), - - - ಪೂಡಿಯೆಂಬ (ಜ). [3] ವ (ಖ). [4] (ಖಗಚ) ಗಳಲ್ಲಿಲ್ಲ. [5] ದುಂಮಹಂ<ಹ> (ಖಗ); ಹಾಡದೆ ಪಡಿವೊಂಗಳಂ ಬೇಡದೆ ವಿಾಱಿ ನಡವುತ್ತಿರಲಾ ಪುರದ ಹರ × ಱಿದು ಸೌಂದರಂ ಮುಂದುಗೆಡಿಸಿ ತನ್ನ ತೋಱಿಸಿ ಹಾಡಿಸಿ ××× (ಚ). [6] ಶಿವ (ಖಚ). [7] ಟಾನು (ಖಗಚ). [8] ಬೆಳವ (ಖ), ಬೇಡಪ (ಗ). [9] ತಾನೆ (ಗಚ). [10] (ಖ) ದಲ್ಲಿಲ್ಲ. [11] ಮೃಗಾಂಜನಂ (ಖ). ಮೃಗಾಜಿನ<ಜನಂ> (ಗಚ), ತೊವಲುಡಿಗೆ (ಜ). [12] (ಚ) ದಲ್ಲಿಲ್ಲ. [13] ದಿರ್ದ (ಗಚ). [14] ಕಾರ್ಬುರಿಸಿದ (ಖ). ಕಬ್ಬುರಿಸಿ (ಗ), ಕಬ್ಬುರಿಸಿರ (ಚ). [15] ಡಿ (ಕಖ), ಡು (ಚ). [16] ಗುವ (ಕ). [17] ಪ (ಖಗ), [18] ಕ್ಕ (ಗ). [19] ವಿದ್ಯಾಭ್ಯಂ (ಗ), ವಿಧ್ಯಂ (ಚ). [20] ಮತ್ತಂಗುಡಿ (ಕ), ಗಂಡು (ಜ). [21] ಬೊ (ಕ), ವಾ (ಖ), ಬ (ಗ). [22] ನೇಣ<ಣಂ>ಸ - - - (ಕಚ), ನೇಣಂ ಸರಿದ ಗೋ(?)ಣಸಿ (ಖ), ನೆನೊಂಸ - - - (ಗ), ನೇಣ ಸರಿ ಗೋಣಸಿ (ಜ). [23] ರ್ವಂ (ಕಖ), ರ್ಭಂ (ಗ). [24] (ಖ) ದಲ್ಲಿಲ್ಲ. [25] ಮೂ (ಗ). [26] ಡೊಡೆ ವುಬ್ಬೆಗೊಂಡು (ಕ), ಡು ವೊಡೆ - - - (ಖ), ಡು ವೊಡೆ ವುಚ್ಚಿಕೊಂಡು (ಗಚ), ಡೆಡೆ ಉಚ್ಚಿಕೊಂಡು (ಜ). [27] ನುಂ ಮ (ಕ), ನುಂ ಮು (ಖಗ), ನು (ಚಜ). [28] ಮೆಲ್ಲಮುಮಂ (ಕ), ವೆಲ್ಲಂ<ಲ್ಲ> (ಖಗ), ವನೆಲ್ಲವ (ಚ). [29] (ಖ) ದಲ್ಲಿಲ್ಲ; ಸಿ (ಗಚ).

ಸಂಜೆಸ ಗಾಳಿ ಬೀಸಿದಂತೆ ಕೆಂಡದ ಮಳೆ ಕಱೆದಂತೆ ಅಜ್ಞಾನಂ ಕವಿದಂತೆ ಇಂದ್ರಜಾಲಂ ಮುಸುಂಕಿದಂತೆ ಬಂದು[1]ದುಮಂ ಮುಂದೆ[1] ಹೋದು[2][ದು]ಮನಱಿಯ[2]ದೆ [3]+ ಸೌಂದರನುಂ ತುಂಬುರನುಂ ಬೆ[4]ಗಡು[4]ಗೊಂಡು ಬೆಬ್ಬ[5]ಳಿವೋ[5]ಗಿ ಸಡುಕದ ಮಳೆ [6]ಕ[6]ಱೆದು ಭಯರಸದ [7]ಸೇ[7]ಡು ಹತ್ತಿ ಕನಸಿನ ಭಂಗಂ ಕಣ್ದೆಱೆಯೆ [8]ದಿಟ[8]ವಾದಂತೆ ಕಿಱಿದು ಬೇಗಂ ಕೌತುಕರಸದೊಳವಗಾಹಮಿರ್ದು ಪಂಚಾಕ್ಷರಿ[9]ಯಿಂ[9] [10]ತಡಿಗೆ ಸಾರ್ದೆಚ್ಚತ್ತು[10] ಶಿವಜ್ಞಾನಂ ತೋಱೆ [11]ನಂಬಿಯಣ್ಣಂ ತುಂಬುರನ ಮೊಗಮಂ ನೋಡಿ ನಮ್ಮ ಬಡಿ[12]ವ[12] ಬೇಡಂ ಕಿಱುಕುಳನಲ್ಲಂ ಅರ್ಜುನ[13]ನೊಳ್[13] ಕಾದಿದ ಮಹಾ[14]+ಶಬರ[15]ನಾಥನಾಗಲ್ವೇ[15]ಳ್ಕುಂ- ಈ ಕಾನನದೊಳೊಂದು[11] ಶಿವಪುರಮಿರದೆ ಮಾಣ[16]ದು ನೋಡು ನೋಡೆಂ[16]ದು- ಇರ್ವರುಂ ಕಾಲ್ನಡೆಯೊಳ್ ಕಲ್ಲೆನ್ನದೆ ಮುಳ್ಳೆನ್ನದೆ ಮರನೆನ್ನದೆ ದರಿಯೆನ್ನದೆ [17]ಪ[17]ರಿದಱಸುತ್ತುಂ ಬರೆವರೆ ಮುಂದೆ ಅಱಲುಗೊಂಡಂಗೆ ಸುರನದಿಯಿರ್ಪಂತೆ ಬಡವಂಗೆ ಕಡವ[18]ರವಿರ್ಪಂ[18]ತೆ ಕುರುಡಂಗೆ [19]ಕಣ್ಗಳಿರ್ಪಂ[19]ತೆ ಅಜ್ಞಾನಿಗೆ ಶಿವಜ್ಞಾ[20]ನವಿ[20]ರ್ಪಂತೆ [21]ಮುಂದೆ[21] ತಿರುವಖು[22]ರುಘುಂಪೂಂಡಿ[22]ಯೆಂಬ ಶಿವಪುರವಿರೆ ದೂರದಿಂ ಕಂಡಾನಂದದಿಂದ[23]ಲ್ಲಿ ತೊಡಗಿ[23] ಪೊಂಗಳುತುಂ ... 

[1] ದಂ (ಖಚ); ದಂ ಮುಂದೆ (ಜ). [2] ದಮ<ನ>ಱಿಯ (ಕಜ), ದಱಿಯಬಾರ (ಖ), ದಂನರಿ<ಱಿ>ಯಬಾರದೆ (ಗಚ). [3]+ ಬಲವೆಲ್ಲಂ ತುಯ್ಯವಾಗೆ (ಚ). [4] ಡಗು (ಖಚ). [5] ಳಿಯಾ (ಖ), ಳಿಯಾ (ಗಚ), ಳಿಯೋ (ಜ). [6] ಗ (ಕಗ). [7] ಹೆ (ಕ). [8] ಧೀರ (ಖ), ಧಿಟ (ಗ), ದಿಠ (ಚ). [9] ಯ (ಜ). [10] ನುಡಿಗೆ ಸಾರ್ದು (ಖ). [11] ಈ ಭಾಗ (ಖ) ದಲ್ಲಿಲ್ಲ. [12] ದ (ಗ). [13] ನೊಡನೆ (ಗಚ). [14]+ ಕಿರಾತ (ಗ). [15] - - - ಗವೇಳ್ಕುವೇ (ಕ), ನಾಗನಾದಲೇವೇ (ಗ), ನಾತನಾಗಲ್ವೇ (ಚ), ನಾದನಾಗಲೆವೇ (ಜ). [16] ದದನಱಿಸಿ ತೋರ್ವ ನಡೆಎಂ (ಖ), ದರಸರಸು ನೋಡುನೋಡೆಂ (ಗ), ××× (ಚ). [17] ಪರಿಪ (ಚ). [18] ರಂ ದೊರಕೊಂಡಂ (ಕ). [19] ಕಂಣು ತೋರ್ಪಂ (ಕ), ಕಣ್ಣಿಪ್ಪ<ಪ>ಂ (ಖಗ), ××× (ಚ). [20] ನಂ ತೋ (ಕ). [21] (ಖ) ದಲ್ಲಿಲ್ಲ. [22] ರುಘ ಪೂಂಡಿ (ಕ), ರಂ ಘಾತಿ (ಖ), ರುಘುಂ ಪೂತಿ (ಗ), ××× ಂಡಿ (ಚ), ರುಘುಂ ಪೂಡಿ (ಜ). [23] ಲ್ಲಿಯೆ (ಚ). [24] ಕ್ಕ (ಖಚ); ಕ್ಕುತಂ ಕುಣಿವು (ಗ). [25] (ಖಚ) ಗಳಲ್ಲಿಲ್ಲ.

ನೀನು[1]ಳಿಯಲೆಲ್ಲವನಳಿವ[1] ಶಂಭುವೆ ದೇವಾ ರೌದ್ರಕ್ಕೆ ರೌದ್ರ[2]ವಪ್ಪ ರುದ್ರನೆ[2] ದೇವಾ ಮಂಗಳಕ್ಕೆ ಮಂಗಳವಪ್ಪ [3]ಶಶಿಧರನೆ[3] ದೇವಾ ಸುಖಕ್ಕೆ ಸುಖಮಂ ಮಾಳ್ಪ ಶಂಕರನೆ ದೇವಾ ಚೆಲ್ವಿಂಗೆ ಚೆ[4]ಲ್ವಾಗಿರ್ಪು[4]ಮಾಪತಿಯೆ ದೇವಾ ಕಾಲಾಗ್ನಿಗಂ ಮ[5]ಶ[5]ಕಶಿಶು[6][ಗಮಾ][6]ವಂತರಂ ನಿಮ್ಮ [7]ನೋಡಲಾನೆ[7]ನಿತಱವಂ [8]+ನೀನೆ ಆಗುಮಾಡಿ ನೀನೆ ಕೆಡಿಸುವ[9]ಡೆ[9] ಕಾವರಾರಪ್ರತಿಮ ಏ[10]ಕೋರುದ್ರ ಅ[10]ದ್ವಿತೀಯ ಸ್ವತಂತ್ರ ಕರುಣಿಸು [11]ಕರುಣಿಸು[11] [12]ದಯುಗೆಯ್ ದಯ ಗೆಯ್ಯೆಂ[12]ಬ ತಾತ್ಪರ್ಯದ ಕಾರ್ಪಣ್ಯಂ ಶಿವನ ಕಿವಿಗೆಯ್ದಲು

ಮೃಡಂ ಕರುಣಿಸಿ ಪಡಿ[13]ವೊನ್ನಳಂ[13] ಕೊಟ್ಟು ಬೇ[14]ಗ[14] ಪೋಗು [15]ಮಗನೆ ಎ[15]ನೆ ದೇವಾ ನೀ[16]ವೆನ್ನ[16] ಮರ್ತ್ಯದೊಳ್ ಪುಟ್ಟಿಸಿದಂದಿಂದಿಂದುವರಂ ನೆಲ[17]ದ[17] ಮೇಲೆ ನಡೆದಱಿಯೆ[18][ನೊ]ರ್ವನೆ ಇರ್ದಱಿಯೆಂ-[18] ಎನ್ನ ಪಡಿಬಲವ ಸಿಲ್ಲಿಯ ಮಹಾ[19]ವಿಂಧ್ಯ[19]ದೊಳೊರ್ವ ಶಬರನಾಯಕಂ ಬೇಡವಡೆ ಸಹಿತಂ ಬಂದು ಸೂಱೆಗೊಂಡಂ- ಆತ[20]ನಂ[20] ದೇವಾ ನೀ[21]ವ[21]ಱಿಯ[22]ದೊ[22]ಡಾಂ ಬ[23]ಲ್ಲೆಂ- ಎನ್ನೊಡನಿನಿತೇಕ[22] ಜಂಗಮನಿಷ್ಠಂಗೆ ಜಾ[24]ಣ್ಣೇ[24]ಕೆ ಲಿಂಗನಿಷ್ಠಂಗೆ

---

[1] - - - ವನುಳಿವ (ಗ), ಮುಳಿಯಲು ಹರಿಬ್ರ ××× (ಚ). [2] ನೆ (ಕ), ನಪ್ಪುಗ್ರವೆ (ಖಗ), ××× (ಚ). [3] ಶಿವನೆ (ಚ). [4] ಲುವಪ್ಪ (ಖ). [5] ಸ (ಕಗ), ಕ್ಷು (ಖ), ××× (ಚ). [6] ವಾ (ಕ), ವಿಗಾ (ಖಗ), ××× (ಚ), ಗಾ (ಜ). [7] ನಾನೊಡಲೆ (ಖ), ನೊಡಲೆ (ಗ), ××× (ಚ). [8]+ದೇವಾ (ಖಚ), ದೇವ (ಗ). [9] ರೆ (ಖಚಜ). [10] ಕೋರುದ್ರನ (ಕಜ), ಕೋನ (ಖ), ಕ ಅ (ಗ), ಕಾ ಅ (ಚ). [11] (ಖಗ) ಗಳಲ್ಲಿಲ್ಲ. [12] - - - ಗೆಯಿಯೆಂ (ಕ), ದಯೆಗೈದಯೆಗೈಯೆಂ (ಖ), ದಯಂಗೈದಯುಂಗೆಯಿಯೆಂ (ಗ), ದಯುಂಗೆಯ್ದೇವಾಯೆಂ (ಚ). [13] ಹೊಂನು ವಸ್ತ್ರಾಭರಣಮಂಮಂ (ಚ). [14] ಗಂ (ಖಗಚ). [15] ಮೆ (ಕ). [16] ವೆನ್ನಂ (ಕ), ನೆನ್ನ (ಖಗ). [17] ನ (ಖ). [18] ವೊಬ್ಬನೆ ಯಿದ್ದರಿಯೆ (ಕ), ಪೋರ್ವನೆ ಯಿದಱಿಯೆ (ಖ), ××× ಱಿಯೆಂ ದೇವ (ಚ), ಪೊರ್ವ - - - (ಜ) ; (ಗ) ದಲ್ಲಿಲ್ಲ. [19] ಅಡವಿಮಧ್ಯ (ಖಗ), ಅಟವಿಮಧ್ಯ (ಚ). [20] ನ (ಕಖಜ), ××× (ಚ). [21] ನ (ಕಖಗ), ××× (ಚ). [22] ದಿರ್ದೊ (ಜ). [23] ಲ್ಲಿನೆ ನೋಡು ನಿನಗಿನಿತೇಕೆ (ಖ), ಲ್ಲಿನೆ ನೋಡು ನೀನೇತಕೆ (ಗ), ಲ್ಲಿನೆ ನೋಡು ದೇವ ಎನ್ನೊ - - - (ಚ), ಲ್ಲಿಯೆನ್ನೊ - - - (ಜ). [21] ಣಕೆಯೆ (ಚ).

[1]ಸಂ[1]ಗವೇಕೆ ಲಿಂಗಜಂಗಮ[2]ವ[2]ಱಿವ ಡಿಂಗರಿಗಂ[3]ಗೆ[3] ಪ್ರಸಾದಮಂ ಕರುಣಿ[4]ಸಿ
ಇಲ್ಲಾ[4] ಪ್ರಮಾಣಪತ್ರಮಂ ಕೊಡುವುದೆನೆ ಹರಂ ದರಹಸಿತವದನನಾಗುತಲೆ
ಮಗನೆ ನಿನ್ನ ಬಲವ ನಾ[5]ವೆತ್ತ ಬಲ್ಲೆವು[5] ಇಲ್ಲಿಯುಳ್ಳಡಱಿಸಿಕೊಳ್ಳೆಂದು ಪುಣ್ಯೋ ೭೦
ದ[6]ರಮನೊಯ್ಯನಕ್ಕ[6]ಳಿಸಲೊಡಂ ಲಿಂಗ[7]ದ[7] ಪೀಠದ ಸಂಗದೆಡೆದೆಱಹಿಂದಿಂದ್ರ
ಜಾಲದ [8]ಕಾವುಳ[8]ದ್ದಂತೆ ಅದ್ಭುತರಸವುಕ್ಕಿದಂತೆ ಆನೆಯ ಹಿಂಡುಗಳುಂ ಕುದು
ರೆಯ [9]ತ[9]ಟ್ಟುಗಳುಂ ಪದಾತಿಬಲದೊಡ್ಡುಗಳುಂ ವೃಷಭಧ್ವ[10]ಜದ[10] ಮೊತ್ತಂ
ಗಳುಂ ಧವಳಾತಪತ್ರದೊಟ್ಟಿಲುಗಳುಂ [11]ಚಾಮರಸೀಗುರಿಯಾಗರಂಗಳುಂ[11]
ಸೌಂದರ ಪೆರುಮಾಳೆಯ ಮುನ್ನಿನ ಬಲದಿಂ ಚತುರ್ಮಡಿ ಬಲಂ ಪೊಱಮಡೆ

ಪರಮೋತ್ಸಾಹದಿಂ ನಂಬಿಯಣ್ಣಂ ಶಂಭುವಂ ಬೀಳ್ಕೊಂಡು ಪಟ್ಟ
ದಾನೆಯ ಬೆನ್ನ ವಾಯ್ದು ತಳಿತ ಬೆಳ್ಗೊಡೆ[12]ಯ[12] ನೆಳಲೊಳ್ ಚತುರಂಗಬಲಂ
[13]ಬಳ[13]ಸಿ ನಡೆಯೆ ಕಿಱಿದಂತ[14]ರಂ[14] ನಡೆತಂದು ತಿರುಪಾಂಡ್ಯ[15]ಕೊಡು[15]
ಮುಡಿಯೆಂಬ ಚೇರಮನ ಪಟ್ಟಣ[16]ಮಂ ಮುಟ್ಟೆ ಬರೆ ಆತಂ[16] ವಿಚಾರ
ಪ[17]ರಂಪರೆಗಳಿಂ[17] ನಂಬಿಯಣ್ಣಂ ಬಿಜಯಂಗೆ[18]ಯ್ದನೆಂದ[18]ಱಿದು ಪಟ್ಟಣಮಂ ೮೦
ಸಿಂಗ[19]ರಿಸಿ[19] [20]ಕೂಡೆ[20] ಗುಡಿಗಟ್ಟಿಸಿ ಪುರಮಂ ಪೊಱ[21]ಮಟ್ಟು- ಆನೆಕುದುರೆ
[22]ರಥ[22]ಪದಾತಿಗಳ್ ಕೆಲಬಲದೊಳ್ ಬರೆ[21] ಕಾಲ್ನಡೆಯೊಳಡಿಗಡಿಗೆ ಮಯ್ಯಿ
ಕ್ಕುತುಂ ದೂರದಿಂ ಬರ್ಪ ಚೇರಮನನಳವಿಯೊಳ್ ಕಂಡು- [23]ಆನೆಯಿಂ[23]

---

[1] ಮುಸ್ಸಂ (ಖಚ), ದುಸಂ (ಗ). [2] ವನ (ಖಜ). [3] ಗೇಕೆ (ಗ). [4] ಸಿ ಯಿಲ್ಲಾ (ಕಗ), ಸದಿರೆ (ಖ), ಸು ಅಲ್ಲಾ (ಚ), ಸಿ ಇಲ್ಲ (ಜ). [5] ನೆತ್ತ ಬಲ್ಲೆ (ಖ), ನೆತ್ತ ಬಲ್ಲೆವು (ಗ). [6] ರಮಂ ಮೆಲ್ಲನ (ಖ). ರಮುಮೆಲ್ಲಮನಕ್ಕು (ಗ), ರಂ ಮೆಲ್ಲನಕ್ಕ (ಚ), ರವನೊಯ್ಯನಕ್ಕ (ಜ). [7] (ಕ) ದಲ್ಲಿಲ್ಲ. [8] ಕೋಲುಳೆ (ಖ), ಕಾವಳೆಯೆ (ಗ). [9] ದ (ಕಖ). [10] ಜಂಗಳ (ಜ). [11] ಚಾಮರದ ಸೀ - - - (ಕ); (ಖ) ದಲ್ಲಿಲ್ಲ. [12] ಗಳ (ಖಗಚ). [13] ಚಿರ (ಚ). [14] ರಮು (ಖ), ರಮಂ (ಗಚ). [15] ಕೊಳು (ಖಗ), ಚೊಳು (ಚ). [16] ದ ಮುಂದೆ ಬರಲಾತಂ (ಖಗ), . . . ಲಾ ಚೇರಮಂ (ಚ). [17] ರರಿಂ (ಗ). [18] ಯ್ದಪನೆಂದ (ಗ), ಯಿದುದಂನ (ಚ). [19] ರಂ ಗೈಶಿ (ಖ). [20] (ಚ) ದಲ್ಲಿಲ್ಲ. [21] ಮಟ್ಟು ಚತುರಂಗಬಲಂ ಬೆರಸಿ (ಚ). [22] ಪರಿವಾರ (ಖ). [23] ಗಜದಿಂ (ಚ).

ದಿಳಿದು ಸೌಂದ[1]ರಂ ಮೇಲಪ್ಪ[1] ಜೇರ[2]ಮುಂ ಬಿಗಿದ[2]ಪ್ಪಿಕೊಂಡು ಇಹಪರವೊಂದಪ್ಪ ಮಹಾ[3]ಸಖಿಗಳ್[3] ಪರಮ ಸುಖದಿಂ ಪರಸಿ ಸ್ನೇ[4]ಹಾವಲೋಕಸಂಗೆಯ್ದು[4] ಮತ್ತೆ ಮತ್ತಪ್ಪಿ ಮೋಹಂ ಮೂವಡಿಸುತಿರ್ಪರುಂ ಕುಂಭಿಕುಂಭಸ್ಥಳಪೂರ್ಣಾ[5]ಸಪೂರ್ವ[6]ರಾಗಿ ಧವಳಾತಪ[6]ತ್ರಂ ಗಗನದೊಳ್ ನೆರೆಯೆ ಸೀಗುರಿಚಾಮರಂ [7]ರಾಗದಿಂ[7] ಕುಣಿಯೆ ನಿಸ್ಸಾಳಧ್ವನಿ ದಿಕ್ತಟ[8]ಕ್ಕೆ ಧೀಂ[8]ಕಿಡೆ ಭೇರೀರವಂ [9]ಬೊಮ್ಮಾಂ[9]ಡವನಡರೆ ನೆಗೆದ ಧೂಳಿ ರವಿಮಂಡಲಮಂ ಮುಸುಂಕೆ ಎತ್ತಿದ ವೃಷಭಧ್ವಜಂಗಳ್ ಸಭವನ[10]ಡಂಗಿಸ[10] ಶಿವಪಾದಕಮಳಮಧುಕರನೆಂಬ [11]+ ಹರಚರಣ[12]ರಾಗ[12]ಚಂದ್ರಿಕಾ ಚಕೋರನೆಂಬ ದೂ[13]ಷ[13]ಕಧ್ವಾಂತಮಾರ್ತಂಡನೆಂಬ ದುರ್ಜನಾಚಲವಜ್ರ[14]ಧರ[14]ನೆಂಬ [15]ಭಕ್ತಜನವನಫಲಿತ[15]ವಸಂತನೆಂಬ ಶರಣಜನಪರಮಮಿತ್ರನೆಂಬ [16]ಶಿವಸ್ನೇಹಸಿಂಧುವೆಂಬ ಶಿವಪೂಜಾರಾಜನೆಂಬ[16] ಶಿವಾರ್ಚನಾನವೀನನೆಂಬ ತಂಜಿರಾಂ[17]ತೋ[17]ಳನೆಂಬ ಪರಿಪರಿಯ ಬಿ[18][ರು][18]ದಿನ ಕಹಳೆಗಳುರವಣಿಸಿ ಮುಸಗೆ [19]ಬೌದ್ಧರ್[19] ಬುದ್ಧಿಗೆಡೆ [20]ಅರು[21]ಹ[21]ತರಳುಕೆ ಕರ್ಮಿ[22]ಗಳುಮ್ಮಳಿಸೆ ತರ್ಕಿಗಳ್ ತಕ್ಕು[22]ಗೆಡೆ[20] ಭವಿಗಳ್ ಕೌತುಕಂಬಡೆ ಭಕ್ತರ್ ಗುಡಿಗಟ್ಟೆ ಮಂಗಳಮೃದಂಗ ನಾನಾವಿಳಾಸಿನೀನರ್ತ[23]ನ[23] ರತ್ನದರ್ಪಣ ಕನಕಕಲಶ ಸಕಲಜ[24]ನಾ[24]ಶೀರ್ವಾದ

---

[1] ರನಿದಿರ್ವಂದು (ಖ), ರಂ ಮೆರ್ರೈಯಿಯಪ್ಪ (ಗ), ರಂ ಮೆಯಿಕ್ಕಿ (ಚ). [2] ಮನಂ ಬಿಗಿದ (ಖ), ಮಂ ಬಿಗಿಯ (ಗಚ). [3] ಸುಖಿಗಳು (ಕ), ಸಖಿಗಳು (ಖಚ), ಸಖನೊಳು (ಗ). [4] ಹಾಲೋ - - - (ಖಗ), ಹದಿಂದಾಲೋಕನಂ ಮಾ ××× (ಚ). [5] ನಾಪೂರ್ನ (ಖ), ನಾಪೂರ್ಣ (ಗ), ನಪೂರ್ನ (ಜ). [6] ತ್ರಂಗಳ್ (ಖ). [7] ಗಗನದೋ<ದೊ>ಳ್ (ಖಚ), ಗಗನದೊಳು (ಗ). [8] ಕ್ಕೆತ್ತಿ ದಿಂ (ಗ). [9] ಬ್ರಹ್ಮಾಂ (ಖಗಚ). [10] ಳ್ಳಿಖಿಯೆ (ಜ). [11] + ಶಿವಸ್ನೇಹಸಿಂಧುವೆಂಬ (ಗ). [12] (ಖಚ) ಗಳಲ್ಲಿಲ್ಲ. [13] ಸ (ಖಗಚ). [14] ದಂಡ (ಖ). [15] ಭಕ್ತಜನಪಲಿತ (ಕ), ಭಕ್ತಿವನ ಪರೀ<ಫಲಿ>ತ (ಖಗ), ಭಕ್ತಿವ ××× (ಚ), - - - ಪಲಿತ (ಜ). [16] ಶಿವಸ್ನೇಹಿಸಿಂದು - - - (ಕ) ; (ಗ) ದಲ್ಲಿಲ್ಲ. [17] ದೊ (ಕಖ), ತೊ (?) (ಚ). [18] ರಿ (ಸ). [19] ಬವುದ್ಧರ್ (ಕ), ಬಹುದ್ದರು (ಗ). [20] ಈ ಭಾಗ (ಗ) ದಲ್ಲಿಲ್ಲ. [21] ಹಂ (ಖ). [22] ಗಳಂಮಳಿ - - - ತರ್ಕ (ಖ), ಗಳು ತರ್ಕ (ಚ), - - - ಗಳುಕರ್ಪ (ಜ). [23] ಕ (ಗಚ). [24] ನದಾ (ಕಖಗಚ).

[1]ವೈತಾಳಿಕ[1] ನಾಟ್ಯನಾಟ[2]ಕಂಗಳ[2] ನಡುವೆ ಪುಟ್ಟುವ ಸಕಲಸುಖಂಗಳಂ
ಶಿವಂಗರ್ಪಿಸುತುಂ ೧೦೦

ಪುರಮಂ ಪೊ[3]ಗುತಂದು[3] ತಿರುವೀಥಿಯಿಕ್ಕೆಲಂಗಳ ಕರುಮಾ[4]ಡಂಗಳೊಳ್[4]
ನೆರೆದು ನೋಡುವ [5]ಪುರನಾರಿಯರುಂ[5] ತರತರಂಗೊಂಡು ಕಟ್ಟಿದ ಗುಡಿಯ
ತಂಡಂಗ[6]ಳಂ[6] ಮನೆಮನೆಗಳೊಳ್ [7]ತೋರ್ಪ ವೃಷಭಧ್ವಜಂಗ[7]ಳಂ[7] ನೋಡುತುಂ
ಪುಳ[8]ಯ್ಯಾ[8]ಸುತುಂ ತಲೆದೂಗುತುಂ ನಡೆತಂದು- ಅರಮನೆಯ ಮುಂದೆ [9]+
ಚೇರಮಂ [10]ಮುನ್ನಿಳಿದೊಳಗಂ[10] ಪೊಕ್ಕು ಸಭಾಭವನಮಧ್ಯದೊಳು ಬೆಳಗಸು
ಗುಳ್ವ ಕನಕಮಣಿಸಿಂಹಾಸನಮಂ ತಾನಿಕ್ಕಿ ಬಂದು ಸೌಂದರಪೆರುಮಾಳೆಯಂ
ಬಿಜಯಂಗೆಯ್ಸಿ ಶ್ರೀ[11]ಪಾ[11]ದಮಂ ತೊಳೆದು ಪಾದೋದಕಮಂ [12]ತಳೆದು[12]
[13]ಪಾದತಳಮಂ[13] ಭಾಳದೊಳ್ ಕಣ್ಗಳೊಳ್ ಕಪೋಳದೊ[14]ಳುರ[ಃ]ಸ್ಥಳ
ದೊ[14]ಳೊತ್ತಿಕೊಂಡು ಕೃತಕೃತ್ಯಮನನಾಗಿ ಪಾದೋದಕಪ್ರಸಾದಂಗ[15]ಳಂ[15]
ಮಜ್ಜನಭೋಜನತಾಂಬೂಳಚಂದ[16]ನದ್ರ[ವಾ]ದ್ಯ[16]ನುಲೇಪನಂಗಳಂ ಮಾಡಿ ೧೧೦
ಸಕಳಮಕುಟವರ್ಧ[17]ನರ್ ತನಗೆಬಿಗೆ[17] ತಾಂ ಶಿವ[18]ನ ಕುಂಟ[18]ಣಿ [19]ನಡ
ಯಿಸಿ[19]ದ [20]ನಂಬಿಯಣ್ಣನ[20] ಮೆಲ್ಲಡಿಗಳನೊತ್ತುತುಂ [21]+ ಸಾರಹೃದಯನಪ್ಪ
ಚೇರಮನೃಪಂ ಬಹಳಗೊಂದ[22]ಣಾ[22]ಸ್ಥಾನನಾಗಿ ಸೌಂದರಪೆರುಮಾಳೆಯ
ನೋಲೈಸುತ್ತುಮಿರೆಯಿರೆ ||

ಅಷ್ಟಾದಶ ಸ್ಥಲಂ

---

1 ವೈಹಾಳಿಕ (ಖ), ವಾಣಕುಳಕರ್ಕಶ (ಗ), ವೇತಾಳಿಕ (ಚ). 2 ಕರ (ಖಗಚ). 3 ಕ್ಕು (ಚ), ಗುತ್ತಂದು (ಜ). 4 ದೊಳು (ಖಗಚ). 5 - - - ಯರುಮಂ (ಕ), ಸುರನಾರಿಯರುಮಂ (ಗ), ನಾರಿಯರಿಂ (ಚ), ಪುರದ ನಾರಿಯರುಮಂ (ಜ). 6 ಳಿಂ (ಖಚ). 7 ಳಿಂ (ಖಚ), ಳುಂ (ಗ). 8 ಯ್ಯಿಯಾ (ಗ). 9 + ಗಜದಿಂ (ಖ). 10 ಮುಂದಿಳಿದೊಳ (ಖ). 11 ಪ (ಖಚ). 12 ಪ್ರೋಕ್ಷಿಸಿಕೊಂಡು (ಗ). 13 ಪದ ತಳಮಂ (ಖಚ), . . . ವಂ (ಜ) ; (ಗ) ದಲ್ಲಿಲ್ಲ. 14 ಳುರಸ್ಥಳದೊ (ಕಜ), ಳುರಸ್ಥಳದೊ (ಖಗ) ; (ಚ) ದಲ್ಲಿಲ್ಲ. 15 ಳಂ (ಕ). 16 ನದ್ರವ್ಯಾದ್ಯ (ಕಜ), ನಾ (ಖಚ), ನದ್ರವ್ಯಾ (ಗ). 17 ನರ್ತನಂಗೆಯೆ (ಜ). 18 ನ ಕುಂಠ (ಖ), ನಂ ಕೂಂಟ (ಜ). 19 ಮಾಡಿ ನಡಸಿ (ಖಚ). 20 (ಖಚ) ಗಳಲ್ಲಿಲ್ಲ. 21 + ಶೈವ (ಖಗ). 22 ಣ (ಖಗಜ).

# ೧೯ನೆಯ ಸ್ಥಲ

ಸೆಕಳನೃಪಾಳಸಂತತಿ[1]ಯೊಳೊ[1]ಪ್ಪುವ ಚೇರಮಚಕ್ರವರ್ತಿಹ-
ಸ್ತಕಮಳದಿಂದೆ ಪಾದಕಮಳಂಗಳನೊ[2]ತ್ತಿ ಸುತಂ ವಿ[2]ಳಾಸದಿಂ |
ಸುಕೃತನಿಧಾನಸಂಕುಳನನಂತನವೀನಶಿವಾರ್ಚನೋಕ್ತಿ[3]ಲೋ
ಲಕ[3]ಮನನೊಪ್ಪಿದಂ ಪರಮಸಾತ್ತ್ವಿಕನೀಶ್ವರ[4]ಸೂನು[4] ಸೌಂದರಂ ||

ಇಂತು ಚೇರಮನ ಕಡು[5]ನೇ[5]ಹಕ್ಕೆ [6]ಮೈ[6]ದಂದು
ಸಂತತಂ ಸಕಳಭೋಗಂಗಳೊಳ್ [7]ಮಸ[7]ಸಂದು |
ಲಲನಾನವೀನನೃತ್ಯಂಗಳಂ ನೋಡುತುಂ
ಸುಲಲಿತಸುವಾದ್ಯಸ್ವ[8]ನಂ[8]ಗಳಂ ಕೇಳುತುಂ |
ಶಿವಗೀತಶಿವಕಥಾಮೃತರಸವನೀಂಟುತುಂ
ಭವಜಳಧಿಯಂ ಶರಣಗೋಷ್ಠಿಯಿಂ ದಾಂಟುತುಂ |
ಎಲ್ಲಾ ಸುಖಂಗಳಂ ಶಂಕರಂಗರ್ಪಿಸುತೆ
ಎಲ್ಲಾ ವಿನೋದಮಂ ಶಿವ[9]ಪೂಜೆ[9]ಗೆಯ್ದಿಸುತೆ |
ಪರಮಸುಖದಿಂದ[10]ಮಿರುತಿ[10]ರ್ದೊಂದು [11]ದಿವಸದೊಳು[11]
ಹರುಷದಿಂದುಪ್ಪರಿಗೆಯೇಱ ರವಿಯುದಯ[12]ದೊಳು[12] |
ಪುರದ ನಾಲ್ಕುಂ ದಿಶಾವರವನೀಕ್ಷಿ[13]ಸುತ್ತ[13]ಲ್ಲಿ
ಹರನಾಲಯಂ [14]ತ್ರೋ[14]ಱೆ ಸೌಂದರಂ ಕಂಡಲ್ಲಿ |
ಬೆಸಗೊಳಲು ತಿರುವಂಜಕಳದೇವರೆಲೆ ದೇವ
[15]ಶಶಿ[15]ಧರಂ [16]ನೆಲ[16]ಸಿದ ಮಹಾ[17]ಸ್ಥಾನವೆಲೆ ದೇವ[17] |

---

[1] ಯನೊ (ಖಗ). [2] ತ್ತುತ್ತಲುಂ ವಿ (ಗ), ತ್ತುತ್ತಸದ್ವಿ (ಚ), ತ್ತುತ್ತಿರಲ್ ವಿ (ಜ). [3] ಪಾಲಕ (ಕ), ಲೋಲುಪ (ಗ), ಲೋಲುಕ (ಚಜ). [4] ಭಕ್ತ (ಖ), ನೂನ (ಜ). [5] ಮೋ (ಖಗ). [6] ಮನ (ಖ). [7] ಸಲೆ (ಖಗಚ). [8] ರಂ (ಕಖಗಚ). [9] ನಲ್ಲಿ (ಖ). [10] ವಿರುತಿ (ಕ), ಮಿರ್ದಿ (ಖ), ವಿಂತಿ (ಗಚ). [11] ದಿವಸದಲಿ (ಖಗಚ). [12] ದಲಿ (ಖಗ), ××× (ಚ). [13] ಸಲ (ಖಗ). [14] ದೋ (ಕಜ). [15] ಸಸಿ (ಖಚ). [16] ಬೆಸ (ಕ). [17] ನವಲಮು (?) ××× (ಚ).

ಎಂದು ಪೇೞಲು ಕೇಳ್ದು ಬಲದ ಕಣ್ ಕೆತ್ತುತುಂ
ಸಂದಣಿ[1]ಸಿ[1] ಕರಣಂಗಳಾನಂದವೇಱುತುಂ |
ಪುಳಕಂಗಳಂಗದೊಳ್ ತೀವಿ ತಲೆದೋಱುತುಂ
ಇಳಿವಶ್ರುಜಲದಿಂದೆ ಕಣ್ಗಳೆರೆಮು[2]ಗಿವು[2]ತುಂ |
ಇರುತಿರುತೆ ಶಿವವಿಕಳ[3]ವಾ[3]ದಂತೆ ತೋಱುತುಂ
ಪರ[4]ಮಶಿವ ಮುಂ[4] ಪೇಳ್ದ ಕರುಣಮಂ ನೆನೆವುತುಂ |
ಏಱಿರ್ದ ಗರ್ವಪರ್ವತ[5]ವನೊಲ್ದಿ[5]ಳಿವಂತೆ
ಮಿಾಱಿರ್ದ ಭವಜಳಧಿ[6]ಭೈತ್ರ[6]ದಿಂದಿ[6]ಳಿವಂತೆ |
ಉಪ್ಪರಿಗೆಯಿಂದೆ ತುಂಬುರನ ಕೈವಿಡಿದಿಳಿದು
ಒಪ್ಪದಿಂ ಚೇರಮನ ಪುರವೀಥಿಯಂ ಕಳಿದು |
ಒಡನೆ ಶಿವಭಕ್ತಸಂಕುಳವೊಲ್ದು ಒರು[7]ತಿರಲು[7]
ನಡೆತಂದನಾನಂದರಸ[8]ಗಳುಕ್ಕುತ್ತಿರಲು[8] |
ಬಂದು ಶಿವನಿಳಯಮಂ ಪೊಕ್ಕು ಮಯ್ಯಿಕ್ಕುತುಂ
[9]ಸಂದಿರ್ದ[9] ಸಮಸುಖಪ್ರೇಮದಿಂದುಕ್ಕುತುಂ |
ದೇವ ತಿರುವಂಜಕಳನಾಥ ಕರುಣಾಕರಾ
ದೇವ ಭವಜಳಧಿಯಿಂದೆ[10]ತ್ತುವ[10] ಕೃಪಾಕರಾ |
ದೇವ ಪಶುಪಾಶವಿ[11]ಚ್ಛೇ[11]ದನಕರಾ[12]ಖ್ಯ[12]ನೇ
ದೇವ ಸದ್ಭಕ್ತಸಂಕುಳಪರಮ[13]ಸೌಖ್ಯ[13]ನೇ |
ದೇವ ಮನ್ಮಥಗರ್ವಸರ್ವ[14]ಸ್ವ[14]ಹರಣನೇ
ದೇವ ಗಿರಿಜಾನಂದಸಮಸುಖಾವರಣನೇ |

---

1 ಪ (ಖಗಚ). 2 ಚ್ಚು (ಖ). 3 ನಾ (ಖಗ). 4 ಮಶಿವನುಮುಂ (ಕ), ಶಿವಂ ಮುಂ (ಖಚ), ಶಿವ ಮುಂ (ಗ), ರಮಶಿವನುಂ (ಜ). 5 ವುಮನಿ (ಕ), ವನೊಲಿದಿ (ಖಗಚ). 6 ಭೈತ್ರಮುಮನಿ (ಕ), ಭಯಿತ್ರದಿಂದಿ (ಖಗ). 7 ತಮಿರೆ (ಖಗಚ). 8 ಭರಿತನೊಪ್ಪುತಿರೆ (ಖಗಚ), ಉಉಕ್ಕು - - - (ಜ). 9 ಸಿಂದಿರ್ದು (ಖಗ), ಸ(?)ಂದಿರ್ದ (ಚ). 10 ತ್ತೈ (ಗ). 11 ತ್ಸೇ (ಗ). 12 ಬ್ಜ (ಕಗ). 13 ಸೇವ್ಯ (ಕ). 14 ಸಂ (ಕ).

ದೇವ ಸಂಸಾರವಾರಾ[1]ಶಿ[1]ವಡಬಾನಳಾ
ದೇವ ದುರಿತೌಘಧಾರಾಧರಮಹಾಬಳಾ |
ದೇವ [2]ಭಾ[2]ಳೇಕ್ಷಣವಿರಾಜಿತವಿರೂಪಾಕ್ಷ
ದೇವ ಕರುಣಿಪುದೆನಗೆ ಹಂಪೆಯ ವಿರೂಪಾಕ್ಷ |
ಪಡಿವೊಸ್ಗಳಂ ಪ್ರಸಾದವನೀವುದೆನಗಯ್ಯ
ತಡೆಯದೀವುದು [3]ಸೌ[ರ]ಭಾಕರಂಗಳನ[3]ಯ್ಯ |
ಎಂದು ಪೊಗ[4]ಳಲ್ಕ[4]ಲ್ಲಿ ಶಿವನ ಪ್ರಸಾದ[5]ಮುಂ[5]
ನಂದಿಯುಂಡಿಗೆಯ ಪೊನ್ನುಂ ಶಿವನ ಕರುಣ[6]ಮುಂ[6] |
ಅ[7]ವಱೊಳಗೆ[7] ವೃಷಭ[8]ಶಾಸನಮ[8]ಪ್ಪ ರಾಯ[9]ಸಂ[9]
ಭವನ ಕಾರುಣ್ಯದಿಂ ಮುಂ[10]ದಿ[10]ರೆ ನಿರಾಯಸಂ |
ಇರೆ ಕಂಡು ರಾಯಸವನುತ್ತಮಾಂಗದೊಳಿರಿಸಿ
ಪರಮಭ[11]ಕ್ತಂ ಬಿಡುತ್ತೋದಿ[11]ದಂ [12]ಸಡ[12]ಗರಿಸಿ |
ನರಲೋಕದೊಳ[13]ಗಿರವು ತನಗೆ[13] ಸಾಲ್ವುದು ನಂಬಿ
[14]ಚ[14]ರಿತದಿಂ ಬರ್ಪುದೆ[15]ಮ್ಮಂಘ್ರಿಯ[15]ಲ್ಲಿಗೆ ನಂಬಿ |
[16]ಐ[16]ರಾವತಂ [17]ಬಂದು[17]ದೇಱಿಬರ್ಪುದು ನಂಬಿ
ವಾರಣೇಂದ್ರಂ [18]ಬಂದು[18]ದೇಱಿಬರ್ಪುದು ನಂಬಿ |
ಇಂತು ಶಿವಲಿಖಿತಮಿರೆ [19]ಕೊಂ[19]ಡೋದಿ ಕೈಕೊಂಡು
ಸಂತಸಂಬಡುತೆ ಶಿವನಾಜ್ಞೆಗೆ ಮನಂಗೊಂಡು |

---

1 ಸಿ (ಕಖಗ). 2 ಘಾ (ಖ), ಬಾ (ಗ). 3 ಸೌರುಭಾ - - - (ಕಜ), ಸೌರುಭಾಕರವ ನೆನಗೈ (ಖ), ಸೌರುಭಾಕರಣಗಳನ (ಗ), ಸರ್ವಲೇಪನಂಗಳನ (ಚ). 4 ಳುತ್ತ (ಕಗಚ). 5 ಮಂ (ಕಗ). 6 ಮಂ (ಕಗಚ). 7 ವರೊಳಗೆ (ಕ), ವಱೊ<ರೊ>ಡನೆ (ಖಗ), ದಱೊಡನೆ (ಚ), ದಱೊಳಗೆ (ಜ). 8 ರಾಯಸವ (ಗ), ಮುದ್ರೆಯೊಳ (ಚ). 9 ಸಮಂ (ಗ). 10 ಬ (ಗ). 11 ಕ್ತರು ಬಿಡದೊತ್ತಿ (ಗ). 12 ಸಿಂ (ಕಖಗ). 13 ಗೆಯಿನ್ನಿರಲು (ಖ), . . . ರವು (ಗಚ), ಗಿರವು ನಿನಗೆ (ಜ). 14 ಪ್ಪ (ಚ). 15 ಮ್ಮಡಿಗಳ (ಖ). 16 ಐಯಿ (ಕ), ಅಯಿ (ಖಚ). 17 ಬಪ್ಪ (ಖಗಚ). 18 ಬಪ್ಪ (ಖ), ಬರುವ (ಗ), 19 ಕಂ (ಖ).

ಮುಂದೆ ನೋಡ[1]ಲ್ಕೆ ಬಂದಿರ್ದುದನಿ[1]ಮಿಷಗಜಂ
[2]ಚಂದ್ರ[2]ಗಿರಿಯಂತೆ ನಿಂದಿರ್ದುದು ಮಹಾಗಜಂ|
, ಇರೆ ಕಾಣುತ್ತೈರಾವತದ ಮಸ್ತಕವನೇಱು
ಶರಣರಂ ಬೀಳ್ಕೊಂಡು ಶಿವನ [3]ನೇಹಂ ಸಾಱು[3]|
ಸು[4]ರಿವ[4] ಹೂವುಳೆಗಳಿಗೆ ಹರುಷಮಂ ತಾಳುತುಂ
ಸುರದುಂದುಭಿಸ್ವನಕೆ ಮುಯ್ಯಾಂತು ಕೇಳುತುಂ|
ಚೇರಮಂಗ[5]ಱು[5]ಪೆಂದು ತುಂಬು[6]ರಂಗಱುಪುತಂ[6]
ತಾರಾಪಥ[7]ಕ್ಕೆ ನೆಗೆದಂ ಸುರಗಜಸ್ಥಿತಂ[7]|
ಇತ್ತಲಾ ತುಂಬುರಂ ನೋಡಿ ವಿಸ್ಮಿತನಾ[8]ಗಿ[8]
ಚಿತ್ತದೊಳ್ ಪರಿಜನಕೆ ಪರಮಕೌತುಕ[9]ವಾಗಿ[9]|
ತಲೆ ಹೋದ ತನುವಿನಂತಿ[10]ರ್ದರಿ[10]ನಿತುಂ ಬೇಗ-
[11][ವೆ]ಲರ[11]ಳಿದ ಬಱಿದೇಹದಂತೆ ಕಿಱಿದುಂ ಜೇಗ-|
[12]ವಿ[12]ರ್ದು ಚೇರಮನಲ್ಲಿಗೆಯ್ತಂದು ತುಂಬುರಂ
ಸಾರ್ದು ಮಜ್ಜನದ ಮನೆಗಳಲುತುಂ ತುಂಬುರಂ|
ನಂಬಿಯಣ್ಣಂ ಹೋದನೇನೆಂಜಿನೆಲೆ ದೇವ
ನಂಬಿಕೊಂಡಿರ್ದ ಪರಿ[13]ಜನವಿರ್ದುದೆಲೆ[13] ದೇವ|
ಕೈಲಾಸದಿಂದಾನೆ ಬಂ[14]ದೊಯ್ದುದೆಲೆ[14] ದೇವ
ಹಾಳಾದುದೀ ಜನದ ಪುಣ್ಯಫಲವೆಲೆ ದೇವ|

---

1 - - - ದನು (ಕ), ಲ್ಕಾಗಬಂದುದನು (ಖಚ), . . . ದನಿ (ಗ), ಲ್ಕೆ ನಿಂದಿರ್ದುದನು (ಜ).
2 ಇಂದು (ಗಚ).
3 ಹರುಷವೆಂಬ (ಗ).
4 ರರು (ಖ).
5 ರು (ಕಖಗ), ಱು (ಚ).
6 ರಂಗರುಪುತಂ (ಕಗ), ರಗೆ ಪೇಳುತಂ (ಖ), ರಂಗುಸುರುತಂ (ಚ), ರಂಗಱುಪುತುಂ (ಜ).
7 ಕೆ ನೆಗೆದ ಪರಮಭಕ್ತಿಸ್ತಿತಂ ಭಕ್ತಿಸ್ಥಿತಂ (ಕ), ಕೆ ನೆಗದ ಸುರರಿಗತಿವಿಸ್ಮಿತಂ (ಖ), . . . ವಿಸ್ಮ್ರ<ಸ್ಮೃ>ತಂ (ಗಚ), ಕ್ಕೆ ನೆಗದಂ ಸುಗಜಸ್ಥಿತಂ (ಜ).
8 [ಗೆ] ?
9 ವಾಗಿ (ಗ), ನಾಗಿ (ಜ), [ವಾಗೆ] ?
10 ರ್ದುದಿ (ಖಗಚ).
11 ಯ<ಯೆ>ಲರ (ಕಜ), ಎಲರ (ಖ), ನಳರ (ಗ), ಬಲವ (ಚ).
12 ಯಿ (ಕಖಚ).
13 ವಾರವಿರ್ದುದು (ಕ), × × × (ಚ).
14 ದುವೊಯಿದುದು (ಗ).

ಎನೆ ಚೇರಮಂ ಮಜ್ಜನವನೊಲ್ಲದುರವಣಿಸಿ
ನೆನೆದು ಭೋಂ[1]ಕನಲೆ[1]ದ್ದು ರುದ್ರಾಕ್ಷಿಯಂ ಧರಿಸಿ |
ಪೋದನೇ ನಂಬಿಯಣ್ಣಂ ಪೋದ[2]ಡ[2]ದಕೇನೊ
ಪೋದ[3]ಡೇಂ[3] ಹಿಂದುಳಿವನಲ್ಲ ಚೇರಮನೇನೊ |
ತರಿಸು ತರಿ[4]ಸೆಂಪೆಱಂಕೆ[4]ಯ ಕುದುರೆಯಂ ತರಿಸಿ
ತರತರದ ರುದ್ರಾಕ್ಷಿ[5]ವಕ್ಕರಿಕೆ[5]ಯಳವಡಿಸಿ |
[6]ಮನದೊಳಗೆ ಪಂಚಾಕ್ಷರಿಯನಗಲದಂತಿರಿಸಿ
ತನುವಿನೊಳ್ [7]ಮೆಱೆವ ಹೊಸ[7]ಭಸಿತವನಲಂಕರಿಸಿ |[6]
[8]ತಿರುವಾಳಪೊಱವೆಂ[8]ಬ [9]ಕಾವ್ಯಮಂ[9] ಕೈಕೊಂಡು
ಹರುಷದಿಂ ಪಚ್ಚೆ[10]ಗು[10]ದುರೆಯನೇಱಿ [11]ಮುಂ[11]ಕೊಂಡು | ೮೦
ಹರಹರ ನಮಃ ಶಿವಾಯೆಂ[12]ಬಾ[12]ಯುಧಂಗೊಂಡು
ಹರನ ರೂಪಂ ಕರಣದೊಳಗೊಚ್ಚತಂಗೊಂಡು |
ನಡೆ ನಂಬಿಯಣ್ಣನಿರ್ದಲ್ಲಿಗೆನುತಂ [13]ನೆಗ[13]ದು
ಕಡುಮುಳಿದು ಸೌಂದರನ ಮುಂದೆ ಕಿಱಿದಂ ನಡೆದು |
ಕಂಡಲ್ಲಿ ನಂ[14]ತಸಂಬಟ್ಟಿರ್ವರುಂ[14] ನಡೆದು
ಖಂಡೇಂದುಧರನ ಕೈಲಾಸಕ್ಕೆ ಸುಖವಿಡಿದು |
ಬರುತ[15]ಲ್ಲಿ[15] ಕಾರಿಕಾ[16]ಲ[16]ಮ್ಮೆಯರಸೀಕ್ಷಿಸುತೆ
[17]ಚರಿತದಿಂ[17] ಬರಲಾರ್ಪಿರೇ ಎಂದು [18]ನಸುನಗುತೆ[18] |

---

[1] ಕನೆಯೆ (ಗಚ). [2] ನ (ಖ). [3] ಡಂ (ಗ). [4] ಸೆನುತೆಱಂಕೆ (ಖ), ಸೆಂದು ರೆಂಕೆ (ಗ), ಸೆಂದು ಅಂಚೆ (ಚ). [5] ಯ್ವಕ್ಕರಿಕೆ (ಕ), ಯಕ್ಕರಿಕೆ (ಖ), ವಕ್ಕರಿಗೆ (ಚ). [6] ಈ ಎರಡು ಪಂಕ್ತಿಗಳು (ಖಗಚ) ಗಳಲ್ಲಿ ಹಿಂದುಮುಂದಾಗಿವೆ. [7] ಚರಮಂ (ಗ). [8] ತಿರುವಾರ ಪುರಮೆಂ (ಕ), ತಿರಿನಾಳಪುರವೆಂ (ಖ), ತಿರುವಾಳಪೊರ<ಱ>ವೆಂ (ಗಚ), ತಿರುವಳ ಪೊಱವೆಯೆಂ (ಜ). [9] ಕಬ್ಬಿಯಂ (ಖ), ಕಾಚ್ಯಮಂ (ಗ), ಕಬ್ಬಮಂ (ಚ). [10] ಕು (ಕಖಜ), ಯಕು (ಚ). [11] ಕೈ (ಜ). [12] ದಾ (ಗ). [13] ನೆನೆಗ (ಕ), ನೆನೆ (ಖ), ನೆಗ (ಚಜ). [14] ತೊಷಂ ಬಟ್ಟೊಬರು (ಗ), ತಸಂಬಿ - - - (ಜ). [15] ವಾ (ಖಗಚ). [16] ರ (ಖ). [17] ಚರಿತದೊಳು (ಖಗ), ತ್ವರಿತದಿಂ (ಚ). [18] ನುಡಿಯಿಸುತ (ಖಗಚ).

ಶಿವಸೋಲಗಕ್ಕೆ ಕೈಲಾಸಕ್ಕೆ ಬರುತಿರ್ಪ
ಭವಸೋಲಗಕ್ಕೆ ನಾಲ್ದೆಸೆಯೊ[1]ಳಂ[1] ಬರುತಿರ್ಪ |
ಅಪ್ರತಿಮ[2]ರೆನಿಪ[2] ಗಣನಾಯಕಾವಳಿಗ[3]ಳಂ[3]
ಸುಪ್ರಸಿದ್ಧ ಪ್ರಮಥನಾಥನಿವಹಂಗ[3]ಳಂ[3] |
ಗರುಡವಾಹನ[4]ರಾ[4]ಗಿ ಪೋಪವರಸಂತರಂ
ನೆ[5]ರೆದು[5] ಹಂಸೆಯನೇಱಿ [6]ಬರ್ಪ[6]ವರಸಂತರಂ |
ಗಜಮಸ್ತಕವನೇಱಿ [7]ಬರ್ಪ ಸುರಪ[7]ತಿಗಳಂ
ಭುಜಬಲ[8]ರೆ[8]ನಿಪ್ಪ ನಿರ್ಜರರ ಪೊತ್ತಂಗಳಂ |
ಪರಿಪರಿಯ ವಾಹನದಿ ನಡೆವ ದಿಗಧೀ[9]ಶ[9]ರಂ
ತರ[10]ದಿಂದೆ[10] ನಡೆವ ಕೌತುಕ[11]ದ ಸಂದೋಹರಂ[11] |
ಭರ[12]ದಿಂ ನಡೆವ[12] ರಾಜ[13]ಋ[13]ಷಿ ದೇವ[14]ಋಷಿಗಳಂ[14]
ಪರಮಶಿವಭಕ್ತರೆನಿ[15]ಸುವ[15] ಬ್ರಹ್ಮ[16]ಋಷಿಗಳಂ[16] |
ಕಿನ್ನರರ್ ಕಿಂಪುರುಷರೆಯ್ತಪ್ಪ ಹಾದಿ[17]ಯಂ[17]
ಪನ್ನಗ[18]ರ್ ಗಂ[18]ಧರ್ವಸಂಕುಳದ ವೀಥಿಯಂ |
ಸುರಭಿಗಳ ಹಿಂಡು [19]ಸುರ[19]ಭೂಜದಾ[20]ರವೆಗಳಂ[20]
ಪ[21]ರುಷ[21]ದಜಲಂ [22]ಸುಧಾ[22]ರಸದ ಕೂಪಂಗ[23]ಳಂ[23] |
ಪೇ[24]ಳ್ವಡರಿದಿನ್ನೆನಗಸಂ[ತಾ][24]ದ್ಭುತಂಗಳಂ

---

[1] ಳುಂ (ಕಖ). [2] ರ<ನ>ಪ್ಪ (ಖಗ). [3] ಳಿಂ (ಕಖಚ). [4] ವಾ (ಗ). [5] ರಡು (ಖ). [6] ಪೋಪ (ಖಗಚ). [7] ನಡವ ಪ<ಸು>ರಸ (ಖಚ), ನಡೆವ ಸುರಪ (ಗ). [8] ವೆ (ಚ). [9] ಶ್ವ (ಗ). [10] ತರದಿ (ಖ). [11] ರ ಸಂತೋಷದಿಂ (ಕ), ರ ಸಂದೋಹರಂ (ಖ). ರ ಸಂತೊಸರಂ (ಗ), ರ ಸಂತೋಷರಂ (ಚ). [12] ದಿಂದ ನಡವ (ಖ), ದಿಂದ ಬಹ (ಗ), ದಿಂ ನಡವ (ಚ), ದಿಂದೆ ನಡವ (ಜ). [13] ರು (ಸ). [14] ರುಷಿಗಳಿಂ (ಕ), ರುಷಿಯರಂ (ಖ), ರು - - - (ಗಚ), ರುಗಳಂ (ಜ). [15] ಪ (ಜ). [16] ರುಷಿಗಳಿಂ (ಕ), ರುಷಿಯರಂ (ಖ), ರು - - - (ಗಚಜ). [17] ಯಿಂ (ಕ). [18] ರ್‌ಗಾಂ (ಖ), [ರ ಗ] ? [19] ಗಳ (ಗ). [20] ರವೆಗಳಿಂ (ಕಗ), ಗಾರರುಂ (ಖ). [21] ರಿಸ (ಖ). [22] ಮಹಾ (ಖ). [23] ಳಿಂ (ಕಖಗ). [24] - - - ನಂತ (ಕಚ), ಳ್ದಡಿನ್ನೆನಗರಿದು ಅನಂತ (ಖ), ಳ್ದದರದಿಂನೆನಗನಂತ (ಗ), ಳ್ವಡರಿದಿರನೆನಗನಂತ (ಜ).

ಕೇ[1]ಳ್ವ[1] ಭಕ್ತರ್ ಬಲ್ಲರಾ ಕೌತುಕಂಗಳಂ |
ಇಂತನೇಕಪ್ರ[2]ಕಾರಂ[2]ಗಳಂ ನೋಡುತುಂ
ಸಂತಸಂ ಮಿಗೆ ಚೇರಮಂಗಲ್ಲಿ ತೋಱುತುಂ |
ಬಂದು ನಾನಾಪಟ್ಟಣಂಗಳಂ ದಾಂಟುತುಂ
ಮುಂದೆ ಕೋಟಾಕೋಟಿ ಬಾಗಿಲಂ ಕಳಿವುತುಂ |
ನಡೆತರಲು ಮೇಲೆ ಶಶಿಕೋಟಿಯುಂ ಮಸುಳಿಸುತೆ
ಎ[3]ಡೆವಿಡದೆ ನೆರೆದ[3] ರವಿಕೋಟಿಯುಂ ಮಸುಳಿಸುತೆ |
ಕೈ[4]ಲಾಸಮಿರೆ[4] ಕಂಡು ಮಯ್ಯಿಕ್ಕಿ ನಿಂದಿರ್ದು
ಶೈ[5]ಲ[6]ಜಾಪತಿಯೆ ಶರಣೆನುತೆ ಬೆಱಗಾಗಿರ್ದು |
ಮುಂದೆ ತುಱುಗಿರ್ದ ಸಿದ್ಧರ ಮೊತ್ತಮಂ ಬಗಿದು
ಸಂದಣಿಪ ಗಂಧರ್ವಸುರನಿಕರಮಂ ಕಳಿದು |
ತಮ್ಮಂದೆ ಮುಂದಿರ್ದ ಕಾ[6]ರಿಕಾಲ[6]ಮ್ಮೆಯುಂ
ತಮ್ಮರ್ವರುಂ ಕಂಡು ಬೆಸಗೊಳಲ್ಕಮ್ಮೆಯುಂ |
ಮಗನೆ ಕಡುಗುದುರೆಯುಂ ಬಡ[7]ಬಿ[ಜ್ಜೆ][7]ಯುಂ ಸಮಂ
ಮಗನೆ [8]ನಾಣ್ನು[8]ಡಿ ತಪ್ಪ[9]ದೆಂಬುದಿಂತೀ[9] ಕ್ರಮಂ |
ಎನಲಲ್ಲಿ ಬೇಡಿಕೊಳುತುಂ ಏಱಿಱು ಬರುತಮಿರೆ
ಮನದೊಳಗೆ ಶಿವನ ನೆನಹಂಕುರಿಸಿ [10]ನಡೆ[10]ವುತಿರೆ |
ನಂದೀಶ್ವರನ ಬಾಗಿಲೊಳ್ ಬಂದು ನಲಿವುತ್ತೆ
ಮುಂದೆ ಪೆರುಮಳಲೆಯ ಕುಱುಂಬರ್ ಗುಡಿಯನೆತ್ತೆ |
ಆರಿದೆಲ್ಲಿಯ ಗುಡಿಯಿದೆಂದು ನಂದೀಶ್ವರಂ
ಹಾರೈಸಿ ಕೇಳೆ ಬರ್ಪಂ ನಂಬಿಯೆನೆ ಕರಂ |

---

[1] ಳ್ದ (ಖ), ಳ್ದವ (ಚ). [2] ಕರಣಂ (ಗ). [3] ಡೆಗುಡದೆ ನೆಗ<ಗೆ>ದು (ಕಖ), ಡೆಗೊಡೆದ ನೆರದ (ಗ), ಡವಿಡದೆ ನೆರದ (ಚ). [4] ಳಾಸವಿುರೆ (ಕ), ಲಾಸವಿರೆ (ಖಗಚ), ಲಾಸವಮಂ (ಜ). [5] ಳ (ಕ). [6] ಲಿಕ್ಕಾರ (ಖ). [7] ಬಿಚ್ಚೆ (ಕಚ), ವಜ್ಜ (ಖ), ಬಿಜ್ಜೆ (ಗಜ). [8] ನಾಣ್ಣು (ಕ), ನಾನಾಳ್ಕೀ (ಗ). [9] ವೆಂದೆಂಬುದೀ (ಖ), ದೆಂಬುದಿಂದೀ (ಚ). [10] ನೆಡ (ಕ).

ನಂದೀಶ್ವರಂ ಬಂದು ದೇವದೇವೇಶಂಗೆ
ಮುಂದೆ ಮಯ್ಯಿಕ್ಕಿ ಕಯ್ಯೆತ್ತಿ ಸರ್ವೇಶಂಗೆ |
ದೇವ ಮಾನವಭಕ್ತಸೊರ್ವನಿರದೆಯ್ತಂದು
ದೇವ ಬಾಗಿಲೊಳು ಗುಡಿಗಟ್ಟಿದ[1]ಡಿ[1]ದೇನಂದು |
ಬೆಸಗೊಳಲು ನಂಬಿ ಬಂದಪನೆಂದನೆಲೆ ದೇವ
ಪಶುಪತಿಯೆ ಕರುಣಿಪುದಿದೇನೆಂಬ ಪರಿ ದೇವ |
ಎನೆ ಶಂಭುವಱಿದು ಕೇ[2]ಳ್ಕೈ ಕೇಳು[2] ನಂದೀಶ
ಮನುಜ[3]ರಲ್ಲೆನ್ನ[3] ಭಕ್ತರ ಬರವು ನಂದೀಶ |
ನಡೆತಂದಪಂ ನಂಬಿಯಣ್ಣ[4]ನೆನ್ನ[4]ಯ ಸುತಂ
[5]ನಡೆದು ನೀ[6]ವೆ[6]ಲ್ಲಿದಿ[7]ರ್ಗೊಂಬುದವ[7]ನುನ್ನತಂ |[5]

ಎನಲಲ್ಲಿ ನಂದೀಶ್ವರಾದಿಗಳ್ ನಡೆತಂದು
ತನತನಗೆ ಸಕಲಪ್ರಮು[8]ಥಾದಿಗಳಿದಿರ್ವಂದು[8] |
ನಡಗರದೊಳಿದಿ[9]ರ್ಗೊಂಡು[9]ದ[10]ಲ್ಲಿ ಪ್ರಮಥ[10]ಗಣಂ
ಮೃಡನ ಸು[11]ತ[11] ನಂಬಿಯಣ್ಣ[12]ನನಲ್ಲಿ[12] ಹರಗಣಂ |
ಇದಿರ್ಗೊಳಲು ನಡೆತಂದನೊಲವಿಂದೆ ಸೌಂದರಂ
ಸದಮಳಶಿವ[13]ಧ್ಯಾ[13]ನಪೂಜೈಕತತ್ಪರಂ |
ಕೈಲಾಸದೊಳಗೆಲ್ಲ ಗುಡಿಗ[14]ಟ್ಟಿ ಸಿಂಗ[14]ರಿಸಿ
ಭಾಳಲೋಚನನೋಲಗಂಗೊಟ್ಟು ಹಾರೈಸಿ |
ಇರೆ ಬಂದು ನಂದೀಶ್ವರನ ಬಾಗಿಲಂ ಪೊಕ್ಕು
ಬರೆ ಚೇರಮನನಲ್ಲಿ ಪೊಗಲೀಯದಿರೆ ಮಿಕ್ಕು |

---

1 ನೆ (ಖ), ನಿ (ಗಚ). 2 ಳ್ಕೀಳೆಲೇ (ಜ). 3 ಲೆಂಮ (ಗ). 4 ನೆಂಮ (ಗಜ).
5 ಈ ಪಂಕ್ತಿ (ಖ) ದಲ್ಲಿಲ್ಲ. 6 ವಿ (ಗಚ). 7 ರ್ಗೊಳುವುದುಕ (ಗ), ರ್ಗೊಳುವುದವ (ಚ).
8 ಥನಾದರಿಂದಿಗೊಂಡು (ಖ). 9 ರ್ವಂದು (ಖ). 10 ಲ್ಲಿಯ ಪ್ರಮಥ (ಕಖ), ಲ್ಲಿ ಪ್ರಮಥಂ (ಗ), ಲ್ಲಿ ಪ್ರಮಥನ (ಚ). 11 ತನಂ (ಗ). 12 ನಂ (ಗಚ). 13 ಗ್ನಾ (ಚ).
14 ಟ್ಟಿ ಶೃಂಗ (ಕ), ಟ್ಟಲಬ್ಬ (ಖಗಚ).

ಮುಂದೆ ಪೆರುಮಳಲೆಯ ಕುಱುಂಬರ್ ಗುಡಿಯನೆತ್ತಿ
ಹಿಂದೆ ಸೌಂದರನಲ್ಲಿ ಬಂದು [1]ಸಂತಸವೆತ್ತಿ[1] |
ಮುನ್ನ ಪೆರುಮಳಲೆಯ ಕುಱುಂಬರಂ ಕಾಣಿಸುತೆ
ತನ್ನ ಕಾಣ್ಕೆಗೆ ಬಳಿಕ ತೆಱಪಂ ವಿಚಾರಿಸುತೆ |

ಭಕ್ತಜನ[2]ಮಿ[2]ತ್ರಂಗೆ ಭಕ್ತಜನ[3]ಜೈತ್ರಂ[3]ಗೆ
[4]ಭಕ್ತಜನನೇತ್ರಂಗೆ ಭಕ್ತಜನಗೋತ್ರಂಗೆ |[4]
ಶ್ರುತಿಜಯಾಭೇದ್ಯಂಗೆ [5]ಮತಿಯೆಯ್ದದಾ[5]ದ್ಯಂಗೆ
[6]ನತಜನಾರಾಧ್ಯಂಗೆ ನುತಸುಜನಬೋ[ಧ್ಯ]ಂಗೆ |[6]
ಸುರರಾಜರಾಜಂಗೆ ಶರಣ[7]ಸು[7]ರಭೂಜಂಗೆ
ತರಣಿಕುಲತೇಜಂಗೆ ಜಗದಾದಿಬೀಜಂಗೆ |
ಮದನಂಗ[8]ಶಕ್ಯಂ[8]ಗೆ ನಿರುಪಮಾ[9]ಧಿಕ್ಯಂ[9]ಗೆ
ಸದಮಳ[10]ಗುಣಾಖ್ಯಂಗೆ ತ್ರಿದಶಗಣ[10]ಮುಖ್ಯಂಗೆ |
ಶರಣ[11][ಸಾ]ಂಗತ್ಯಂ[11]ಗೆ ಭುವನಾ[12]ಧಿಪತ್ಯಂಗೆ[12]
[13]ಸುರಗಣಾದಿತ್ಯಂಗೆ ವರಮುನಿಸ್ತುತ್ಯಂಗೆ |[13]

---

1 ಸಡಗರಿಸುತ್ತ (ಕ), - - - ವೆತ್ತ<ತ್ತಿ>(ಖಗ), - - - ವೆತ್ತಿ (?) (ಚ). 2 ಪಾ (ಕಜ). 3 ವಿತ್ರಂ (ಕ), ವೇತ್ರಂ (ಖ), × ತ್ರಂ (ಚ). 4 ಭಕ್ತಜನ ಚಯಿತ್ರಂಗೆ ಭಕ್ತಕುಲಗೋತ್ರಂಗೆ (ಖ), ಭಕ್ತಕುಲಗೋತ್ರಂಗೆ ಭಕ್ತಾನುಕಂಪಿಗೆ (ಗ); ಭಕ್ತಕುಲಗೋತ್ರಂಗೆ(ಚ). 5 ಶರಣ ಜನವೇ (ಖಗಚ). 6 - - - ರಾದ್ಯಂಗೆ ವಿತತಗಣಹೃದ್ಯಂಗೆ (ಕ); ಈ ಪಂಕ್ತಿ (ಕ) ದಲ್ಲಿ ೧೫೫ನೆಯ ಪಂಕ್ತಿಯಾದ ಮೇಲೆ ಬಂದಿದೆ; ನು<ಮ>ತಿ ಎಯಿದದಾದ್ಯಂಗೆ ಭಾವಿಪದನಾದ್ಯಂಗೆ (ಖಗ), ಮತಿಎಯಿದುದಾದ್ಯಂಗೆ ಭಾವಿಪದ ××× (ಚ); - - - ಬೋದ್ಯಂಗೆ (ಜ). 7 ಶ (ಚ). 8 ಸಖ್ಯಂ (ಕಖ), ಸತ್ಯಂ (ಗ), ಸಕ್ಯ (ಚ). 9 ದಿಖ್ಯಂ (ಖ), ದಿತ್ಯಂ (ಗ), ದಿಕ್ಯಂ (ಚ). 10 ಗುಣಾಢ್ಯಂ - - - (ಕ), - - - ದೇವಗ<ಗು>ಣ (ಖಚ), ಗುಣೈಕ್ಯಂಗೆ ದೇವಗಣ (ಗ). 11 ಸಂಗತ್ಯಂ (ಕಖಗಜ), ಸಂಗಯಿಕ್ಯಂ (ಚ). 12 ದಿ - - - (ಕಗ); ಧಿಪು ××× (ಚ). 13 - - - ಧಿಕ್ಯಂಗೆ - - - (ಕ); ಈ ಪಂಕ್ತಿ (ಖ) ದಲ್ಲಿಲ್ಲ; ಪರಮೂರ್ತಿನಿತ್ಯಂಗೆ ದೇವರಾದಿತ್ಯಂಗೆ (ಗ); ××× ದೇವರಾದಿತ್ಯಂಗೆ ಸರ್ಪನಾಭರಣಂಗೆ (ಚ).

ಏ[1]ಕಂಗೆ ಅ[1]ದ್ವಿತೀಯಂಗೆ ಸ್ವತಂ[2]ತ್ರಂಗೆ[2]
ಆಕಸ್ಮಿಕಂಗುಮಾಕಾಂತಂಗೆ ಶಾಂತಂಗೆ |
ಘಯ್ಯಿಕ್ಕಿ ಸಿಂದಿರೆ ವಿರೂಪಾಕ್ಷಲಿಂಗಕ್ಕೆ
ಕಯ್ಯೆತ್ತಿ ಪೊಡ[3]ಮಡಲ್ಕಮಮ[3] ಶಿವಲಿಂಗಕ್ಕೆ |
ಇತ್ತ ಬಾ ಯಿತ್ತ ಬಾ [4]ಎಂ[4]ದು ಶಶಿಶೇಖರಂ
[5]ಚಿತ್ತದೊಳ್ ಸಂತಸಂಬಡುತೆ[5] ಕರುಣಾಕರಂ |
ಬಲ್ಲಾ [6]ಉಮೇ[6] ನಮ್ಮ [7]ಶಿಶು[7] ಪುಷ್ಪದತ್ತನಂ
ಎಲ್ಲಾ ಸುಖವನೆನಗೆ ಕೊಡುವೇಕಚಿತ್ತನಂ |
ಎನ್ನ ಭಕ್ತರ ಸುಖ[8]ವದೆ[8]ನ್ನಯ ಸುಖಂ ಕೇ[9]ಳ್[9]
ಎನ್ನ ಭಕ್ತರ ನೋವದೆನ್ನ ನೋ[10]ವೆಲೆ ಕೇಳ[10] |
ಎನ್ನ ಭಕ್ತ[11]ರನಿಂ[11]ತಗಲ್ದಿರಲ್ಕಾರ್ಪೆನೇ
ಎನ್ನ ಭಕ್ತರ್ ಮುನಿ[12]ದಡಾಂ[12] ಕಾಯಲಾರ್ಪೆನೇ |
ಎನ್ನ ಭಕ್ತರ್ ಕರೆ[13]ದಡಾಂ[13] ಪೋಗದಿರ್ಪೆನೇ
ಎನ್ನ ಭಕ್ತರ್ [14]ಪೋಗಲಾಂ ಪೋಗದಿ[14]ರ್ಪೆನೇ |
ಎನ್ನ ಮ[15]ರುಳೆ[15]ನ್ನ ತೊತ್ತೆನ್ನವಂ ಸೌಂದರಂ
ಎನ್ನ ಸುಖವೆನ್ನ [16]ಸೊಬ[16]ಗೆನ್ನವಂ ಸೌಂದರಂ |
ಎಂದು ಕೊಂಡಾಡುತಿರೆ ನಂಬಿಯಣ್ಣಂ ನಿಂದು
ಒಂದು ಬಿನ್ನಪ[17]ವನೆಲೆ[17] ತಂದೆ ಅವ[18]ಧಾ[18]ರೆಂದು |

---

1 ಕಂಗನ (ಕ), ಕಂಗೆನ (ಖ), ಕಾಂಗಿಯ (ಗ), ಕಂಗೆಯ (ಜ). 2 ತ್ರಾರ್ಯಂಗೆ (ಗ).
3 ಮಡಲ್ಕೆಂಮ (ಖಗ), ವಡಲ್ಕೆ ××× (ಚ), ವಡ - - - (ಜ). 4 ಯೆಂ (ಖಗಚ),
ರೆಂ (ಜ). 5 ಹತ್ತೆ ಕುಳ್ಳಿರಿಸಿಕೊಂಡಲ್ಲಿ (ಖಚ), . . . ಕೊಂಡ (ಗ). 6 ಗಿರಿಜೆ (ಜ).
7 ಮಗ (ಕ). 8 ವೆಯೆ (ಕ). 9 ಳ್ವ (ಖ), ಳು (ಗ), ಳ್ದು (ಚ). 10 ವೆಲೆ ಕೇಳಾ (ಖ),
ವೆ ಕೇಳು (ಗಚ). 11 ರನೆಂ (ಖಗ), ನೆಂ (ಚ). 12 ಯಲಾಂ (ಖಗಚ), ದಡಾ (ಜ).
13 ಯಲಾಂ (ಖ). 14 ಬಂದಡಾಂ ಸುಮ್ಮನಿ (ಗ), ಪೊಗಳಲಾಂ ಕೇಳ (ಚ).
15 ಗನೆ (ಚಜ). 16 ಶುಭ (ಗ), ಸುಭೆ (?) (ಚ). 17 ವೆಲೆ (ಖ), ವೆನಲ್ (ಚ).
18 ದಾ (ಖಗ).

ಸಂದ ಗಣಪದವಿಯುಂ ಕೊಡುವು[1]ದಿವರ್ಗೆಂದೆನುತ್ತೆ[1]
[2]ಅಂ[2]ದು ಪೆರುಮಳಲೆಯ ಕುಱುಂಬರ್ಗೆ ಕೊಡಿಸುತ್ತೆ |
ಚೇರಮಂ ಬಂದೈ[3]ದಸೆಲೆ[3] ದೇವ ಬಾಗಿಲೊಳು
ಆರೈದು ನಂದೀಶ್ವರಂ ನಿಲಿಸೆ ಬಾಗಿಲೊಳು |
ಬೆಸನಿಲ್ಲದೇಕೆ ಬಂದಂ ಬರಲ್ ಪೇಳ್ದವೇ
ವಸುಧೆಯೊಳ್ ತನ್ನ ಭಕ್ತಿಗೆ ವಕ್ರ[4]ವಾ[4]ದೆವೇ |
ಎನೆ ದೇವ ಕಾವ್ಯಮಂ ಕೇಳಿಸಲ್ಕೆಯ್ತಂ[5]ದ-
[ನ][5]ಸುರಾಗದಿಂದೆನ್ನ ನಗಲಲಾಱದೆ ಬಂ[6]ದ- |
ನೆಂ[6]ದು ಬಿನ್ನೈಸೆ ಕರೆ ಚೇರಮನನೆನಲಲ್ಲಿ
ನಂದೀಶ್ವರಂ ದೇವ ಅವಧಾರೆನುತ್ತಲ್ಲಿ |
ಉಪದೇಶವಿಲ್ಲ[7]ದರ್[7] ಬಾಗಿಲಂ ಪುಗುವರೇ
[8]ಉ[8]ಪದೇಶವಿಲ್ಲದವ[9]ರಿ[9]ಲ್ಲಿಗಂ ಸಲುವರೇ |
ಶ್ರೀಗುರುವನಱಿಯದವ[10]ನಾವನಾದೊಡೆ ಯೆಮ[10]ಗೆ
ಆಗದವನೊಳ್ ಬೆರ[11]ಸಲೆಂ[11]ದು ಬೆಸಸಿ[12]ದಿರೆಮ[12]ಗೆ |
ಎನೆ ಕೇಳ್ದು ನಂದೀಶ್ವರಾ ನೀ[13]ನೆ[13] ಗುರುವಾಗಿ
ಮನವೊ[14]ಸೆ[14]ದು [15]+ಚೇರಮನನೊಡಗೊಂಡು ಬಾ ಹೋಗಿ |
ಎಂ[16]ದೆನೆ[16] ಹಸಾದ[17]ವೆನುತುಂ ಬಂದು[17] ಪೊಱಮಟ್ಟು
ನಂದೀ[18]ಶ್ವರಂ ಮಸ್ತಕದೊಳು[18] ಹಸ್ತವನಿಟ್ಟು |
ಚೇರಮಂಗುಪದೇಶಮಂ ಮಾಡುತೊಡಗೊಂಡು

---

[1] ದೀತಂಗೆಂದು (ಖ), ದಿವರಿವರ್ಗೆಂದೆನುತ (ಗ). [2] ಯೆಂ (ಕಚ), ಎಂ (ಖ), ಲಿಂ (ಗ). [3] ಧನೆಲೆ (ಕಜ), ಧಾನೆ (ಗ). [4] ರಾ (ಗ). [5] ದ ಅ (ಕಖಗಜ), ದು ಅ (ಚ). [6] ದುಯೆಂ (ಚ). [7] ದರು (ಕಜ), ದವರಿಲ್ಲ (ಗ), ದವರ್ (ಚ). [8] ಗುರುವಿನು (ಗ). [9] ರೆ (ಕಜ). [10] ಯಾವನಾದೊಡೆಯವ (ಕ), ನಾದಡೆ ಎಮ (ಖ). [11] ಸೆವೆಂ (ಖ). [12] ದಿರೆನ (ಕಖಚ), ತ್ತೆಮ (ಗ). [13] ನು (ಗಚ). [14] ಲಿ (ಚ). [15] + ಮಂತ್ರವನುಪದೇಶಿಸಿ (ಗ). [16] ದಡೆ (ಖಗಚ). [17] ವೆಂದೆನುತಲ್ಲಿ (ಗಚ). [18] ಶ ಮಸ್ತಕದ ಮೇಲೆ (ಗ), ××× ಲ್ದು (ಚ).

[1]ಭೋರೆನಲ್ ಬಂದು[1] ಮಯ್ಯಿಕ್ಕಿಸಲು ಕೈಕೊಂಡು |
[2]ಗದ್ದುಗೆಯನಿತ್ತು[2] ಪೊಸಕಾವ್ಯಮಂ ಕೇಳುತುಂ
[3]ಹೊದ್ದಿ[3] ಸೌಂದರನ ಮಯ್ಯೊಳು ಕಯ್ಯನೆಳವುತುಂ |
ಪುಷ್ಪದತ್ತನೆ ಆಗಿ ಮುನ್ನಿನಂತಿ[4]ರೆಸುತ್ತೆ[4]
ಪುಷ್ಪಮಾಲಾಪ್ರಸಾದವನಿತ್ತು ನೋಡುತ್ತೆ |
　ದೇವಗಣಮಕುಟಮಾಣಿಕ್ಯರಂಜಿತಪದಂ
ದೇವಸಂಕುಳ[5]ಸಕಳ[5]ಸಂಪದ[6]ಕ್ಕಾ[6]ಸ್ಪದಂ |
ಗೌರೀಕಟಾಕ್ಷಕೌಮುದಿಚಕೋರಾನ್ವಿತಂ
ಗೌರೀವಿಳಾಸವಿಭ್ರಮ[7]ಸುಖಕರಾನ್ವಿತಂ[7] |
ಪಾರ್ವತೀಪ್ರೇಮವಾರಿಧಿಚಂದ್ರನೊಪ್ಪಿದಂ
ಪಾರ್ವತೀಮುಖಸರೋವರಹಂಸನೊಪ್ಪಿದಂ |
ಭಕ್ತಸಂಕುಳಮನೋರಥಮೂರ್ತಿಯೊಪ್ಪಿದಂ
ಭಕ್ತಜನಹೃದಯಕಮಳಾವಾಸನೊಪ್ಪಿದಂ |
[8]ಎಲೆಲೆ ಪಂಪಾಪುರವರಾಧೀಶನೊಪ್ಪಿದಂ
ಎಲೆಲೆ ಪಂಪಾಪುರವಿಳಾಸನಿಧಿಯೊಪ್ಪಿದಂ |[8]
[9]ಆಹ ಹಂಪೆಯ ವಿರೂಪಾಕ್ಷನಿಂತೊಪ್ಪಿದಂ[9]
[10]ಆಹ ಹಂಪೆಯ ಹರಿಪನಾಳ್ದನಿಂತೊಪ್ಪಿದಂ[10] ||

---

1 ಬಾರೆನಲು ಬಂದು (ಕ), ವಾರಾರಿಗಂದು (ಖ), ಭೋರೆನಲು ಬಂದು (ಜ). 2 ಆದ್ವಿತಿಯ ನಿತ್ತ (ಗ), ಗದ್ದಿಗೆ - - - (ಜ). 3 ಹೊಂದಿ (ಕ). 4 ರು ಯೆನುತೆ (ಕಚ), ರು ಎ<ಯೆ>ನುತ (ಖಗ). 5 (ಕಗ) ಗಳಲ್ಲಿಲ್ಲ. 6 ಕರಾ (ಕಗಚಜ). 7 - - - ರಾಸ್ಪದಂ (ಖ), ಶುಕಕ - - - (ಗ), ಸುಖರಾನ್ವಿತಂ (ಚ). 8 ಈ ಪಂಕ್ತಿಗಳು (ಖಗಚ) ಗಳಲ್ಲಿ ಹಿಂದುಮುಂದಾಗಿವೆ. 9 ಅಹ ಹಂಪೆಯ - - - (ಕ); ಅಹಹ ಹಂಪೆಯ ವಿರೂಪಾಕ್ಷ ಶಿವನೊಪ್ಪಿದಂ (ಖಚ); ಈ ಪಂಕ್ತಿ (ಗ) ದಲ್ಲಿಲ್ಲ; ಆಹ ಶಿವನೊಪ್ಪಿದಂ ಆಹ ಹರನೊಪ್ಪಿದಂ (ಜ). 10 ವೋಹೊ<ಆಹ>ಹಂಪೆಯ ವಿರೂಪಾಕ್ಷನಿಂತೊಪ್ಪಿದಂ (ಕಜ); ಅಹಹ ಹಂಪೆಯ ಹರಿಯನಾಳ್ದ - - - (ಖ), ಅಹಹ ಹಂಪೆಯ ಹರಿಪನಾಳ್ದನಂತೊನೊತೊಪ್ಪಿದಂ (ಗ), ಆಹ ಹರಿಪನಾಳ್ದ - - - (ಚ).

ಅಣಿಯರದಿಂ ಶಿವನಂ ಕುಂ-
[1]ಟ[1]ಣಿಮಾಡಿದ ಕಥೆಯನೊರೆದ ಹಂಪೆಯ ಹರಿ[2]ಸಂ-[2] |
ಗೆಣೆಯಿಲ್ಲದ ಭಕ್ತಿಯ[3]ನಾ[3]
ತ್ರಿ[4]ಣಯನನೊಲಿದೀಗೆ[4] ಹಂಪೆಯ ವಿರೂಪಾ[5]ಕ್ಷಂ[5] ||

ಏಕೋನವಿಂಶ ಸ್ಥಲಂ

ನಂಬಿಯಣ್ಣನ ರಗಳೆ ಸಮಾಪ್ತಂ

---

[1] ಠ (ಖ). [2] ಯಂ (ಕ), ಗಂ (ಜ). [3] ನಿಂ (ಕ), ನಂ (ಗ). [4] ಣಯನೆ<ನು>ವೊಲಿದೀಗೆ (ಕಜ), ಣೆಯನನೊಲಿದಿಗೆ (ಖ), ಣೆಯನೆವೊಲಿದೆದೇವ<ಲಿದೀಗೆ> (ಗಚ).
[5] ಕ್ಷಾ (ಕಚ), ಕ್ಷ (ಗ).

ಅನುಬಂಧ—೨

ನಾಗಚಂದ್ರನ

# ಕಾಮನ ಕಾಳಗ

---

ಸಂಪಾದಕ:

ಕೆ. ಭುಜಬಲಿ ಶಾಸ್ತ್ರಿ

ಸೆಂಟ್ರಲ್ ಜೈನ ಓರಿಯಂಟಲ್ ಲೈಬ್ರೇರಿ

ಆರಾ

# ಮುನ್ನುಡಿ

'ಕಾಮನ ಕಾಳಗ'ವೆಂಬ ಈ ಗ್ರಂಥದ ಒಂದು ತಾಳೆಯೋಲೆಯ ಪ್ರತಿ ಆರಾ ಸೆಂಟ್ರಲ್ ಜೈನ ಓರಿಯಂಟಲ್ ಲೈಬ್ರೇರಿಯಲ್ಲಿದೆ. ಈ ಪ್ರತಿ ಹುಟ್ಟಿದ ಕಾಲವು ತಿಳಿದುಬಂದಿಲ್ಲ. ಇದರಲ್ಲಿ ಱಕಾರವನ್ನು ತಪ್ಪಿಲ್ಲದೆ ಬರೆದಿದೆ. ಲೇಖಕನ ಪ್ರಮಾದ ದಿಂದ ಉಂಟಾಗಿರುವ ತಪ್ಪುಗಳಲ್ಲಿ ಸುಲಭವಾಗಿ ತಿದ್ದುವುದಕ್ಕೆ ಸಾಧ್ಯವಾಗಿರು ವುವನ್ನು ಮಾತ್ರ ತಿದ್ದಿ ಇಲ್ಲಿ ಮುದ್ರಿಸಿದೆ.

ಇದನ್ನು ಪ್ರಕಟಿಸುವುದಕ್ಕೆ ಮುಖ್ಯವಾಗಿ ಇರುವ ಕಾರಣಗಳೆರಡು: ಇದು ನಾಗಚಂದ್ರನಿಂದ ರಚಿತವಾದುದೆಂದು ಈ ಕಾವ್ಯದ ಕೊನೆಯ ಪದ್ಯದಲ್ಲಿ ಹೇಳಿರು ವುದು ಮೊದಲನೆಯದು; ಕಾವ್ಯದ ವಸ್ತು ಅಪೂರ್ವವಾಗಿರುವುದು ಎರಡನೆಯದು.

ಕನ್ನಡ ಕವಿಗಳಲ್ಲಿ 'ನಾಗಚಂದ್ರ' ಎಂಬ ಹೆಸರಿದ್ದವರು ಇಬ್ಬರೆಂದು ಕವಿಚರಿತೆ ಯಲ್ಲಿ ಹೇಳಿದೆ. ಮೊದಲನೆಯವನು ಪ್ರಸಿದ್ಧ ಚಂಪೂಕವಿಯಾಗಿ 'ಅಭಿನವಪಂಪ' ನೆಂದು ಬಿರುದಿದ್ದ ನಾಗಚಂದ್ರ; ಎರಡನೆಯವನು 'ಜಿನಮುನಿತನಯ'ವನ್ನು ಬರೆದ ಸೂತ್ನ (ವಿನುತ) ನಾಗಚಂದ್ರ. ಪ್ರಕೃತ ಗ್ರಂಥವು ಭಾಮಿನೀ ಷಟ್ಪದಿಯಲ್ಲಿರುವುದ ರಿಂದಲೂ ನಡುಗನ್ನಡವನ್ನು ಬಳಸಿರುವುದರಿಂದಲೂ ಅದನ್ನು ಬರೆದಾತನು ಸುಮಾರು ೧೧೦೦ರಲ್ಲಿದ್ದ ಮೊದಲನೆಯ ನಾಗಚಂದ್ರನಾಗಿದ್ದಿರಲಾರನೆಂದು ಹೇಳಬಹುದು. 'ಜಿನಮುನಿತನಯ'ದ ಭಾಷೆಯಾದರೂ ನಡುಗನ್ನಡಕ್ಕೆ ಸಮೀಪತರವಾಗಿದೆ; ಅದನ್ನು ಬರೆದ ಸೂತ್ನ ನಾಗಚಂದ್ರನು ಸುಮಾರು ೧೭೫೦ರಲ್ಲಿ ಇದ್ದನೆಂದು ಊಹಿ ಸಿದೆ. 'ಕಾಮನ ಕಾಳಗ'ವನ್ನೂ ಅವನೇ ಬರೆದಿರಬಹುದೆ? ಇದನ್ನು ಬರೆದ ನಾಗಚಂದ್ರನೇ ಬೇರೊಬ್ಬನಿರಬಹುದೊ? ಈ ವಿಷಯವನ್ನು ಸದ್ಯದಲ್ಲಿ ತೀರ್ಮಾ ನಿಸುವಂತಿಲ್ಲ. ನಾಗಚಂದ್ರ ವಿಷಯಕವಾಗಿರುವ ಸಮಸ್ಯಾಪರಿಹಾರಕ್ಕೆ ಈ ಗ್ರಂಥವು ಏನೂ ಸಹಾಯವನ್ನು ಮಾಡದಿದ್ದರೂ ಆ ಸಮಸ್ಯೆಯನ್ನು ಇನ್ನೂ ಜಟಿಲತರವಾಗಿ ಮಾಡಿದೆ. ವಿದ್ವಾಂಸರ ವಿಚಾರಕ್ಕೆ ಮತ್ತೊಂದು ವಿಷಯವನ್ನು ಒದಗಿಸಿದೆ.

ಈ ಸಂದರ್ಭದಲ್ಲಿ 'ಕಾಮನ ಕಾಳಗ'ದ ಭಾಷೆಯ ವಿಚಾರವಾಗಿ ಇನ್ನೂ ಒಂದಂಶವನ್ನು ಇಲ್ಲಿ ಸೂಚಿಸಬಹುದು. ಈ ಗ್ರಂಥಕರ್ತನು ಱಕಾರ ಪ್ರಾಸಿನಲ್ಲಿ ರೇಫವನ್ನೂ, ರೇಫಪ್ರಾಸಿನಲ್ಲಿ ಱಕಾರವನ್ನೂ ಎಲ್ಲಿಯೂ ಬಳಸಿಲ್ಲ; ೧೭ನೆಯ ಪದ್ಯದ ಐದನೆಯ ಪಂಕ್ತಿಯ ಪ್ರಾಸಾಕ್ಷರದಲ್ಲಿ ಸ್ವಲ್ಪ ಸಂದೇಹವಿದೆ. ಇದರಿಂದ

ಈ ಗ್ರಂಥ ತೀರ ಆಧುನಿಕವಲ್ಲವೆಂದೂ ಱಕಾರವು ಉಚ್ಚಾರಣೆಯಲ್ಲಿದ್ದ ಕಾಲದಲ್ಲಿ ರಚಿತವಾಗಿರಬೇಕೆಂದೂ ಹೇಳಬಹುದು.

ತೀರ್ಥಂಕರರ ಚರಿತ್ರೆಗಳಲ್ಲಿ ಕಾಮನು ಬಂದು ಅವರ ತಪಸ್ಸನ್ನು ಭಂಗಮಾಡಲು ಪ್ರಯತ್ನಿಸಿದ ಕಥಾನಕ ಕಂಡುಬರುವುದಿಲ್ಲ. ಪಾರ್ಶ್ವನಾಥಚರಿತ್ರೆಯಲ್ಲಿ ಮಾತ್ರ ಅಶೋಕವೃಕ್ಷದ ಕೆಳಗೆ ತಪಸ್ಸಿನಲ್ಲಿ ಮುಂಡಿಸಿದ್ದ ಪಾರ್ಶ್ವನಾಥನಿಗೆ ಮೇಘಮಾಲಿ ಯೆಂಬೊಬ್ಬ ಅಸುರನು ಬಂದು ಉಪಸರ್ಗವನ್ನು ಮಾಡಿ ತಪಸ್ಸನ್ನು ಕೆಡಿಸಲು ಪ್ರಯತ್ನಿಸಿದಂತೆ ಕಥೆಯಿದೆ. ತನ್ನ ಕಾರ್ಯದಲ್ಲಿ ವಿಫಲನಾದ ಮೇಘಮಾಲಿ ಪಾರ್ಶ್ವನಿಗೆ ನಮಸ್ಕರಿಸಿ ಶರಣಾಗಿ ಹೊರಟುಹೋದನಂತೆ. ಪ್ರಕೃತ ಗ್ರಂಥದಲ್ಲಿಯೂ ಕಾಮನು ಹೀಗೆಯೇ ಮಾಡುತ್ತಾನೆ. ಎರಡು ಕಥೆಗಳಿಗೂ ಇಷ್ಟುಮಾತ್ರ ಸಾದೃಶ್ಯವಿದೆ. ಬುದ್ಧನ ಕಥೆಯಲ್ಲಿ ಮಾರನು ಪ್ರವೇಶಿಸಿ ತಪೋಭಂಗವೆಸಗುವ ಕಥೆ ಬಹು ಪ್ರಸಿದ್ಧ ವಾಗಿದೆ. ಅದರಿಂದ 'ಕಾಮನ ಕಾಳಗ'ದ ವಸ್ತು ಸಂಗೃಹೀತವಾಗಿರಬಹುದೆ? ಪರಿವಾರಸಹಿತನಾಗಿ ಕಾಮನು ಬಂದು ಆದಿನಾಥನ ತಪಸ್ಸಿಗೆ ವಿಘಾತಿಯನ್ನು ಮಾಡಿ ಸೋತುಹೋದದ್ದನ್ನು ವರ್ಣಿಸುವ ಈ ಗ್ರಂಥದ ಕಥೆ ಕನ್ನಡಕ್ಕೆ ಅಪೂರ್ವವಾಗಿದೆ.

ಮಹಾಕಾವ್ಯಗಳಿಂದ ನಿಬಿಡವಾಗಿ "ಕಾಲಿಡಲು ತೆರಪಿಲ್ಲ"ದಂತಿರುವ ಕನ್ನಡ ಸಾಹಿತ್ಯದಲ್ಲಿ 'ಕಾಮನ ಕಾಳಗ'ದಂತಿರುವ ಲಘುಕಾವ್ಯಗಳು ಸಂಖ್ಯೆಯಲ್ಲಿ ಬಲು ಕಡಮೆ. ಇದೂ ಒಂದು ಕಾರಣ ಈ ಗ್ರಂಥದ ಪ್ರಕಟನೆಗೆ. ಕವಿ ಶಕ್ತನಾಗಿದ್ದ ಪಕ್ಷದಲ್ಲಿ ಇಲ್ಲಿರುವ ಸಾಮಗ್ರಿ ಉತ್ತಮ ಕಾವ್ಯನಿರ್ಮಾಣಕ್ಕೆ ಸಾಕು. ಕವಿತೆಯ ದೃಷ್ಟಿಯಿಂದ ಮೆಚ್ಚಿ ಹಿಗ್ಗಬಹುದಾದ ಗುಣ ಈ ಗ್ರಂಥದಲ್ಲಿ ಅಷ್ಟೇನೂ ಇಲ್ಲ. ರಸಿಕರಿಗೆ ಇಲ್ಲಿ ಉಪವಾಸ, ಸಂಶೋಧಕರಿಗೆ ಪಾರಣೆ. ಕೆಲವರಿಗಾದರೂ ಪ್ರಯೋ ಜನವಾಗಬಹುದಲ್ಲ.

ಸಂಪಾದಕ.

# ಕಾಮನ ಕಾಳಗ

ಮೂಱು ಲೋಕದೊಳಧಿಕರೆಲ್ಲರ
ಗಾಱುಮಾಡಿದೆನೆಂದು ಕಾಮನು
ಏಱು ಬರಲವಘಟಿಸಿ ಗೆಲಿದನು ಅರ್ಹಪರಮೇಶ || ಪಲ್ಲವಿ ||

ಅ[ರುಹ]ಸಿದ್ಧಾಚಾರ್ಯೋಪಾಧ್ಯರ
ಪರಮಸಾಧುಗಳಿಂಗೆ ವಂದಿಸಿ
ನಿರುತಮತಿಸೂರಿಗಳು ಸುಜನರು ಪಾಠಪರಿಣತರು |
ಪರಮಮನುಮುನಿ ವರಕವೀಂದ್ರರು
ತರಳನೆನ್ನಯ ತೊದಳು ನುಡಿಯನು
ಕರುಣದಿಂದಲೆ ತಿದ್ದಿಯುದ್ಧರಿಸುವುದು ಸತ್ಕೃತಿಯ || ೧ ||

ಶ್ರೀಮುಕುತಿಯುರಸನನು ವಿಮಲ-
ಸ್ತೋಮನಮಿ (ತ) ಸುಚರಣಕಮಲನು
ಸೋಮ ಇನಸಸಿಕೋಟಿ ಸನ್ನಿಭ ತ್ರಿಜಗಪಾವನನು |
ಕಾಮಹರ ದುರಿತಾರಿಮದನಿ-
ರ್ನಾಮನಕ್ಷಯನಮಳಚಿನುಮಯ
ಪ್ರೇಮದಿಂ ಸಲಹುವುದು ಭವ್ಯರನರ್ಹಪರಮೇಶ || ೨ ||

ಮುಕ್ತಿವರ ಶೃಂಗಾರಿ ಭೂತಳದೊ-
ಳತ್ಯಧಿಕಕಾರುಣ್ಯವಿರದಿ ಸಂಹಾ-
ರಕ್ಕೆ ಖಚಮುತ್ವದು ಭೀಭತ್ಸು | (?)
ತತ್ತ್ವಕರ್ಮ[ದ] ರೌದ್ರಸ್ಮರಭಯ
ವೆತ್ತ ಹಾಸ್ಯವು ನಗ್ನ ಶಾಂತತಿ-
ಯುಕ್ತ ಶ್ರೀಯದ್ಭುತವು ನವರಸ ಅರ್ಹರಕ್ಷಿಪುದು || ೩ ||

ಕೇಳಿ ಭವ್ಯಜನಂಗಳೊಲಿದಿದ
ಕೇಳಿ ಕೇವಲಜ್ಞಾನದುದಯವ
ಕೇಳಿ ಸ್ವರ್ಗಾಪವರ್ಗದಿರವಿನ ಶ್ರೀದಯ ಕೇಳಿಯನು |

ಕೇಳಿ ಪುಣ್ಯದ ಬೆಳೆಯ ರಾಶಿಯ
ಕೇಳಿ ಕಲ್ಪದ್ರುಮದ ಫಲವನು
ಕೇಳಿ ಮುಕ್ತೀಶ್ವರನ ಮಹಿಮೆಯ ಧರ್ಮದ ಸ್ತುತಿಯ ॥ ೪ ॥

ಹರನ ಶಿರವೇಱಿದಳು ಗಂಗೆಯು
ಹರಿಯುರದೊಳೊಱಗಿದಳು ಲಕ್ಷ್ಮಿಯು
ಹಿರಿಯಬ್ರಹ್ಮ (ಸು) ತ (ನ್ನ) ಮಗಳಿಗೆ ಮಾಱಿದನು ಮನವ।
ಸುರರು ಮೊದಲಾದಖಿಲ ದಿವಿಜರು
ತರುಣಿಯರ ಸಟ್ಟವಿಗರಾದರು
ಅರುಹನನು ಪರಿಭವಕೆ ತಹೆನೆಂದೆನುತ ರತಿಪತಿಯು ॥ ೫ ॥

ಹಲವು ತಾಪಸರುಗ್ರಕಲಸದೆ
ಥಲದೊಳಗೆ ಕಲಿಯೆನಿಸಿದನು ಗಡ
ಅಲಗಿನಂಬುಗಳಿಱಿಯಲಮ್ಮವು ವಜ್ರದೇಹಿಗಳ।
ಬಲಯುತನು ತಾನಾಗಿ ಲೋಕದ
ನೆಲೆಯ ವಿಾಱಿದೆನೆಂಬ ಅರ್ಹನ
ಲಲನೆಯರ ಸಮ್ಮೋಹನಾಸ್ತ್ರಕೆ ಸಿಲುಕಿಸುವೆನೆಂದಾ ॥ ೬ ॥

ನೆರಹಿದನು ದಶವಿಧದ ಬಲವನು
ಕರಣಿಕರ ಕಾಮುಕರ ತತ್ವದ
ಪರಿಣತರ ಶೃಂಗಾರ ಭಾರದ ಕಲೆಯ ಕೌಶಲರ।
ಗರುವಿಕೆಯ ಗಾಢಿಕೆಯ ಪ್ರೌಢಿಯ
ಸರಸ ಜಾಣಿನ ವಿಗಡದೇಹದ
ದುರುಳ ನಿರ್ಲಜ್ಜರನು ಬೆರಸಿದನೊಲಿದು ರತಿಪತಿಯು ॥ ೭ ॥

ಅಷ್ಟಮದವೆಂದೆಂಬ ಗಜವನು
ದುಷ್ಟಸಪ್ತವ್ಯಸನ ಕುದುರೆಯ
ಕಟ್ಟಳವಿಯಲಿ ಕವಿವ ನಾಯಕ ಸೇನೆ ಷಡುರಥರ।
ಇಷ್ಟಪಂಚೇಂದ್ರಿಯದ ಬಲುವೊನೆ
ತಟ್ಟಿ ನಾಲ್ಕು ಕಷಾಯ ನಾಯಕ
ರೊಟ್ಟಜೆಯುರೊದಗುವ ಪದಾತಿಯ ಮೂಢ ವ್ರತಭಟರ ॥ ೮ ॥

ಉತ್ತಮದ ಪೊಂಬಟ್ಟೆಯುಡುಗೆಯ
ಕಸ್ತುರಿಯ ಕರ್ದಮದ ತಿಲಕದ
ಮುತ್ತಿನೆಕ್ಕಾವಳಿಯ ತಿಸರದ ಕರ್ಣಕುಂಡಲದ|
ಹಸ್ತಕಂಕಣ ಕಡೆಹ ಮುದ್ರೆಯ
ವಿಸ್ತರದ ಬಾಪುರಿಯ ತೊಡರಿನ
ಚಿತ್ತಜನು ಕೈಗೆಯಿದು ಬಂದನು ರತಿಯ ಗಡಣದಲಿ ||೯||

ಸಾಂವರಾಧಿಗಳ ಖಲದಲಿ (?)
ಕಾಮು ಸೈನ್ಯವ ಕೆರಳಿಸಿಬಿಟ್ಟನು
ಮಾಮರದ ತಳಿರುಗಳ ತಂಪಿನ ಸೊಂಪು ಸೊಗಯಿಸಲು|
ಪ್ರೇಮದಿಂದೈತರೆ ವಸಂತನು
ತಾಮರಸ ಮೊದಲಾದ ಕುಸುಮದ
ಲಾ ಮಹಾವಿಭವದಲಿ ಬಂದಿದಿರ್ಗೊಂಡ ರತಿಪತಿಯ ||೧೦||

ಎಳದಳಿರ ಪಲ್ಲವದ ಸತ್ತಿಗೆ
ಹೊಳೆವ ಹೊಂಬಾಳೆಗಳ ಚಾಮರ
ಸುಳಿವ ಕೆಂದಳಿರೋಳಿ ಆರತಿಯಂತೆ ಬೆಳಗುತಿರೆ|
ಬಳಿವಿಡಿದು ವನಬಳಗದೇವಿಯ
ವಿಳಯದಲಿ ತುಱುಗಿರ್ದ ಫಲವನು
ಅಳವಡಿಸಿ ಅಂಗಜಗೆ ಮುಂಗಾಣಿಕೆಯನೀವಂತೆ ||೧೧||

ನಾಳಿಕೇರದೊಳಮೃತಕಳಸವ
ಮೇಳಯಿಸಿ ಪನಸಗಳ ಕಂಬಿಯ
ಬಾಳೆಗಳ ತನಿವಣ್ಣನದ್ದೊಱಬೋನಗುಡಿಕೆಗಳ|
ಸೀಳಿ ಸುರಿವಿಕ್ಷುಗಳ ಧಾರೆಯ
ದಾಳಿಬದ ಖರ್ಜುರದ ತನಿರಸ
ಪಾಳಯಕೆ ಕೊಪ್ಪರಿಗೆಯಿಟ್ಟಂತಿರಲು ತಿಳಿಗೊಳನು ||೧೨||

ಕೋಕಿಳದ ಧ್ವನಿ ವಾದ್ಯವಾಗಲು
ಕೇಕಿಗಳ ಗತಿ ನೃತ್ಯವಾಗಲು
ಝೇಂಕರಿಸುತಿಹ ಮಧುಕರಂಗಳ ನಾದ ವೀಣೆಗಳ|

ವಾಕುಪಟುತರದಿಂದ ಗಿಳಿಗಳ
ನೇಕ ಬಿರುದಾವಳಿಯು ಪೊಗಳಲು
ನೂಕಿದನು ತ್ಯಾಗವನು ಭೂರುಹವೆಂಟದಿಕ್ಕಿನಲಿ (?) ||೧೩||

ಕಪ್ಪುರದ ಕುಂಕುಮದ ಗಂಧದ
ಲೆಪ್ಪದಂತಿರೆ ಪೂಸಿ ಮನಕಿನಿ
ದಪ್ಪ ತೈಲಾದಿಗಳ ಪೂಗದ ಭಾಗ ಬಿಳಿಯೆಲೆಯ |
ಪುಷ್ಪಬೀಸಣಿಗೆಯಲಿ ಶೀತಳ
ಮಪ್ಪ ಪನ್ನೀರುಗಳ ಪಸರದ-
ಲೊಪ್ಪಿದನು ಮನುಮಥನು ನಾಟ್ಯವಸಂತ ಕೇಳಿಯಲಿ ||೧೪||

ಕೀಲಣದ ಮಣಿಗಣದ ಪೀಠದ
ಸಾಲು ಸಾವಂತಾದಿ ಪರಿಜನ
ದೋಲಗದೊಳೊಪ್ಪಿರಲು ಮನ್ಮಥ ರಾಜವಿಭವದಲಿ |
ಮೇಳಯಿಸಿದೊಪ್ಪವನು ನೋಡಲು
ಕೀಳಲರಿದೆನೆ ನಟ್ಟ ನಯನಕೆ
ಹಾಳಿಯಿಲ್ಲದೆ ನೋಲದವರಾರಿನ್ನು ಲೋಕದಲಿ ||೧೫||

ಮದಗಜವ ಪದಗತಿಯಲಳಿಸುತ
ತೊದಳಿಸುತ ಕೇಸರಿಯು ನಡುವಿಗೆ
ಬೆದಱಿಸುತ ಕುಚದೊಳು ಚಕೋರಿಯ ವನಜಮುಖದೊಳಗೆ |
ಪದುಳಿಸುತ ಬಾಲೇಂದುವನು ವಿಗೆ
ತೊದಳಿಸುತಲರಗಿಣಿಯು ನುಡಿಯೊಳು
ಸುದತಿಯರು ಮಾರಂಗೆ ಪಡಿಬಲವಾಗಿ ರತಿಯೊಡನೆ ||೧೬||

ಪರಿಮಳವನಂಗದಲಿ ಬೆಳೆದರೊ
ವರಮಣಿಯನವಯವದಿ ಪಡೆದರೊ
ಪರುಷದೊರೆಲಾವಣ್ಯ ರಾಶಿಯನುಯ್ಯಲವರಚಿಸಿದರೋ (?) |
ನೆರೆದು ನೋಡುವ ನೋಟಕರುಸಿ-
ರ್ದೊರೆಯೊಳಗೆ ಶೇಕಾಡುತಿರ್ದರು
ತರುಣಿಯರ ದುರುಹಾವಭಾವವಿಲಾಸವಿಭ್ರಮಕೆ ||೧೭||

ಹೆಱಸೊಸಲು ನಿಱಗುರುಳು ಪುರ್ವಿನ
ವಿಱುಪ ಪಂಕಜ ಮುಗುಳ ನಾಸಿಕ
ಕಿಱುನಗೆಯು ತೆಳುಗದಪಿನಧರಚ್ಛವಿಯರುಣಿಯವು।
ವೆಱೆವ ದಾಳಿಬದಂತ ಪಂಕ್ತಿಯ
ಯುಱುವ ಕಳಸದ ಸ್ತನದ ಬಾಸೆಯು
ಪೊಱನಿತಂಬದ ಜಂಘೆಯಂಘ್ರಿಯ ರಂಭದೆಳದಳಿರ ॥ ೧೮ ॥

ಉತ್ತಮದ ನಿಱಯುಡಿಗೆ ತಿಲಕದ
ಮುತ್ತು ಬೈತಲೆ ಬಾಳ ಸೂಸಕ
ವಿಸ್ತರದ ಕರ್ಣಾಭರಣ ಕೇಯೂರಹಾರದಲಿ।
ಸುತ್ತಿದೇಕಾವಳಿಯು ತಿಸುರದ
ಮೊತ್ತ ನವಗ್ರಹದಂತೆ ಸತಿಯರು
ಚಿತ್ತಜಗೆ ಬಲವಾಗಿ ಬಂದರು ರತಿಯ ಗಡಣದಲಿ ॥ ೧೯ ॥

ತೋರಪೊಲೆಗಳು ತೆಕ್ಕೆವರಿಗೆಯು
ಭಾರಣೆಯ ಕುಸಿವಸಿಯ ನಡುವಿನ
ಸೂರಿಗೆಯ ನಳಿತೋಳ ಲೌಡಿಯ ನಖದಡಾಯುಧದ।
ಚಾರುತರ ಬಲುಬಿಲ್ಲ ಪುರ್ಬಿನ
ಧಾರೆಯಲಗಿನ ಕಣ್ಣ ನೋಟದ
ನಾರಿಯರು ಕಾಮಂಗೆ ಕೈದಿನ ಕಲಿಗಳೆಂಬಂತೆ ॥ ೨೦ ॥

ಭೂಮಿಬಲದಧಿದೇವತೆಯೊ ಮೇಣ್
ಸಾಮರದ ಜಯಯೋಗಿಣಿಯೊ ಮಿಗೆ
ಕಾಮನಾರಾಧಿಸುವ ಕೈದಿನ ಚೆಂಡಿಕೆಯೊ ಮೇಣು।
ಕಾಮಿತಾರ್ಥವನೀವ ವರದಭಿ-
ಮಾನದೇವತೆಯೋ ಶೃಂಗಾರದಾ-
ಸೀಮೇಣಿ(?)ಯೆಂಬಂತಾಯ್ತು ಸತಿಯರ ಸಂಭ್ರಮದ ಬರವು ॥ ೨೧ ॥

ಪರಿಮಳದ ತೆಕ್ಕೆಯಲಿ ಮರುತಗೆ
ಚರಿಸಲರಿದೆಂಬಂತಿರಾದುದು
ತರುಣಿಯರ ಭೂಷಣದ ವೈಗಾಂತಿಯೊಳು ರವಿಕಿರಣ।

ತೆರಳುತದೆ ಯೆಂಬಂತಿರಾದುದು
ಚರಣಪದಗತಿಯೊಳಗೆ ಧರಣಿಯು
ಸರಿದುದೆಂಬಂತಾಯ್ತು ನೋಡುವ ನೋಟಕರ ಮನಕೆ || ೨೨ ||

ಹಸ್ತಿನಿಯು ಚಿತ್ತಿನಿಯು ಪದ್ಮಿನಿ
ಮತ್ತೆ ಶಂಖಿನಿ ಜಾತಿ ಜಾರೆಯ
ರುತ್ತಮದ ಸೌಗಂಧಸಾರದ ಮುಗ್ಧಭಾವದಲಿ |
ತತ್ತ ಮೈದೊಡಿಗೆಗಳ ರತ್ನದ
ಲತ್ಯಧಿಕ ಸೌರೂಪು ಮೆಱೆಯಲು
ಭಿತ್ತಿಯೊಳಗ್ಗಣ ಚಿತ್ರವಾದರು ನೋಳ್ಪ ನೋಟಕರು || ೨೩ ||

ತೋಳ ಕಕ್ಷಗಳುರುಕುಚಂಗಳ
ಯೇಳಿಗೆಯ ತೆಳುವಸುಱ ಬಾಸೆಯ.
ಡಾಳಿಸುವ ಕದಪುಗಳ ನಗೆಮೊಗ ನಯನ ನಾಸಿಕದ |
ಮೇಳಯಿಸಿದೊಪ್ಪವನು ನೋಡಲು
ಕೀಳಲರಿದೆನೆ ನಟ್ಟನಯನಕೆ
ಹಾಳಿಯಿಲ್ಲದೆ ನೋಲದವರಾರಿನ್ನು ಲೋಕದಲಿ || ೨೪ ||

ಸುರನರೋರಗರದಟವೀರರ
ಧುರದೊಳಗೆ ಮುಂಗೆಲ್ದು ಕಾಮನು
ಬಿರಿದಿಗೆತ್ತಿದ ಧ್ವಜಮೆಸಲು ನಾರಿಯರ ನಯನಾಂಶು |
ಪರಿದವಾಕಾಶದಲಿ ಭಿತ್ತಿಯ
ಹೊರೆಯೊಳಗೆ ಚಿತ್ರವನು ಬರೆದರೊ
ವಿರಚಿಸುವರಾರಿನ್ನು ಅಂಗನೆಯರ ವಿಕಾರವನು || ೨೫ ||

ಹುಸಿನುಸುಳುವನ್ಯಾಯವಾಱಡಿ
ದೆಸೆಗೆಡಿಸುತಿಹ ಕಾಮಕ್ರೋಧವು
ಮಸಗಿಹ ಮಾಯಾದಿಮೋಹವು (?) ಲೋಭವಂಚನೆಯು |
ಪಸರಿಸುವ ಮದರಾಗದ್ವೇಷವು
ವ್ಯಸನ ಮೊದಲಾದಖಿಲದುರ್ನಯ
ಸಸಿಮುಖಿಯರೊಡಗೂಡಿ ವಿಷಮಾಯುಧಗೆ ಬಲವಾಗೆ || ೨೬ ||

ಅಸುರಗಣರಾಕ್ಷಸ ನಿಶಾಚರ
ಏಸುಪಪ್ಯಂತರ ದುರುಪಿಶಾಚರ
ಅಸಮಯದ ಗಂಧರ್ವಭೂತಮೆ ಮರುಳವೊತ್ತಗಳು।
ವಸುಧೆವಾನಿನಿ ಮಾರಿ ಭೈರವಿ
ಮಸಣಿದುರ್ಗಿಯು ಕಾಳಿ ಚಾಮುಂಡಿ
ವಿಷಮಾಯುಧನೊಡಗೂಡಿ ಬಂದರು ಸರ್ವಶಕ್ತಿಯಲಿ (?) ॥ ೨೭ ॥

ಜ್ಞಾನದರುಶನವರಣಿಯವು ಮಿಗೆ
ತಾಸಧಿಕವೇದನಿಯು ಮೋಹಿನಿ
ದೀನದಾಯುಷನಾಮಗೋತ್ರವದಂತರಾಯಿಗಳು।
ಮಾನಭಂಗದ ಬವರ ತವಗೆನು
ತಾನುಮತಿಯಲಿ ಬಂದು ನಿಂದರ
ದೇಸನೆಂಬೆನು ನೂಱನಾಲ್ವತ್ತೆಂಟು ನಾಯಕರು ॥ ೨೮ ॥

ಮಾಯಮೋಹಾದಿಗಳು ಕಾಮಗೆ
ಯಾಯತದ ಬಲವಂತರಾಗಿರೆ
ವಾಯದೆಱಕದ ಮಂತ್ರಿಮನ್ಮಥನು (?) ವೆಂದೆನಲು।
ದಾಯದೊದವಿನ ಸೇನೆ ದುರ್ಗಣ
ನಾಯಕರು ಕ್ರೋಧಾದಿಪರಿಜನ
ರಾಯುತನ ವೆಗ್ಗಳಿಸಿತಖಿಳೇಂದ್ರಿಯದ ಪಡಿಬಲದಿ ॥ ೨೯ ॥

ಎತ್ತಿ ನಡೆದನು ಸಕಲಬಲದಲಿ
ಪೃಥ್ವಿಯೆಡನಿಲ್ಲೆಂಬ ತೆಱನಲಿ
ಹತ್ತುದೆಸೆಯಲಿ ಮೋಹರಿಸಿ ದಳಪತಿಗಳೊಗ್ಗಿನಲಿ।
ಸತ್ತಿಗೆಯು ಸಾಲುಗಳೊಳಂಬರ
ಕೆತ್ತಿದನೆ ಚಾಮರಪತಾಕೆಯು
ಚಿತ್ತಜನು ಬಂದರ್ಹನ ತಪೋವನವ ಮುತ್ತಿದನು ॥ ೩೦ ॥

ಕೆಣಕುವಡೆ ಬರಲರ್ಹ ನಮ್ಮೊಳು
ಹೊಣಕೆಗಿದಿರಹನಲ್ಲ ಮಿಕ್ಕಿನ
ಅಣಿಮಾದಿಗಳೆಂಬಷ್ಟಗುಣದೈಶ್ವರ್ಯ ಬಲಯುತರು।

ಅಣೆದು ಸಮ್ಮುಖದಲ್ಲಿ ನಿಂದಿರೆ
ತ್ರಿಣಯ ಹಿರಿಯಲದೋಡೆ ಮಿಕ್ಕಿನ
ತೃಣಕೆ ಕಡೆಯುಹರೆಂದು ಸಾಱಿದವಲ್ಲಿ ಕಹಳೆಗಳು ॥ ೩೧ ॥

ಅತಿಜಿತೇಂದ್ರಿಯರೆಂಬ ತಪದೊಂ-
ದತಿಶಯದ ಸಂನ್ಯಾಸಯೋಗದ
ವ್ರತಚರಿತಗುಣಶೀಲ ಸತ್ಯಾಚಾರವೆಂಬಿನಿತು।
ಸತಿಯರಂಗೋಪಾಂಗದಿದಿರಲಿ
ಧೃತಿಗೆಡದೆ ಅರೆಘಳಿಗೆ ನಿಂದರೆ
ವ್ರತಿಯಹಿರಿ ಸೀವೆಂದು ಸಾಱಿದವಲ್ಲಿ ಕಹಳೆಗಳು ॥ ೩೨ ॥

ಇನಿತು ಶೌರ್ಯಗಳಿಲ್ಲದೀತನು
ನನೆಗಣೆಯಲೆಚ್ಚಾಡಿ ಲೋಕಕೆ
ಘನತೆಯಹ ಬ್ರಹ್ಮಾದಿಗಳ ಸೆಱೆ ಗೆಲಿದನಹುದೆನುತ।
ಮನದೊಳಗೆ ನಗೆವೆರಸಿ ಅರ್ಹನು
ಮನಸಿಜನ ಉದ್ರೇಕ ಲೋಕವ
ಬಿನುಗುಮಾಡಿಯೆ ಕೆಡಿಸುವೆನು ಎಂದೆನುತಲೀಕ್ಷಿಸುತ ॥ ೩೩ ॥

ಹೆಣ್ಣ ಬಲದಲಿ ಗೆಲುವ ಕಾಮನ
ತಿಣ್ಣವನು ಸೆಱೆ ಮುಱಿವೆನೆನುತವೆ
ಹಣ್ಣಿದನು ಸಂಯಮದ ಬಲದಲಿ ಸಕಲಸೈನಿಕವ।
ಪುಣ್ಯಕೋದಂಡವನು ಪಿಡಿದನು
ತಣ್ಣಿತೆನೆ ಸಂಜೆಯನೆ ಸಿಕ್ಕಿದ
ಬಣ್ಣಗೆಡಿಸಿದ ಕಾಮುಕರ ತಪವಿಲ್ಲ ಜೀವಡೆದ ॥ ೩೪ ॥

ಒಂದೆರಡು ಮೂಱೆನಿಪ ನಾಲ್ಕಱೊ-
ಳೊಂದಿದೈದಾಱೇಳು ಎಂಟಱ
ಮುಂದೆ ನವದಶ ಏಕಾದಶದ್ವಾದಶತ್ರಯೋದಶದ।
ಸಂದಚತುರ್ದಶದ ಪೂರ್ವಗುಣಗ-
ಳೊಂದಿ ಉಗ್ರೋಗ್ರತಾಪಸ-
ವೃಂದವೆಸೆದುದು ಅರ್ಹಪರಮೇಶ್ವರನ ಸೇನೆಯಲಿ (?) ॥ ೩೫ ॥

ಗಣಧರರು ಮೊದಲಾದ ಮುನಿಗಳು
ಗಣನೆಯಿಲ್ಲದ ಗುಣದ ಕಣಿಗಳು
ಅಣುವಿಗಣು ಗುರುವಿಂಗೆ ಗುರುವಾಗಿಹ ಬಲಯುತರು|
* * * *
* * * *
* * * * ||೩೬||

ಯಮನಿಯಮ ಮೊದಲಾದ ಸಂಯಮ
ವಿಮಲಜ್ಞಾನಯೋಗದ
ಸಮಿತಿ ಸಂಹಿತಿ ಸತ್ವಸಾರದ ಸಿದ್ಧಾಂತ| (?)
ಸಮುಚಿತವ್ರತ ಶೀಲಗುಣಗಳು
ಸಮತೆ ಮೊದಲಾದಖಿಲ ಶಾಸ್ತ್ರದಿ
ಸಮರಕಸುವಾಯಿತ್ತು ಪರಮೇಶ್ವರನ ಸೇನೆಯಲಿ ||೩೭||

ತತ್ವ (ಮಿಪ್ಪ)ತ್ತೇಳು ಮಿಾಜಿದ
ಅತ್ಯಧಿಕ ಬಲಯುತರವೊಂದೆಸೆ
ಛತ್ತಿಸಾಗಮಗುಣದ ನಿಪುಣರದೊಂದು ದೆಸೆಯೊಳಗೆ|
ಅತ್ಯಧಿಕ ವ್ರತ ಬ್ರಹ್ಮಚಾರಿಗ-
ಳುತ್ತಮಕ್ಷಮೆಯಾದಿಯಾಗಿರ-
ಲುತ್ತರೋತ್ತರ ಸಿದ್ಧರೊದಗಿದವೊಂದು ದೆಸೆಯೊಳಗೆ ||೩೮||

ಸುರರು ವಿದ್ಯಾಧರರು ಯಕ್ಷರು
ನಿರುತಜ್ಯೋತಿಷ್ಕರು ಸದಕ್ಷರು
ಸುರಪಮೊದಲಾದಖಿಲದಿಕುಪಾಲಕರು ಕಿನ್ನರರು|
ವರಲಕುಮಿ ಜಯಕೀರ್ತಿಧೃತಿಮತಿ-
ಪರಮ ಷೋಡಶ ವಿದ್ಯದೇವಿಯ-
ರಿರಲು ಮುಕ್ತಿವರನ ಸೇನೆಗೆ [ನೆರೆದು] ಬಲವಾಗಿ ||೩೯||

ಘಾತಿಕರ್ಮವ ಗೆಲಿದ ಧೀರನ
ಪ್ರಾತಿಹಾರ್ಯದ ವಿಭವದೊಡೆಯನ
ಜಾತಿಜರೆಮರಣವ ಗೆಲಿದನಂತಬಲಯುತನ|

ಭೂತದಯವಾರಾಶಿಯೆನಿಸಿಯೆ
ಪ್ರೀತಿಯಿಂದವೆ ಜಗವ ಪಾಲಿಪ
ವೀತರಾಗನ ತೋಟಿ ಬೇಡೆಂದೊದಱಿದವು ಕಹಳೆಗಳು || ೪೦ ||

ಅಮರವಂದ್ಯನ ತೋಟಿ ಬೇಡವೊ
ಸಮರದೂರನ ತೋಟಿ ಬೇಡವೊ
ಯಮನ ಮೃತ್ಯುವ ಗೆಲಿದ ಧೀರನ ತೋಟಿ ಬೇಡೆಲವೋ |
ಕುಮತಗಿರಿವರ ವಜ್ರದಂಡನ
ವಿಮಲಕೇವಲಜ್ಞಾನದೊಡೆಯನ
ಸಮತೆಯುಳ್ಳನ ತೋಟಿ ಬೇಡೆಂದೊದಱಿದವು ಕಹಳೆಗಳು || ೪೧ ||

ಇಂತನಂತಚತುಷ್ಟಯದ ಬಲ
ದಂತರವ ನೆಲೆಗೊಳಿಸಿ ಅರ್ಹನ
ಭ್ರಾಂತಿಸಿಂದವೆ ಕಾಮು ಕಲಿತನ ಮಿಕ್ಕಿ ಹಳಚಿದನು |
ಮುಂತೆನೇಱಿಂಟೆಂಬ ಬಿಲ್ಲಿನ
ದಂತರದಲೊಡ್ಡಿದನು ಸಮರವ
ತಿಂತಿಣಿಯ ತಮ ತೆರಳೆ ವೀರರ ಖಡುಗಧಾರೆಯಲಿ || ೪೨ ||

ಧರೆಬಿರಿಯಲಳ್ಳಿಱಿವ ನಿಸ್ಸಾಳ
ಮೊರೆವ ಭೇರಿಯೊಳೊಡೆದುವಂ-
ಬರ ಮುರಜಪಡೆ ಢಕ್ಕೆಗಳ ಧ್ವನಿಯಲಿ ದಿಕ್ಕು ದಿಕ್ಕಗೆಡೆ |
ನೆರೆದ ವೀರರ ಬೊಬ್ಬೆಯಬ್ಬರ
ಬಿರಿದನೂದುವ ಕಹಳೆಯುಗ್ಗಡ
ದುರವಣೆಗೆ ಕೈಮಿಕ್ಕು ಕಲಿಯೇಱಿದನು ಮನಸಿಜನು || ೪೩ ||

ತಾವರೆಯ ತಂತುವಿನ ನಾರಿಯು
ನೀವಿ ಕಬ್ಬಿನ ಬಿಲ್ಲನೇಱಿಸಿ
ಹೂವಿನಂಬನು ಹೊಗರುಗಣೆಯನು ಸುರಿದ ಮನುಮಥನು |
ದೇವನಂಘ್ರಿದ್ವಯಕೆ ಯೆಱಿಗಲು
ಭಾವಜನು ಮನಗುಂದಿ ಸತಿಯರ
ಹಾವಭಾವವಿಲಾಸವಿಭ್ರಮದಿಂದ ನೂಕಿದನು || ೪೪ ||

ಜೋಡ ತೊಟ್ಟನು ಬಲುವ್ರತಂಗಳ
ಜೋಡೆಯರ ನಯನಾಂಶುಧಾರೆಗೆ
ಯಿಾಡಿಱಿಯದಿಹವೆ ಗುರು ಗೆಲಿದ ನಿಸ್ಪೃಹದ ಕುದುರೆಗಳ|
ನೋಡಿ ನಡಸುತ ಎಡಬಲಕೆ ಹಯ
ಪಾಡುಗಳ ತುಸನಾಯುಯೋಗದಿ
ಹೂಡಿ ಶಾಸ್ತ್ರದ ಸರದಿ ಸತಿಯರ ಸೂರ್ಬಲವ ಗೆಲಿದ ||೪೫||

ಮನದೊಳಗೆ ಕಡುಸೊಂದು ಕಾಮನು
ಅನಲಬಾಣವ ಹೂಡಿ ತೆಗೆದೆಸೆ
ತನುಮನಂಗಳ ಮುಸುಕಿ ಕಾಮಜ್ವರದ ಕಾವೇಱೆ|
ಜವನಿಕರ ಜವಗೂಡಿ ತಾಪದ
ತನುವುರಿಯಲಲ್ಲಾಡೆ ತ್ರೈಜಗ
ವನಿಮಿಷಾಧಿಪನೊಡೆಯ ದಯವಾರಿಯಲಿ ನಂದಿಸಿದ ||೪೬||

ಕೆರಳಿ ಮನುಮಥನುರಗಬಾಣವ
ಸರವ ಸುರಿಯಲು ಭೂಮಿಯಂಬರ
ದಿರವು ಹಾವಿನ ಹಗವಿದೆಂಬಂತಾಯ್ತು ನಿಮಿಷದಲಿ|
ಗರುಡಪಂಚಾಕ್ಷರಿಯ ಸರವನು
ಅರುಹಪರಮೇಶ್ವರನು ಸುರಿಯಲು
ಉರಿದವಾಳಿತಳಕೆ ಉರಗನುರುತಗೆ ಹೊಯಿದ ತುಷದಂತೆ (?) ||೪೭||

ಸದರವಾಯಿತೆ ಯೆನುತ ಕಾಮನು
ಮದಗಜದ ಬಾಣವನು ತೆಗೆದೆಸೆ
ವೊದಗಿದವು ದಿಕ್ಕುಗಳೊಳಂಬರದಡಿಯ ತುಳಿಯುತಿರೆ|
ಮದನಹರ ಕೈವಲ್ಯಜ್ಞಾನದ
ಹೊದೆಯ ಕೇಸರಿಯಂಬ ಸುರಿಯಲು
ಬೆದಱಿತೋಡಿದವೆಂಟುದಿಕ್ಕಿಗೆ ಮತ್ತಗಜವ್ರಾತ ||೪೮||

ಸಪ್ತವ್ಯಸನಗಳೆಂಬ ಕುದುರೆಯ
ನೊತ್ತಿ ಸೂಕಿದ ಮರಳಿ ಮನುಮಥ
ನೊತ್ತರಿಸೆ ತುರಗಗಳು ತೊತ್ತಳದುಳಿವುತಿರೆ ಜಗವ|

ಮುಕ್ತಿವರ ಸಮ್ಯಕ್ತ್ವಸಬಳದ
ಲೊತ್ತಿ ನೂಕಲು ತುರಗ ತೆರಳಲು
ಭಕ್ತಿಯಲಿ ಬಣ್ಣಿಸುತಲಮರರು ಅರ್ಹ ಶರಣೆನುತ || ೪೯ ||

ಕಾಮ ಶರಧಿಯ ಬಾಣದಿಂದೆಸೆಯ
ಲಾ ಮಹೇಶ್ವರ ಕಂಡು ಬೇಗದಿ
ತಾ ಮಹಾತಾಪಸದ ವಡಬಾಗ್ನಿಯಲಿ ನಿಲಿಸಿದನೂ |
ತಾಪಸದ ಕತ್ತಲೆಯ ಬಾಣದ
ವ್ಯೋಮಧರಣಿಯ ಮುಸುಕಲಂಗಜ
ಸೋಮಸೂರಿಯರಿದಿರಿನಲಿ ತೆರಳಿಸಿದ ಚಿನುಮಯನೂ || ೫೦ ||

ಸಾಹಸದಲೌಡೊತ್ತಿ ಕಾಮನು
ಮೋಹರದ ಮುಗುಳಂಬ ಸುರಿಯಲು
ಕಾಹುರದ ವೈರಾಗ್ಯದಂಬಿನಲಾ ಧ್ವನಿಯ ನಿಲಿಸಿದನು |
ಊಹೆ ಕೆಟ್ಟಂಗಜನು ಮರಳಿದ
ಮೋಹರಕೆ ಯಿದಿರಾಗಿ ಸತಿಯರು
ಬಾಹಿರಂಗದ ಒಳಕೆಯಲಿ ಕೆಣಕಿದರು ಮುನಿವರರಾ || ೫೧ ||

ಯತಿಗಳಿಗೆ ಅಲಗಣೆಯು ತೋಱುತ
ಬ್ರತಿಗಳಿಗೆ ಬಳಿಸೇಣನಿಕ್ಕುತ
ಅತಿಶಯದ ಯೋಗಿಗಳ ಮುನಿಗಳ ಬೆರಳನೇಳಿಸುತಾ |
ಅತುಳತಾಪಸರ ಚಿತ್ತದ
ಧೃತಿಯ ಬೆಂಡೇಳಿಸುತ ಕಾಮನು
ರಥಕೆ ಕಾಲಾಳೆನಿಸಿ ಕವಿದನು ಮುನಿಗಳಿದಿರಿನಲಿ || ೫೨ ||

ಹುಸಿನಗೆಯ ನಸುನೋಟ ಸನ್ನೆಯೊ
ಳೆಸೆವ ಚದುರಿನ ಮೋಹ ಮೃದುನುಡಿ
ಪಸರಿಸುವ ಲಲ್ಲೆಗಳ ಚಲ್ಲದ ಕೈದುಗಾತಿಯರು |
ದೆಸೆಗೆಡಿಸುವಂತೆಯ್ದೆ ನಿಂತರು
ವಿಷರುಹನ ಸಜನಿದಿರೆ ತಮದೊ-
ಡ್ಡೆಸಕದಂತಿರೆ ಮುಱಿಯೆ ಮುನಿಗಳು ಮೋಸಚಕ್ರದಲಿ || ೫೩ ||

ಉಡುವೊಡಾದುದು ದಿಕ್ಕು ದೇಹಕೆ
ತೊಡುವೊಡಾದುದು ಮಲಿನಭೂಷಣ
ವೊಡಲಿಗುಣಲಾದುದು ಹಲವು ಕಾಲದಲಿ| (?)
ಮಡದಿಯುರ ಮನ್ನಣೆಗೆ ಸಲ್ಲದೆ
ಅಡವಿಯೊಳಗೆ ಅನಾಥನಾಗಿಹೆ
ತೊಡಕಿದೈ ಕೋಟಿಯುಸು ಯೆನ್ನೊಡನೆಂದ ರತಿಪತಿಯೂ || ೨೪ ||

ಕುಲಛಲದ ಅಭಿಮಾನಕೀರ್ತಿಯ
ನೆಲೆಯ ನೀಗಿದೆ ಮನದ ಬಯಕೆಗೆ
ಹಲವು ವರ್ಣವ ಚರಿಸಿ ಲಜ್ಜೆಗೆ ಸೆಜ್ಜೆಯಾಗಿರ್ದೆ |
ಹೊಲಬುಗೆಡಿಸಿದೆ ಮೂಱುಲೋಕದ
ಬಲುಭಟರಸೆಂಬಗ್ಗಳಿಕೆಯಲಿ
ಉಲಿಯದಿರು ಪ್ರದ್ಯುಮ್ನಎಂದರು ಸಕಲಮುನಿವರರು || ೨೨ ||

ಅಸುರದ ಕೋಪದಲಿ ಕಾಮನು
ಸೂಸಿದನು ವಸಿಕರಣದಂಬನು
ಸಾಸಿರಕೆ ಲಕ್ಷವನು ಕೋಟಿಗಳೆಂಬ ಸಂಖ್ಯೆಯಲಿ |
ಈಸುರನ ಕಂಡಾಗ ಕಡೆದನು
ಬೇಸಱದೆ ಅವಶ್ಯಬಾಣದಿ
ಸಾಸಿರಕೆ ಲಕ್ಷವನು ಕೋಟಿಗೆ ನಿರ್ಬುದವದೆಂದೆನಲು || ೨೬ ||

ಕಡುಮುಳಿದು ಮನುಮಥನು
ಅಡಹಡಿಸಿ ಪಾಶದಲಿ ಕಟ್ಟಲು
ಜಡಗಿಸಲಿ ರತಿವೆರಸಿ ಬರೆ ಕಂಡಾ ಮಹೇಶ್ವರನು |
ಝುಡಿದು ಶುಕ್ಲಧ್ಯಾನಖಡ್ಗದಿ
ಹೊಡೆದನಾ ಪಾಶವನು ರಥವನು
ಹುಡಿಹುಡಿಯ ಮಾಡಿದೊಡೆ ಮನುಮಥ ವಿರಥನಾಗಿರ್ದ || ೨೭ ||

ಆಕರುಷಣದ ಮೋಹವಶ್ಯದ
ನೇಕ ವಿದ್ವೇಷಣದ ಸ್ತಂಭನ
ನೂಕಿದವು ಉಚ್ಚಾಟನದ ಮಂತ್ರವಿದ್ಯೆಯಲಿ| (?)

ಲೋಕವಮೂಱಱ ತುದಿಯಲಿಹ ಜಗ-
ದಾಕೆವಾಳನ ಮುಟ್ಟಬಲ್ಲವೆ
ಕಾಕ ಬಳಸದಿರೆನುತ ಹೋದುದು ಧರ್ಮಚಕ್ರವದು || ೫೮ ||

ಮರುಳು ಮನುಮಥ ನಿನ್ನ ಕೈದು
ಆರಳಸರ ನನೆವಿಲ್ಲು ಮೃಣಾಲದ
ತಿರುವನೇಱಸಿದೆಸುಗೆಗಂಜುವನೇ ಮಹೇಶ್ವರನು |
ಹಿರಿಯ ವಜ್ರ ನಾರಾಚಸಂಹನ
ನರಿದೆನಿಪ ಶ್ರೀಯಂಗದರ್ಶನ
ಪರಿಯನಱಯದೆ ತೊಡಕಿದೆಂದರು ಸಕಲಮುನಿವರರು || ೫೯ ||

ಪರಿವ ಜಲ ಮರಮೊದಲು ಸೋನೆಯು
ಸುರಿವ ಮಳೆ ಬಿಱುಗಾಳಿಗಲಸದೆ
ಧರೆಯ ಹೇಮಂತದಲಿ ರಾತ್ರಿಯ ಪ್ರತಿಮೆಯೋಗದಲಿ |
ಉರಿವ ಬೇಸಗೆಯೊಳಗೆ ಬೆಟ್ಟದ
ಪಿರಿಯ ಕೋಡುಂಗಲ್ಲು ಶಿಲೆಯನು
ಧರಿಸೆ ವರರುಳಂಬಿಗಳುಕರು ತೆರಳುತೆರಳೆನುತ (?) || ೬೦ ||

ನೂಕಿದರು ಮುನಿವರರು ನಮ್ಮಯ
ಆಕೆವಾಳನು ಅರ್ಹ ನೋಡಲಿ
ಸಾಕು ನಿನ್ನಯ ಗೆಲುವ ಒವರಮನೇತಕೆಮಗೆನುತ |
ನಾಕುದೆಸೆಯಲಿ ಕವಿದು ನಿಂದರ
ನೇಕತಾಪಸದುಗ್ರಘೋರದ
ತೂಕವಡೆದ ಸಮಾಧಿಯೋಗದ ಸಕಲಕೈದಿನಲಿ || ೬೧ ||

ಉರಿವ ಹೊಗೆ ಮಸೆದಸಿಯ ಧಾರೆಯ
ಕರಗಸದ ಕತ್ತರಿಯ ಗಂಟಲ
ದಿರವಿನಗ್ರದಲರ್ಘ ತಪದುನ್ನತಿಯ ಪರಿಶ್ರಮದ |
ಸಿರಿದುಪಾಸದ ನೀರಗಲೆಯೋ
ಲರಿದೆನಿಪ ತೀವ್ರೋಪಸರ್ಗದ
ಉರವಣೆಯ ಹೋಲಿಂಗೆ ಮನುಮಥ ನೈಮಱದು ನಿಂದ || ೬೨ ||

ಕಾಮಕ್ರೋಧದ ಮಾಯಮೋಹದ
ಸೀಮೆ ಚತುರಾಧ್ಯಾಯವದರೊಳು
ಸಾಮ ಸಂಚಲ ಲಂಚ ವಂಚನೆ ಲಂಪಟವದೆನಿಪ|
ಭೂಮಿಲಂಬದ ಭಟರ ನೆರದಲಿ
ಕಾಮನಿಂದನು ಮತ್ತೆ ಸಮರಕೆ
ಸೋಮ ಸೂರ್ಯರನಿದಿರಿನಲಿ ತೆರಳಿಸಿದ ಚಿನುಮಯನು ||೬೩||

ಮರಮೊದಲು ಪರಿವೊನಲು ಬೆಟ್ಟದ
ಪಿರಿಯ ಕೋಡುಂಗಲ್ಲು ಬೇಸಗೆ
ಸುರಿವ ಮಳೆ ಹಿಮದೊಳಗೆ ಕಂದಿಯೆದದೆ (?) ದೇಹ|
ಪೊರೆದಮಣು ನಿರ್ವಾಣ ನಿರಾಯುಧ (?)
ಹಿರಿಯ ಮುನಿಬಲ ನಿನಗೆ ನೆರವೆ
ಅರುಹ ಮೈದೋಱಸುತ ಮೂದಲಿಸಿದನು ರತಿಪತಿಯು ||೬೪||

ತಳಿತ ವನದಾವರೆಯು ಅಳಿಗಿಳಿ
ಗಳಪ ಕೋಗಿಲೆ ಗಂಧವಾಹನ
ಹೊಳೆವ ಸತಿನಳಿನಾಕ್ಷಿಯರ ಮೈವಳಿಯ ಖಗಮೃಗದ|
ಬಳಗ ಬಲುಬಲವೆಂದು ಪೆರ್ಮೆಯೊ
ಳಳುಕದಿದಿರಲಿ ನಿಂದು ಜಯಿಸಿದ
ಬಳಿಕ ಪರಮೇಶ್ವರನಸಟಿಸುವದೆಂದು ಮುನಿವರರು ||೬೫||

ಯೋಗದಂದದೊಳಣೆದು ಪವನವ
ಲಾಗಿನಲಿ ಹೊಯಿದೆತ್ತಿ ಮೂರ್ಛೆಯೊ
ಬೇಗ ಚಪ್ಪರಣೆಯಲಿ ವಂಚಿಸಿ ಮನವಸೊಡೆ ಹಾಯ್ದಾ|
ಆಗಲವರೊಗ್ಗಾಗಿ ಸಮತೆಯ
ಸಾಗರದಲದ್ದಿದನು ಸಮರವ
ಮೂಗು ವಟ್ಟರ್ದುಕೊಂಡನು ಚಾಪಮಾರ್ಗಣವ (?) ||೬೬||

ಮೋಹ ಮುಗ್ಗಿತು ನೇಹ ನೆಗ್ಗಿತು
ಕಾಹುರದ ಇಂದ್ರಿಯವು ತಗ್ಗಿತು
ಸಾಹಸದ ಬಲವಳಿದು ಕಳವಳಿಸಿದನು ಕಂದರ್ಪ|

ಊಹೆಗೆಟ್ಟಂಗಜಸು ಮರಳಿದ
ಡಾಹವಕೆ ಯಿದಿರಾಗಿ ಸತಿಯರು
ಬಾಹಿರಂಗದ ಒಳಕೆಯಲಿ ಕೆಣಕಿದರು ಮುನಿವರರ ॥ ೬೭ ॥

ಆಯುಧವನುಳಿದಾತನನ್ಯರ
ನೋಯಿಸುವ ತಾನಲ್ಲ ಮಿಕ್ಕಿನ
ಕಾಯಲೋಸುಗವಂಜಿ ಕೈದುವ ಪಿಡಿದಿಹನು ಅಲ್ಲ।
ದಾಯಿಗರು ಯಿದಿರಿಲ್ಲದಾತಗೆ
ಸಾಹಸದ ಬಲುಚಿಂತೆ ಯಾವುದೊ
ಆಯುಷದಿ ನೆಱೆದಂಗೆ ಮರಣದ ಭೀತಿಯಿಲ್ಲೆಂದ ॥ ೬೮ ॥

ಈ ಚತುರ್ದಶ ಭುವನ ಜನಗಳ
ನೀಚವೃತ್ತಿಯೊಳಿಯ್ದೆ ಗೆಲ್ದಪೆ
ಸಾಚಿತಾನಂದೈಕ ಚಿನುಮಯ ನಿನಗೆ ಸೋಲುವನೆ।
ನಾಚಿಕೆಯನುಳಿದಿನ್ನು ವಂದಿಸು
ಖೇಚರಾಧಿಪನೊಡೆಯನರ್ಹನ
ನಾಚಿಸದೆ ಮರಳೆಂದು ಅಭಯವನೀಯೆ ಮುನಿವರರು ॥ ೬೯ ॥

ಮರುಳು ಮನುಮಥ ಧರೆಯ ಮನುಜರ
ಪರಿಭವಿಸಿ ನೆಱೆ ಗೆಲಿದ ಗರ್ವದಿ
ಅರುಹಪರಮೇಶ್ವರನ ತೊಡಕಿ ಅನಂಗನೆನಿಸಿದನು।
ಜಿರಿದ ಬಿಡು ಮಕರಧ್ವಜನೆ ನುಡಿ
ಅರುಹಪದಯುಗಕೆಱಗು ನಿನ್ನಯ
ಮರಕೆ ಮರಳೆಂದೆನುತ ಅಭಯವನೀಯೆ ಮುನಿವರರು ॥ ೭೦ ॥

ಮಾನಿನಿಗೆ ಮೊಲಿದರ್ಗೆ ಮುನ್ನಭಿ-
ಮಾನಹಾನಿಯು ಜಿಡದು ಭವಭವ
ಮಾನಭಂಗಕೆ ಬಂದವರ್ಗಿನ್ನೆಂಟೆ ಗರುವಿಕೆಯು।
ಮಾನಿನಿಯ ನೆಱೆ ತೊಱೆದು ಸಕಲ-
ಜ್ಞಾನಿಯೆನಿಸಿದ ಸಕಲಗುಣದಭಿ
ಮಾನನಿಧಿಯೆಂದೆಂಬ ಅರ್ಹನ ಪದಕೆ ಶರಣೆನ್ನು ॥ ೭೧ ॥

ಜೀವದಯುಸೆಂದೆಂಬ ಸುಡಿಯದು
ಭೂವಳಯ.ದೋಳಗೆಯ್ದೆ ಪರ್ವಿತು
ದೇವಯೆನ್ನಯ ಜೀವಕುಪಹತಿ ಮಾಡಿದೊಡೆ ಮತ್ತೆ।
ಭೂವಳಯವೆಲ್ಲಿ ಬುದು ಮಿಕ್ಕಿಸ
ದೇವಗತಿಯೆಲ್ಲಿಖುದು . . .
ದೇವಮಾನಸಮೋಕ್ಷವೆಲ್ಲಿಯದೆಂದ ರತಿಪತಿಯು || ೭೨ ||

ಎಸಲು ಮನದೊಳು ಮೆಚ್ಚಿಯರ್ಹಸು
ಮನಸಿ(ಜ)ಗೆ ಯೊಲಿದಿತ್ತಸಭಯ(ವ)
ಮುನಿವರರಿಗಸುಚಿತವ ಮಾಡದಿರೆಸುತ ಮರಳಿಸಿದ।
ಜಿನಪದಾಂಬುಜಭಕ್ತರಿಗೆ
ಬಿಸುಗು ಬಯುಕೆಯುನೆಣಿಸದಿರು ಯೆಂ
ದೆಸುತ ರತಿಯುವ್ಮಳವ ತಿಳುಹಿದನು ವಿನಯದಲಿ || ೭೩ ||

ಚದುರಿಗನ ಚಾತುರ್ಯವಡಗಿತು
ಹೆದಱಿದರು ಹಕ್ಕಣದ ಚಾಣರು
ಮದವುಳಿದು ಕಾಮುಕರು ಕಳವಳಿಸಿದರು ಕಂಗೆಟ್ಟು।
ಬೆದಱಿ(ದ)ರು ವಾದಿಗಳು ಜಿಂಕವ
ಕೆದಱಿದರು ಕೆಲರಱಿತ ದರ್ಬಪಿ
ಲದಿರುತಿರ್ದರು (?) ತ್ರಿಜಗದರ್ಹನ ತಪದ ಬಲ್ಮೆಯಲಿ || ೭೪ ||

ಅರ್ಥಿಯಲಿ ರತಿಕಾಮುಸೆನಿಸಿಯೆ
ವ್ಯರ್ಥಮಾಡಿದೆ ಸಕಲ ಜನಗಳ
ಉತ್ತಮಾಧಮರೆನ್ನದತಿಚಾರದಲಿ ಗತಿಗೆಡಿಸಿ।
ಪೃಥ್ವಿಯಲಿ ಸೆಱೆ ಸಿಂದ್ಯನಾಗದೆ
ಸಾರ್ಥದಲಿ ಜಿನದೀಕ್ಷೆವಡೆ ನೀ
ಮುಕ್ತಿಕಾಮುಸುವಾಗೆನುತ ಮುನಿವರರು ಕಳುಹಿದರು . || ೭೫ ||

ಸುರರು ಸುರಿದರು ಪುಷ್ಪವರ್ಷವ
ಮೊರೆದುದೆಣ್ದೆಸೆಯೊಳಗೆ ದುಂದುಭಿ
ನೆರೆದುದಾಕಾಶದಲಿ ಮುಕ್ಕೊಡೆ ಅಷ್ಟಮಂಗಲವು।

ಹರುಷದಲಿ ಗುಡಿಗಟ್ಟಿ ನಾರದ
ವರಮುನೀಂದ್ರರು ಪೊಗಳುತಿರ್ದರು
ಅರುಹಪರಮೇಶ್ವರನು ಮದನನ ಗೆಲಿದ ವಿಭವದಲಿ || ೭೭ ||

ಆದಿಪರಮೇಶ್ವರನು ಕರುಣಮ-
ಹೋದಧಿಯ ಸರ್ವಾತ್ಮಹಿತವನು
ಕಾದಿದನುಯೆಂದೆಂಬ ನುಡಿ ತ್ರೈಜಗಕೆ ಪಸರಿಸಿತು |
ವಾದಿಸದೆ ಕೇಳುವುದು ಸುಜನರು
ಆದಿ ಸಿದ್ಧನ ಸ್ತುತಿಯ ರಚನೆಯ
ಮೇದಿನಿಯೊಳಿದ **ನಾಗಚಂದ್ರ**ನು ಒಲಿದು ವಿರಚಿಸಿದ || ೭೭ ||

ಸಮಾಪ್ತ

# ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ

ಬೆಲೆ: ಕ್ಯಾಲಿಕೊ ರೂ. ೧—೪—೦, ಸಾದಾ ೧೨ ಆಣೆ.

ಪ್ರಧಾನಸಂಪಾದಕರು : ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

೧. **ಹರಿಶ್ಚಂದ್ರಕಾವ್ಯ ಸಂಗ್ರಹ** (ತೃತೀಯ ಮುದ್ರಣ)—ಸಂಪಾದಕರು : ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ಮತ್ತು ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.

೨. **ಕರ್ಣಾಟಕ ಕಾದಂಬರೀ ಸಂಗ್ರಹ**—ಸಂಪಾದಕರು : ಟಿ. ಎಸ್. ವೆಂಕಣ್ಣಯ್ಯ, ಎಂ.ಎ.

೩. **ಪ್ರಭುಲಿಂಗಲೀಲೆಯ ಸಂಗ್ರಹ** (ಸಚಿತ್ರ)—ಸಂಪಾದಕರು : ಎಂ. ಎಸ್. ಬಸವಲಿಂಗಯ್ಯ, ಎಂ.ಎ., ಬಿ.ಎಲ್. ಮತ್ತು ಎಂ. ಆರ್. ಶ್ರೀನಿವಾಸ ಮೂರ್ತಿ, ಬಿ.ಎ.

೪. **ಸಾಕ್ರೆಟೀಸನ ಕೊನೆಯ ದಿನಗಳು**(ಸಚಿತ್ರ)—ಅನುವಾದಕರು: ಎ. ಎನ್. ಮೂರ್ತಿರಾವ್, ಎಂ.ಎ.

೫. **ಶ್ರೀರಾಮಕೃಷ್ಣ ಪರಮಹಂಸ**—ಲೇಖಕರು : ಕೆ. ವಿ. ಪುಟ್ಟಪ್ಪ, ಎಂ.ಎ.

೬. **ರವೀಂದ್ರನಾಥ ಠಾಕೂರರು** (ಸಚಿತ್ರ)—ಲೇಖಕರು : ಮಾಸ್ತಿ ವೆಂಕಟೇಶ ಐಯಂಗಾರ್, ಎಂ.ಎ.

೭. **ಆರೋಗ್ಯ ಅದರ ಜ್ಞಾನ ಮತ್ತು ಸಾಧನ** (ಸಚಿತ್ರ)—ಲೇಖಕರು : ಜಿ. ಎ. ಈಶ್ವರ ಮೂರ್ತಿ, ಬಿ.ಎ., ಎಲ್.ಎಂ.ಎಸ್., ಬಿ.ಎಸ್.ಎಸ್‌ಸಿ.

೮. **ಪಂಪರಾಮಾಯಣ ಸಂಗ್ರಹ**—ಸಂಪಾದಕರು : ಆಸ್ಥಾನ ಮಹಾ ವಿದ್ವಾನ್ ತಿರುವಳ್ಳೂರ್ ಶ್ರೀನಿವಾಸರಾಘವಾಚಾರ್ ಮತ್ತು ಡಿ. ಎಲ್. ನರಸಿಂಹಾಚಾರ್, ಎಂ.ಎ.

೯. **ಹಣ ಪ್ರಪಂಚ**—ಲೇಖಕರು : ವಿ. ಸೀತಾರಾಮಯ್ಯ, ಎಂ.ಎ.

೧೦. **ಸಂಸ್ಕೃತ ನಾಟಕ**—ಲೇಖಕರು : ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.

೧೧. **ಜೀವವಿಜ್ಞಾನ**—ಲೇಖಕರು : ಬಿ. ವೆಂಕಟನಾರಾಯಣಪ್ಪ, ಎಂ.ಎ.

೧೨. **ಹಿಂದೂದರ್ಶನಸಾರ**—ಲೇಖಕರು : ಮಹಾಮಹೋಪಾಧ್ಯಾಯ ಪಂಡಿತ ರತ್ನಂ ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರು.

೧೩. **ರಾಜನೀತಿ**—ಲೇಖಕರು : ಎಚ್. ಕೃಷ್ಣರಾವ್, ಎಂ.ಎ.

೧೪. **ಹದಿಬದೆಯ ಧರ್ಮ**—ಸಂಪಾದಕಿಯರು: ಡಿ. ಚಂಪಾಬಾಯಿ, ಎಂ.ಎ.

೧೫. **ಪುರಾಣನಾಮ ಚೂಡಾಮಣಿ**—ಲೇಖಕರು : ಬೆನಗಲ್ ರಾಮರಾವ್, ಎಂ.ಎ., ಎಲ್ ಎಲ್.ಬಿ., ಮತ್ತು ಪಾನ್ಯಂ ಸುಂದರಶಾಸ್ತ್ರಿ, ಬೆಲೆ, ರೂ.೩-೪-೦

೧೬. ಯಶೋಧರ ಚರಿತ್ರೆಯ ಸಂಗ್ರಹ—ಸಂಪಾದಕರು: ಕೆ. ಎ. ರಾಘವಾಚಾರ್, ಎಂ.ಎ., ಬಿ.ಟಿ.

೧೭. ಗ್ರೀಕರ ತತ್ವಶಾಸ್ತ್ರಸಾರ ಸಂಗ್ರಹ—ಲೇಖಕರು: ಕೆ. ಆರ್. ಶ್ರೀನಿವಾಸ ಅಯ್ಯಂಗಾರ್, ಎಂ.ಎ.; ಬೆಲೆ, ಸಾದಾ ರೂ. ೧—೦—೦.

೧೮. ಹಿಂದೂ ದೇಶದ ಭೂಚರಿತ್ರೆ—ಲೇಖಕರು: ವೈ. ನಾಗಪ್ಪ, ಎಂ.ಎಸ್‌ಸಿ.

೧೯. ವಚನಧರ್ಮಸಾರ—ಲೇಖಕರು: ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಎ.

ಕ್ಯೂರೇಟರ್,
ಓರಿಯೆಂಟಲ್ ಲೈಬ್ರರಿ, ಮೈಸೂರು.

# ಪ್ರಬುದ್ಧ ಕರ್ಣಾಟಕಕ್ಕೆ ವಿನಿಮಯವಾಗಿ ಬರುವ ಪತ್ರಿಕೆಗಳು

## ಇಂಗ್ಲಿಷ್ ಪತ್ರಿಕೆಗಳು

*Annals of the Oriental Research Institute*, University, Madras; *Bramhavidya*, Adyar, Madras; *Bulletin of the School of Oriental Studies*, London; *Journal of the Andhra Historical Research Society*, Rajahmundry; *Journal of the Karnataka Historical Research Society*, Dharwar; *Quarterly Journal of the Mythic Society*, Bangalore; *The Indian*, P.E.N.; *Annals of the Venkateswara Oriental Institute*, Tirupathi; *The Jaina Siddhantha Bhaskara and the Jaina Gazette*, Arrah; *Bulletin of the Deccan College Research Institute*, Poona; *Publication of the Kannada Research Office*, Dharwar; *Fergusson College Magazine*, Poona; *Karnataka College Miscellany*, Dharwar; *The Journal of the Literary Committee of the L.E. Association*, Dharwar.

## ವಾರಪತ್ರಿಕೆಗಳು

'ಒಕ್ಕಲಿಗರ ಪತ್ರಿಕೆ', ಬೆಂಗಳೂರು; 'ಕನ್ನಡ ನುಡಿ', ಬೆಂಗಳೂರು; 'ಕಂಠೀರವ', ಮಂಗಳೂರು; 'ತರುಣಕರ್ನಾಟಕ', ಹುಬ್ಬಳ್ಳಿ; 'ತಾಯಿನಾಡು', ಬೆಂಗಳೂರು; 'ನವಸಂದೇಶ', ಬಳ್ಳಾರಿ; 'ರಾಷ್ಟ್ರಬಂಧು', ಮಂಗಳೂರು; 'ವಿಶ್ವಕರ್ಣಾಟಕ', ಬೆಂಗಳೂರು; 'ಸ್ವದೇಶಾಭಿಮಾನಿ', ಮಂಗಳೂರು.

## ಮಾಸಪತ್ರಿಕೆಗಳು

'ಅಧ್ಯಾತ್ಮ ಪ್ರಕಾಶ', ಹೊಳೇನರಸೀಪುರ; 'ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ' (ತೆಲುಗು), ಕಾಕನಾಡ; 'ಕತೆಗಾರ', ಬೆಂಗಳೂರು; 'ಕನ್ನಡ ಸಹಕಾರಿ', ಮಂಗಳೂರು; 'ಜಯಕರ್ನಾಟಕ', ಧಾರವಾಡ; 'ಜಯಂತಿ', ಧಾರವಾಡ; 'ಭಾರತಿ' (ತೆಲುಗು), ಮದರಾಸು; 'ಮೈಸೂರು ವ್ಯವಸಾಯ ಶೋಧಕ ಸಂಘದ ಪತ್ರಿಕೆ', ಬೆಂಗಳೂರು; 'ಮಕ್ಕಳ ಪುಸ್ತಕ', ಬೆಂಗಳೂರು; 'ಮೈಸೂರು ಸಹಕಾರ ಪತ್ರಿಕೆ', ಬೆಂಗಳೂರು; 'ವಿದ್ಯಾದಾಯಿನಿ', ಮೈಸೂರು; 'ವಿಮಾ ವಾಣಿಜ್ಯ', ಬೆಂಗಳೂರು; 'ವಿವೇಕಾಭ್ಯುದಯ', ಮೈಸೂರು; 'ಶರಣಸಾಹಿತ್ಯ', ಬೆಂಗಳೂರು; 'ಶಿವಾನುಭವ', ಬಿಜಾಪುರ; 'ಸದ್ಬೋಧಚಂದ್ರಿಕೆ', ಅಗಡಿ; 'ಸರಸ್ವತಿ', ಬೆಂಗಳೂರು; 'ಸುದರ್ಶನ', ಮೈಸೂರು; 'ಸುಬೋಧ', ಬೆಂಗಳೂರು; 'ಜೀವನ', ಧಾರವಾಡ; 'ಕಥಾಂಜಲಿ', ಬೆಂಗಳೂರು; 'ವಿಭೂತಿ' (ತೆಲುಗು), ಸಿಕಿಂದ್ರಾಬಾದು; 'ಕಥಾವಳಿ', ಬೆಂಗಳೂರು.

## ತ್ರೈಮಾಸಿಕ ಪತ್ರಿಕೆಗಳು

'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ', ಬೆಂಗಳೂರು; 'ಗರಿಕೆ', ಮೈಸೂರು; 'ದೇಶೀಯ ವಿದ್ಯಾಶಾಲಾ ಪತ್ರಿಕೆ', ಬೆಂಗಳೂರು; 'ಭಾರತ ಇತಿಹಾಸ ಸಂಶೋಧನ ಮಂಡಲದ ಪತ್ರಿಕೆ' (ಮರಾಠಿ), ಪೂನಾ; 'ಶ್ರೀಮನ್ ಮಹಾರಾಜ ಸಂಸ್ಕೃತ ಮಹಾಪಾಠಶಾಲಾ ಪತ್ರಿಕಾ,' ಮೈಸೂರು.

## ಗ್ರಂಥಮಾಲೆ

'ಮನೋಹರ ಗ್ರಂಥಮಾಲೆ', ಧಾರವಾಡ; 'ಮಿಂಚಿನಬಳ್ಳಿ', ಧಾರವಾಡ.

